# ಈವರೆಗಿನ ಕೈಹೊತ್ತಿಗೆಗಳು

| | | |
|---|---|---|
| ೧. | *ಗೃಹಲಕ್ಷ್ಮಿ .... | ಅ. ನ. ಕೃ. |
| ೨. | *ಮಲ್ಲಿ ... | ದೇವುಡು |
| ೩. | *ವಿಮೋಚನೆ ... | ನಿರಂಜನ |
| ೪. | *ಪರದೇಶಿ ... | ಕುಲಕರ್ಣಿ ಬಿಂದುಮಾಧವ |
| ೫. | *ಸ್ವರ್ಣರೇಖೆ .. | ವೀರಕೇಸರಿ |
| ೬. | *ಅಪಸ್ವರ ... | ತ್ರಿವೇಣಿ |
| ೭. | *ರಾಯರು ಕಂಡ ರಂಗು ... | ಬೆಳ್ಳಿ ರಾಮಚಂದ್ರರಾವ್ |
| ೮. | *ರುಕ್ಮಿಣಿ ... | ಅ. ನ. ಕೃ. |
| ೯. | *ವಜ್ರದುಂಗುರ ... | ನಾ. ರಾಜಣ್ಣ |
| ೧೦. | *ಕೇದಿಗೆ ವನ ... | ತ. ರಾ. ಸು. |
| ೧೧. | *ಸಮಾಜ ಗರ್ಭದಲ್ಲಿ ... | ಸಿ. ಬಿ. ಚಂದ್ರಶೇಖರ್ |
| ೧೨. | ತೀರಿದ ಆಸೆ . | ಸೇವ ನಮಿರಾಜಮಲ್ಲ |
| ೧೩. | ಪ್ರಕೃತಿ ... | ಶ್ರೀರಂಗ |
| ೧೪. | ಹೊಲ–ಮನೆ ... | ಶ್ರೀಕೃಷ್ಣ ಪಾಟೀಲ |
| ೧೫. | ದೇವದಾಸಿ–ಎಚ್ಚಮನಾಯಕ .... | ದಿವಂಗತ ಕೆ. ಹಿರಣ್ಣಯ್ಯ |
| ೧೬. | ರಾಣೀ ಅಜ್ಞಾತಾ ... | ನವಗಿರಿನಂದ |
| ೧೭. | ಬಯಕೆಯ ಬೆಲೆ .. | ಎಚ್ಚೆಸ್ಕೆ |
| ೧೮. | ರಂಗಮ್ಮನ ವಠಾರ ... | ನಿರಂಜನ |
| ೧೯. | ಗೊಂಡಾರಣ್ಯ ... | ಶಿವರಾಮ ಕಾರಂತ |
| ೨೦. | ಶ್ರೇಯಾಂಸ––ಭಾಗ ೧ .... | ಮಿರ್ಜಿ ಅಣ್ಣಾರಾಯ |

## ಅಚ್ಚಿನಲ್ಲಿ

| | |
|---|---|
| ಶ್ರೇಯಾಂಸ––ಭಾಗ ೨ ... | ಮಿರ್ಜಿ ಅಣ್ಣಾರಾಯ |
| ನಕ್ಷತ್ರಗಾನ ... | ಇಂದಿರಾತನಯ |

---

*ಪ್ರತಿಗಳು ಮುಗಿದಿವೆ.

# ಶ್ರೇಯಾಂಸ

(ಭಾಗ ೧)

ಮಿರ್ಜಿ ಅಣ್ಣಾರಾಯ

ವಾಹಿನಿ ಪ್ರಕಾಶನ
ಜಯಚಾಮರಾಜ ರಸ್ತೆ, ಬೆಂಗಳೂರು-೨

ಮೊದಲನೆಯ ಮುದ್ರಣ :

ಮುಖಚಿತ್ರ :

**ಆರ್. ಜಿ. ಮಧುಸೂದನ್**

ಮತ್ತು

**ಎಸ್. ರಮೇಶ್**

ಮುದ್ರಕರು :

ಎಂ. ಎಸ್. ಚಿಂತಾಮಣಿ, ಬಿ. ಎಸ್‌ಸಿ.,

"ಈಸ್ಟರ್ನ್ ಪ್ರೆಸ್", ಜಯಚಾಮರಾಜ ರಸ್ತೆ,

ಬೆಂಗಳೂರು–೨.

"ಯಾರು ? ಶ್ರೀನಿವಾಸ !"

ಪಡಸಾಲೆಯಲ್ಲಿ ಬಿದ್ದ ನೆರಳನ್ನು ಕಂಡು, ಒಲೆಗೆ ಉರಿ ಹಾಕುತ್ತಿದ್ದ ತಾಯಿ ಸರಸವ್ವ ಕೇಳಿದಳು. ಅವಳಿಗೆ ಉತ್ತರವೇನೂ ಬರಲಿಲ್ಲ. ಗೋಡೆಯ ಮೇಲಿನ ನೆರಳು ಮಾತ್ರ ಸರಿದಾಡಿತು.

"ಅವನೇ ಇರಬೇಕು—ಇಷ್ಟೊತ್ತಿನ ತನಕ ಗಾ[illegible] ಗಳ ಹಿತ್ತಲ ಹಿತ್ತಲ ತಿರಗತಿದ್ದ. ನನ್ನ ನೋಡಿ [illegible] ಹಿಡಿದ ಓಡಿದ, ಕೈಯಲ್ಲಿ ಯಾರ ಯಾವದೋ ನಾಲ್ಕಾರು ಗಿಡ ಹಿಡಿದು ಕೊಂಡು. ಈಗ ಬಂದಿದಾನ ಮನೆಗೆ, ಮಾತಾಡಲಿಕ್ಕೆ ಮುಖ ಎಲ್ಲಿ ಅದ ಅವನಿಗ ?"

ಸ್ನಾನದ ಮನೆಯಿಂದ ತಂದೆ ಬಾಳಪ್ಪ ಗುಡುಗಿದ. ಇಂದು ಚತುರ್ದಶಿ—ಪರ್ವ ತಿಥಿ ಕೆರಳಬಾರದು, ಕೆಟ್ಟ ಮಾತುಗಳನ್ನಾಡಬಾರದು ಎಂಬುದು ಅವರ ಸಂಸ್ಕೃತಿಯಾದುದರಿಂದ ಮಾತುಗಳು ಸೌಮ್ಯವಾಗಿದ್ದುವು. ಆದರೆ ಮಾನವ ಸ್ವಭಾವವು ಸಂಸ್ಕೃತಿಯನ್ನು ಒತ್ತಿಟ್ಟು ಹೊರ ಹೊಮ್ಮುತ್ತಿತ್ತು, ತನ್ನ ಪ್ರಭಾವವನ್ನು ಬೀರುತ್ತಿತ್ತು. ಅದು ಮೈಯುಜ್ಜಿಕೊಳ್ಳುವ ರೀತಿಯಲ್ಲಿ, ನೀರು ಹಾಕಿಕೊಳ್ಳುವ ರೀವಿಯಲ್ಲಿ ಎದ್ದು ಕಾಣುತ್ತಿತ್ತು. ಇದನ್ನರಿತ ಸರಸವ್ವ ಕೂಡಲೆ ಜಳಕದ ಮನೆಗೆ ಹೋಗಿ, ನೀರೊಲೆಯನ್ನು ಊದಿ ಊದಿ ಹೊತ್ತಿಸತೊಡಗಿದಳು. ಆರಿದ ಒಲೆಯಿಂದ ಎದ್ದ ಹೊಗೆಯನ್ನು ಉಣ್ಣುತಿರಲು ತನ್ನ ಪತಿದೇವರಿಂದ ಮನೆಯಲ್ಲಿ ಹಬ್ಬದ ದಿವಸ ಇನ್ನಷ್ಟು ಹೊಗೆ ಏಳಬಾರದೆಂದು ಅವಳ ಎಚ್ಚರಿಕೆಯಾಗಿದ್ದಿತು.

ಬಾಳಪ್ಪನ ಮಾತು ಮುಂದುವರಿಯಿತು. ಕೇಳಲಿಕ್ಕೆ ಹೆಂಡತಿಯೊಬ್ಬಳು ಹತ್ತರವಿದ್ದ ಮೇಲೆ ಅದು ತಡೆದು ನಿಲ್ಲುವುದೇಕೆ ?

"ಎಲ್ಲೀs, ಫಕೀರ ಇದ್ದಾನೋ ಏನೋ ಹಿಂದಿನ ಜನ್ಮದೊಳಗ. ಹಬ್ಬದ ದಿನ; ಮುಂಜಾನೆ ಎದ್ದು, ಜಳಕ ಮಾಡಿ, ಬಸದಿಗೆ ಹೋಗಿ ಬಂದು, ಏನೂ ಕೇಳಬೇಡ. ಹನ್ನೆರಡು ಮನೆ ಹಿತ್ತಲೊಳಗ ಗಿಡ ಬಳ್ಳಿ ಕಿತ್ತ್ರತ ತಿರಗತಾನ. ಐದನೆಯ ಇಯತ್ತೆ ಕಲಿತ ಅಂತ. ಯಾತಕ್ಕೋ ? ಇಬ್ಬನಿ ಏನ ಬಿದ್ದದ, ಮೇಲೆ ಮಂಜು ಏನ ಮುಸುಕೇದ ಅಂಥವರೊಳಗ ಕೈ ಕೆಸರ ಕಾಲ ಕೆಸರ ಮಾಡಿಕೊಂಡು ತಿರಗತಿದ್ದಾನ....ಏನ ಹುಚ್ಚ ಇದ್ದಾದಾನ ಅನ್ನುವೆ ನಾ. ನೆರೆ ಹೊರೆಯ ಹುಡುಗರು ಇಷ್ಟರೊಳಗ ಜಳಕ ಮಾಡಿ ಬಸ್ತಿಗೆ ಹೋಗಿ ಬಂದರು."

"ಒಂದಕ್ಕ ಹತ್ತಿದರ ಅದಕ್ಕs ಹತ್ತಿಕೊಂಡು ಬೀಳೋದೇನು....?" ಸರಸಪ್ಪ ಊದುತ್ತ ಊದುತ್ತ ನಡುವೆ ಉಸಿರು ತಕ್ಕೊಂಡು, ಮೆಲ್ಲನೆ ಪತಿಗೆ ನುಡಿದಳು.

ಪಡಸಾಲಿಯಲ್ಲಿ ಯಾರೋ ಸಿಚ್ಚಣಿಕೆಯನ್ನು ಹತ್ತಿದ ಸದ್ದಾಯಿತು. ಇಲ್ಲಿಯವರೆಗೆ ತಂದೆಯ ಮಾತನ್ನು ಕೇಳುತ್ತ ನಿಂತ ಶ್ರೇಯಾಂಸ ಅಟ್ಟದ ಮೇಲೆ ಏರಿ ಹೋಗಿರಬೇಕು. ಹೊರಗಿನಿಂದ ಅವನ ಸೋದರತ್ತೆ ಸುಂದರವ್ವ ಬಂದುದು ಅದಕ್ಕೆ ಕಾರಣವಾಯಿತು. ದೇವದರ್ಶನದಿಂದ ಬಂದು, ಮನೆಯೊಳಗೆ ಇದೀಗ ಕಾಲಿಕ್ಕುತ್ತಿರುವ ಅವಳು ಕೇಳಿದಳು :

"ಶ್ರೇಯಾಂಸ, ಹೂವ ಗೀವ ತಂದ ಏನಬೆ ?"

"ಅದಕ್ಕs ಇಷ್ಟ ಲಗೂನೆ ಹೊರಗ ಹೋಗಿದ್ದ ಏನೋ ಅವ...."

ಇಷ್ಟೇ ಹೇಳಿ ಸರಸವ್ವ ಸುಮ್ಮನಾದಳು. ಅವಳ ಮಾತು ತನ್ನ ಅತ್ತಿಗೆಗೆ ಉತ್ತರ ಕೊಡುವಂತಿರಲಿಲ್ಲ; ಗಂಡನಿಗೆ ಸಮಾಧಾನ ಹೇಳುವಂತಿತ್ತು.

“ಬೂದುಗುಂಬಳ ಕಾಯಿಯಂಥ ದೊಡ್ಡದೇ ಸಿಕ್ಕದ. ಅದು ಮುಚ್ಚುವಷ್ಟಾದರೂ ಹೂ ಬೇಕಲ್ಲ. ಅದಕ್ಕೆ ಶ್ರೇಯಾಂಸಗ ಹೇಳಿದ್ದೆ” ಎಂದು ಸುಂದರವ್ವ ತನ್ನಷ್ಟಕ್ಕೇ ನುಡಿದು “ಬಾಳಾ, ಚೆಂಡು ಹೂ ಸಿಕ್ಕವೇನು?” ಎಂದು ಶ್ರೇಯಾಂಸನನ್ನು ಉದ್ದೇಶಿಸಿ ಕೇಳಿದಳು.

“ಇ....ಲ್ಲ! ಸಾಯಂಕಾಲ ಹೋಗಿ ತರುವೆ” ಮನಸ್ಸಿಲ್ಲದ ಮಾತಿಷ್ಟು ಶ್ರೇಯಾಂಸನ ಬಾಯಿಂದ ಹೊರಬಿದ್ದಿತು.

“ದೇವರು, ಧರ್ಮ; ಅತ್ತ ಅವನ ಲಕ್ಷ್ಯ ಇದ್ದರಲ್ಲವೇನು?” ಬಾಳಪ್ಪ ಬಿಗುವಿನಿಂದ ನುಡಿದು, ತಾನು ಬಸದಿಗೆ ಹೊರಡುವ ಸಿದ್ಧತೆಗೆ ತೊಡಗಿದ.

ಸುಂದರವ್ವ ಮರುದಿನದ ನೋಂಪಿಗೆ ಬೇಕಾಗುವ ಸಾಮಾನುಗಳ ವ್ಯವಸ್ಥೆ ಮಾಡತೊಡಗಿದಳು. ಈಗ ಬಾಳಪ್ಪ ಬಸದಿಯ ಕರಡಿಗೆ ತೆರೆದು ಅಕ್ಷತೆಯನ್ನು ತಕ್ಕೊಂಡು, ಅಲ್ಲೇ ಹೊಸ್ತಿಲದ ಮೇಲೆ ಅದನ್ನು ಇಟ್ಟಿದ್ದ. ಅದನ್ನು ತೆರೆದು ನೋಡಿದಳು. ಅದರಲ್ಲಿಯ ಅಕ್ಕಿ ತೀರುತ್ತ ಬಂದಿದ್ದವು. ಕೂಡಲೆ ಇನ್ನಷ್ಟು ಅಕ್ಕಿಯನ್ನು ಒಳಗಿನಿಂದ ತಂದು, ಅವುಗಳಲ್ಲಿಯ ಅಖಂಡ ಕಾಳುಗಳನ್ನು ಆಯ್ದು ತೆಗೆಯತೊಡಗಿದಳು.

“ಅಕ್ಕಾ, ಅದಕ್ಕೇನು ಅಷ್ಟು ಅವಸರ....”

ಎಂದು ಸರಸವ್ವ ಮೃದುವಾಗಿ ನುಡಿದು, ತನ್ನ ಮುಂದಿನ ಮಡಿಯ ಅಡಿಗೆಯ ಕಡೆಗೆ ಮನಸ್ಸು ಹಾಕಿದಳು. ಅದರಲ್ಲಿ ಅತ್ತಿಗೆಯ ನೆರವೂ ಅವಳಿಗೆ ಬೇಕಾಗಿತ್ತು.

“ನಾಳೆ ಬೆಳಕು ಆಗುವದರೊಳಗೆ ಎಲ್ಲರೂ ಬಸದಿಯೊಳಗೆ ಹೋಗಿ ನಿಲ್ಲುವವರು ತಾಯಿ! ಈಗಲೇ ನೆನಪು ಆಗಿದೆ; ಆರಿಸಿ ಇಟ್ಟು ಬಿಡುವೆ. ನಾಳೆ ಕಾರ್ತಿಕ ಅಮಾವಾಸ್ಯೆ, ಸೂರ್ಯೋದಯದ ಒಳಗಾಗಿ ನಾವು ದೀಪೋತ್ಸವ ಮಾಡಲೇಬೇಕಲ್ಲ. ಮಹಾವೀರ

ತೀರ್ಥಂಕರರು ಮುಕ್ತಿಗೆ ಹೋದ ಮುಹೂರ್ತ ಅದು !”

ಅತ್ತಿಗೆಯ ಮಾತಿನ ಕಡೆಗೆ ಸರಸವ್ವನ ಲಕ್ಷ್ಯವಿರಲಿಲ್ಲ.

“ ಬಾಳಾ, ಶ್ರೇಯಾಂಸ ಜಳಕಕ್ಕ ಬಾರಪ್ಪ.”

ಎಂದು ಮಗನನ್ನು ಕೂಗಿದಳು. ಅವಳ ದನಿಯಲ್ಲಿ ತುಸು ಬೇಸರ ಇತ್ತು.

ಶ್ರೇಯಾಂಸನಿಂದ ಉತ್ತರವೇನೂ ಬರಲಿಲ್ಲ. ಅವನ ಮನಸ್ಸು ಉತ್ತರ ಕೊಡುವ ಸ್ಥಿತಿಯಲ್ಲಿಯೂ ಇರಲಿಲ್ಲ. ತಾನು ಕಿತ್ತಿ ತಂದ ಒಂದೊಂದೇ ಒಣಗಿಡವನ್ನು ಕೈಯಲ್ಲಿ ತಕ್ಕೊಂಡು ಹೊರಳಿಸಿ ಹೊರಳಿಸಿ ನೋಡುತ್ತಿದ್ದಾನೆ. ಅವುಗಳಲ್ಲಿ ಯಾವುದು ಸುಂದರವಾಗಿದೆ? ಟೊಂಗೆಗಳು ಯಾವುದಕ್ಕೆ ಕಡಿಮೆಯಾಗಿವೆ? ಯಾವದು ಬಿಸಿಲು ಪ್ರಮಾಣ ಮೀರಿ ಬೆಳೆದಿದೆ? ಇವೆಲ್ಲ ಪ್ರಶ್ನೆಗಳನ್ನು ತನ್ನ ಮನಸ್ಸಿಗೆ ಹಾಕಿಕೊಂಡು ಯೋಚಿಸುತ್ತಿದ್ದಾನೆ; ನಿರೀಕ್ಷಿಸುತ್ತಿದ್ದಾನೆ. ‘ಈ ಗಿಡಗಳಿಗೆ ಯಾವ ಬಣ್ಣದ ಕಾಗದದಿಂದ ಹೂಗಳನ್ನು ಮಾಡಿ ಹಚ್ಚಬೇಕು! ಗುಲಾಬಿ ಹೂಗಳನ್ನು ಮಾಡಿದರೆ? ಇವು ಗುಲಾಬಿ ಗಿಡಗಳಂತೆ ಇಲ್ಲವಲ್ಲ! ಹಳದಿ ಬಣ್ಣದ ಹೂಗಳನ್ನು ಮಾಡಬೇಕೆ? ಅಂದರೆ ಚೆಂಡು ಹೂವಿನ ಗಿಡಗಳಂತೆ ಒಮ್ಮೊಮ್ಮೆ ತೋರಬಹುದು. ಆದರೆ ಚೆಂಡು ಹೂವಿನ ಗಿಡದ ಎಲೆಗಳನ್ನು ಕಾಗದದಿಂದ ನನಗೆ ಕತ್ತರಿಸಲು ಬರುವದಿಲ್ಲವಲ್ಲ! ಗುಲಾಬಿ ಗಿಡದ ಎಲೆಗಳನ್ನು ಕತ್ತರಿಸಬಲ್ಲೆ. ಅವುಗಳನ್ನೇ ಇದಕ್ಕೆ ಹಚ್ಚಿದರಾಯಿತು. ಛೆ! ಚೆಂಡು ಹೂವಿನ ಗಿಡಕ್ಕೆ ಗುಲಾಬಿ ಹೂವಿನ ಗಿಡದ ಎಲೆಗಳು? ಅದೆಂಥ ಹೂವಿನ ಗಿಡಗಳು ನನ್ನವು! ಏನೇ ಆಗಲಿ, ಗುಲಾಬಿ ಹೂವಿನ ಗಿಡಗಳನ್ನೇ ಮಾಡಿ ತೀರುವೆ. ಅಹಃ! ಈ ಒಣಗಿಡಗಳು ಎಷ್ಟು ಚೆಲುವಾಗಿವೆ. ಟೊಂಗೆ ಟಿಸಿಲುಗಳೆಲ್ಲ ಎಷ್ಟು ಸಪ್ರಮಾಣವಾಗಿವೆ. ಇವುಗಳನ್ನು ಉಪಯೋಗ ಮಾಡಿಕೊಳ್ಳದೆ ಬಿಡುವದಿಲ್ಲ. ಇವುಗಳಿಗೆ ಎಲೆ ಹೂವುಗಳನ್ನು ಹಚ್ಚಿದಾಗ ಎಷ್ಟು ಸುಂದರ ಕಾಣುವವು!

'ಆಯಿತು; ಗಿಡಗಳನ್ನು ಮಾಡುವೆ. ಆದರೆ ಇದರಲ್ಲಿ ನನ್ನದೇನು ಕಲೆ? ದೇವರು ನಿರ್ಮಿಸಿದ ಗಿಡ. ಆದರ ಹೂವು ಎಲೆಗಳು ಉದುರಿ ಹೋಗಿವೆ. ಅದಕ್ಕೆ ಕಾಗದದ ಹೂವು ಎಲೆಗಳನ್ನು ಮಾಡಿ ನಾನು ಹಚ್ಚುವವ. ತಿರುಗಿ ಮೊದಲಿನಂತೆ ಮಾಡಿ ತೋರಿಸಲಿಕ್ಕೆ ಪ್ರಯತ್ನಿಸುವವ. ಇದರಲ್ಲಿ ನನ್ನದೇನು ಬಂತು? ಅಂಥ ಗಿಡಗಳನ್ನು ಮಾಡುವದಾದರೂ ಏತಕ್ಕೆ? ಚಿತ್ರಗಳಲ್ಲಿ ಹಲವು ಗಿಡಗಳು ಇವೆಯಲ್ಲ! ದೇವರು ನಿರ್ಮಿಸಿದ ವಸ್ತುಗಳನ್ನು ನಾನು ಉಪಯೋಗಿಸಿ ಕೊಳ್ಳಬಾರದು. ನಾನು ಮಾಡಿದ್ದು ನನ್ನದೇ ಆಗಿರಬೇಕು. ಅಂದರೆ ಯಾವ ಗಿಡವನ್ನು ಮಾಡಬೇಕು? ಯಾತರಿಂದ ಮಾಡಬೇಕು?'

ಸ್ವಲ್ಪಹೊತ್ತು ಶ್ರೇಯಾಂಸ ತನ್ನಲ್ಲಿ ತಾನೇ ವಿಚಾರಿಸುತ್ತ ಕುಳಿತ. ಅನೇಕ ವಸ್ತುಗಳನ್ನು ನೆನೆದ. ಅವುಗಳನ್ನು ಹೊಂದಿಸಿ ಕಲ್ಪನೆಯಲ್ಲಿಯೇ ಕೆಲವು ಗಿಡಗಳನ್ನು ವಿರಚಿಸಿ ನೋಡಿದ. ಅವುಗಳ ಸೌಂದರ್ಯವನ್ನು ಕಂಡು ನಲಿದ. ಆದರೆ ಅವುಗಳಲ್ಲೆಲ್ಲ ದೇವನ ಕೈವಾಡವೇ ಹೆಚ್ಚಾಗಿ ಕಂಡಿತವನಿಗೆ. ಬೇಸತ್ತು ತನ್ನ ಕಲ್ಪನೆಗಳನ್ನೆಲ್ಲ ಕರಗಿಸಿಬಿಟ್ಟ. ಮತ್ತೆ ಧ್ಯಾನಮಗ್ನನಾದ. ದೃಷ್ಟಿ ಮೂಗಿನ ತುದಿಗೆ ಹೊರಳಿತು. ತಿರುಗಿ ಸೃಷ್ಟಿಯೊಳಗಿನ ಒಂದೊಂದೇ ಗಿಡಗಳನ್ನು ನೆನೆಯತೊಡಗಿದ. ಅವುಗಳನ್ನು ತಾನು ನಿರ್ಮಿಸಬೇಕಾದರೆ ಬೇಕಾ ಗುವ ವಸ್ತುಗಳನ್ನು ಹೊಂದಿಸಿಕೊಳ್ಳಹತ್ತಿದ. ಆ ಹೊಂದಿಕೆಯಲ್ಲಿ ಸೃಷ್ಟಿಕರ್ತನ ಕೈಯೆಷ್ಟು? ತನ್ನ ಕೈಯೆಷ್ಟು? ಪ್ರಶ್ನೆ ಹಾಕಿಕೊಂಡ, ತೂಗಿನೋಡಿದ. ಸೃಷ್ಟಿಯೊಳಗಿನ ವಸ್ತುಗಳನ್ನು ಹೊಂದಿಸಿಕೊಂಡು 'ನಾನು ಸೌಂದರ್ಯವನ್ನು ಉಂಟು ಮಾಡಿದೆನೆ? ಮೊದಲು ಅವು ಗಳಲ್ಲಿಯೇ ಆ ಸೌಂದರ್ಯವಿತ್ತೇ? ಹೋ! ಇದರಲ್ಲಿ ನಾನು ನಿರ್ಮಿಸಿದ ಚೆಲುವಿದೆ. ಇದನ್ನೇ ಮಾಡಿ ತೋರಿಸುವೆ.'

ಹೀಗೆ ಒಂದು ನಿರ್ಧಾರಕ್ಕೆ ಬಂದಾಗ ಶ್ರೇಯಾಂಸನ ಮುಖದಲ್ಲಿ ಆನಂದದ ತೆರೆಗಳು ತೇಲಿಬಂದುವು. ಮೈಯಲ್ಲಿ ಉತ್ಸಾಹ ಉಂಟಾ

ಯಿತು. ಹೃದಯದಲ್ಲಿ ಒಂದು ತರದ ಕಳವಳವು ತುಂಬಿದಂತಾಯಿತು.

"ಶ್ರೇಯಾಂಸ....! ಏಯ್ ಶ್ರೇಯಾಂಸ....!"

ತಾಯಿ—ಸರಸವ್ವನ ಕರೆ ಈಗ ಶ್ರೇಯಾಂಸನ ಕಿವಿಯನ್ನು ಸೇರಿತು. ಯಾಕೋ ಆ ಕರೆಯು ಸ್ವಲ್ಪ ಕಠೋರವಾಗಿರುವಂತೆ ಎನಿಸಿತವನಿಗೆ. ಮುಂದೆ ಬಿದ್ದ ಒಣ ಗಿಡಗಳನ್ನೆಲ್ಲ ಮುರಿದು ಮುಟ್ಟಗೆ ಯಲ್ಲಿ ಹಿಡಿದುಕೊಂಡು, ನೀರೊಲೆಗೆ ಹಾಕಲಿಕ್ಕೆಂದು ಅವಸರದಲ್ಲಿ ಕೆಳಗಿಳಿದು ಬಂದ. ಅವನ ಮನಸ್ಸು ಮಾತ್ರ ಬೇರೆ ಕಡೆಗೇ ಇತ್ತು. ಅದು ಕೆಳಗಿಳಿದು ಬರುವಂತಿರಲಿಲ್ಲ. ಅದರಲ್ಲಿ ಶಾಂತಿಯಿರಲಿಲ್ಲ.

೨

ಆ ದಿನ ಸಾಯಂಕಾಲದವರೆಗೆ ಶ್ರೇಯಾಂಸನಿಗೆ ಬಿಡುವೇ ಇರಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ಸ್ನಾನ ಊಟಗಳನ್ನು ತೀರಿಸಿದ. ಅಂದು ಬಸದಿಗೂ ಕೂಡ ಹೋಗಿ ಬರಲಿಲ್ಲ. ಅದಕ್ಕಾಗಿ ಮತ್ತೆ ತಂದೆಯಿಂದ ಒಂದೆರಡು ಬಿರುನುಡಿಗಳನ್ನು ತಾಯಿ ಸರಸಪ್ಪ ಕೇಳ ಬೇಕಾಯಿತು. ತಿರುಗಿ ಇವನು ತಂದೆಯ ಎದುರಿಗೂ ಸುಳಿಯಲಿಲ್ಲ. ಊರೆಲ್ಲ ಹಬ್ಬದ ಹರುಷದಲ್ಲಿ ತೇಲುತ್ತಿದೆ. ಶ್ರೇಯಾಂಸ ಅಡವಿಗೆ ಹೋಗಿದ್ದಾನೆ. ಅವನ ಭಾವನೆಯ ಒತ್ತಡ ಅವನನ್ನು ಅದೆಲ್ಲೆಲ್ಲಿಯೋ ಎಳೆದುಕೊಂಡು ಹೋಗಿದೆ, ಏನನ್ನೋ ಮಾಡಲಿಕ್ಕೆ ಹಚ್ಚಿದೆ.

ಸುಂದರವ್ವ ಇಂದು—ಸಂಪೂರ್ಣ ದಿನ—ಊಟವಿಲ್ಲದೆ ಇರು ವಳು. ಚಾತುರ್ಮಾಸದೊಳಗಿನ ಚತುರ್ದಶಿಯದು ಹಗಲೆಲ್ಲ ಅವಳು ತನ್ನ ಮನಸ್ಸನ್ನು ಶುಭ ಚಿಂತನೆಯಲ್ಲಿ ತೊಡಗಿಸುವಳು. ಶ್ರೀಮಾನ ತುಂಗಾಚಾರ್ಯರ 'ಭಕ್ತಾಮರ ಸ್ತೋತ್ರ'ವನ್ನು ಅನ್ನುವಳು. ನಮೋ ಶಾರದ ಮಂತ್ರದ ಜಪ ಮಾಡುವಳು. ಧ್ಯಾನ ಜಿನನ ಮೇಲಾ ದರೆ ಕೈಯೂ ಯಾವಾಗಲೂ ಜಿನನ ನೋಂಪಿಯ ಕೆಲಸವನ್ನು ಮಾಡುತ್ತಿರುವುದು. ಹದಿನಾರು ಭಾವನೆಗಳ ಪ್ರತೀಕವೆನಿಸುವ ವೀಳ್ಯದೆಲೆ-ಅಡಿಕೆ, ಹೂವುಗಳ ವ್ಯವಸ್ಥೆಯಲ್ಲಿ ತೊಡಗಿದ್ದಳಾಕೆ. ಮರು ದಿನದ ನೋಂಪಿಯಲ್ಲಿ ಹದಿನಾರು ದೀಪಗಳನ್ನು ಹಚ್ಚಿ ಮಹಾವೀರ ಜಿನನಿಗೆ ಆರತಿಯನ್ನು ಬೆಳಗಬೇಕವಳು. ಆಗಿನ ದೃಶ್ಯವು ಈಗಾಗಲೇ ಸುಂದರವ್ವನ ಭಾವುಕ ಹೃದಯದಲ್ಲಿ ಮೂಡಿನಿಂತಿದ್ದಿತು. ಜಿನ ಮಂದಿರದ ಸುತ್ತೆಲ್ಲ ಸುಮಂಗಲೆಯರ ತಂಡವು ಸೇರಿರುವ್ವವು. ಎಲ್ಲರ

ಕೈಯಲ್ಲೂ ಆರತಿಯ ದೀಪಗಳು. ಮೈಮೇಲೆಲ್ಲ ಹೊಸಹೊಸ ವಸ್ತ್ರಗಳು, ಆಭರಣಗಳು. ದೇವಲೋಕದ ಸುಂದರ ಸ್ತ್ರೀಯರಂತೆ ಕಂಗೊಳಿಸುತ್ತಿದ್ದಾರೆ! ಮುಕ್ತಿಯ ಕಾಲಕ್ಕೆ ವೀರಜಿನನಿಗೆ ಸ್ವರ್ಗಲೋಕದಿಂದ ದೇವನಾರಿಯರು ಬಂದು ಆರತಿಯೆತ್ತಿದ ಕತೆಯನ್ನು ಪುರಾಣದಲ್ಲಿ ಅವಳು ಕೇಳಿದ್ದಳು. ಅಂದಿನ ಚಿತ್ರವನ್ನು ಇಂದು ನೆನೆದು, ಅದರ ಪ್ರತೀಕವನ್ನು ನಾಳಿನ ತಮ್ಮ ನೋಪಿಯಲ್ಲಿ ಕಾಣುತ್ತಿದ್ದ ಅವಳ ಮನಸ್ಸು ಅಮುದಾನಂದದಲ್ಲಿ ತೇಲಿಹೋಗುವುದು. ಅಂಥ ಆನಂದದ ಭರದಲ್ಲಿ ಅವಳ ಬಾಯಿಂದ 'ನಮೋಕಾರ ಮಂತ್ರ'ವು ತನ್ನಿಂದ ತಾನೇ ಹೊರಡುವುದು.

ಬಾಳಪ್ಪನೂ ಕೂಡ ಇಂದು ಅನ್ನ ನೀರುಗಳನ್ನು ತೀರ ಮಿತಿಯಿಂದ ಸ್ವೀಕರಿಸುತ್ತಿದ್ದನು. ಆದರೂ ಅವನಿಗೆ ಉಪವಾಸ ತಡೆಯುತ್ತಿರಲಿಲ್ಲ. ಆದರಿಂದ ಅಷ್ಟಮಿ ಚತುರ್ದಶಿ ದಿನಗಳಲ್ಲಿ ಅವನು ಹಾಸಿಗೆಯನ್ನೇ ಹಾಕುತ್ತಿದ್ದನು. ಜನರ ಕೂಡ ಮಾತೂ ಕಡಿಮೆ. ಇದು ಸರಸಮ್ಮನಿಗೆ ಸರಿಹೋಗದು. 'ಇಂಥ ಪರಿಯಿಂದ ಉಪವಾಸವನ್ನೇಕೆ ಮಾಡಬೇಕು?' ಎಂದು ಪತಿಗೆ ಆಗಾಗ ಕೇಳುವಳು. ವ್ರತ ಉಪವಾಸಗಳನ್ನು ಅವಳೆಂದೂ ಮಾಡಿದವಳಲ್ಲ. ದಿನಾಲು ಒಮ್ಮೆ ಜಿನಮಂದಿರಕ್ಕೆ ಹೋಗಿ ಜಿನ ದರ್ಶನವನ್ನು ಮಾಡಿಕೊಂಡು ಬಂದು ಊಟ ಮಾಡುತ್ತಿದ್ದಳು. ಸರಳ ಸಾದಾ ಜೀವನ ಆಕೆಯದು. ಗೃಹ ಕರ್ಮಗಳನ್ನು ವ್ಯವಸ್ಥಿತ ರೀತಿಯಿಂದ ನಡೆಯಿಸಿಕೊಂಡು ಹೋಗುವುದರಲ್ಲಿಯೇ ಅವಳು ತನ್ನ ಪುಣ್ಯವನ್ನು ಕಂಡುಕೊಂಡಿದ್ದಳು. ಇದ್ದೊಬ್ಬ ಮಗ ಶ್ರೇಯಾಂಸನು ಬೆಳೆದು ದೊಡ್ಡವನಾಗಬೇಕು, ಅವನ ಮದುವೆಯನ್ನು ಬೇಗ ಮಾಡಬೇಕು, ಮೊಮ್ಮಗನನ್ನು ಕಾಣಬೇಕು ಎಂದವಳ ಲವಲವಿಕೆಯಾಗಿತ್ತು. ಶ್ರೇಯಾಂಸನು ಹುಟ್ಟಿ ಹದಿನಾರು ವರ್ಷಗಳು ಕಳೆದುಹೋದುದರಿಂದ ಇನ್ನು ಅವಳಿಗೆ ಮಕ್ಕಳಾಗುವ ಆಶೆಯಿರಲಿಲ್ಲ. ಮನೆಯಲ್ಲಿ ಅತ್ತಿಗೆಗಂತೂ ಮಕ್ಕಳೇ

ಇಲ್ಲ ಆವಳ ಪತಿ ಪದ್ಮಪ್ಪ. ಹುಟ್ಟಾ ವೈರಾಗ್ಯಜೀವಿ. ಅವನು ಇಂಥ ಪರ್ವತಿಥಿಗಳಲ್ಲಿ ಜಿನಮಂದಿರದಲ್ಲಿಯೇ ವಾಸಿಸುವನು. ಮನೆತನದ ವಿಚಾರಗಳಿಗೆ ತನ್ನ ಮನಸ್ಸಿನಲ್ಲಿ ಅವಕಾಶವನ್ನೂ ಕೂಡ ಕೊಡುವದಿಲ್ಲ. ಅದರಿಂದ ಆ ದಂಪತಿಗಳ ಧಾರ್ಮಿಕ ಜೀವನದ ಪರಿಣಾಮವು ಆ ಮನೆತನದ ಮೇಲೆಲ್ಲ ಆಗಿದ್ದಿತು. ಅವರ ಇದ್ದ ಬದ್ದ ಉತ್ಪನ್ನವೆಲ್ಲವೂ ಶ್ರೇಯಾಂಸನಿಗೇ ಆಗುತ್ತಿರುವದರಿಂದ ಲೌಕಿಕ ದೃಷ್ಟಿಯ ಸರಸವ್ವನು ಅವರ ಮನಸ್ಸನ್ನು ಅರಿತು ನಡೆಯುತ್ತಿದ್ದಳು. ಅವರಿಗೆ ಚೆನ್ನಾಗಿ ಸೇವೆಯನ್ನು ಸಲ್ಲಿಸುತ್ತಿದ್ದಳು. ಬಾಳಪ್ಪನೂ ಕೂಡ ಹಾಗೆಯೇ. ತನ್ನ ಅಕ್ಕನ ಎಲ್ಲ ಮಾತುಗಳನ್ನೂ ನಡೆಯಿಸಿಕೊಡುತ್ತಿದ್ದನು ಅವಳ ವ್ರತ ಉಪವಾಸಗಳಿಗೆ ಅನುವು ಮಾಡಿಕೊಡುತ್ತಿದ್ದನು.

ಜೈನಾಪುರವು ಜಿನ ಧರ್ಮದ ತವರೂರೆನಿಸಿದ್ದಿತು. ಊರಲ್ಲಿ ನಾಲ್ಕಾರು ಜಿನ ಮಂದಿರಗಳಿವೆ. ಊರ ಹೊರಗಿನ ಉಪನಗರದಲ್ಲಿ ಅನಾಥ ಛಾತ್ರಾಶ್ರಮವಿದೆ. ಸರಸ್ವತಿ ಮಂದಿರವಿದೆ, ಮುನಿಗಳ ವಾಸಸ್ಥಾನವಿದೆ. ಅಲ್ಲಿ ತಪಸ್ಸಿಗೂ ಅಭ್ಯಾಸಕ್ಕೂ ಅನುಕೂಲವಾದ ವಾತಾವರಣವೂ ಇದೆ. ಅದರಿಂದ ಪ್ರತಿವರ್ಷ ವರ್ಷಾಯೋಗದಲ್ಲಿ ಜೈನ ನಗ್ನ ಸಾಧುಗಳು ಅಲ್ಲಿ ಬಂದು ಇರುವರು. ಆಗೆಲ್ಲ ಅವರ ಪ್ರವಚನಗಳು ನಡೆಯುತ್ತವೆ, ಶಾಸ್ತ್ರಾಧ್ಯಯನ ವಾಗುತ್ತದೆ. ಇಂಥ ಧಾರ್ಮಿಕ ವಾತಾವರಣದಲ್ಲಿ ಪದ್ಮಪ್ಪ ಬೆಳೆದುಬಂದವನು. ಓದುಬರಹ ಕಲಿಯದ ಸಂಸಾರವಾದರೂ ಬಹು ತಿಳಿವಿನಿಂದ ಬಾಳಿದವರು. ತ್ಯಾಗಿಗಳ ಸಹವಾಸದಲ್ಲಿ ಇದ್ದವರು. ಅದರಿಂದ ಆ ಮನೆತನದ ಲೌಕಿಕ ಜೀವನದಲ್ಲಿಯೂ ಒಂದು ಪಾರಮಾರ್ಥಿಕ ದೃಷ್ಟಿಯು ಒಡೆದು ತೋರುತ್ತಿದ್ದಿತು. ಪದ್ಮಪ್ಪ ಸುಂದರವ್ವರಂತೂ ಈಗಾಗಲೇ ಅರ್ಧ ಸಂಸಾರವನ್ನು ತ್ಯಜಿಸಿದಂತೆಯೇ ಬಾಳುತ್ತಿದ್ದರು. ಆದರೂ ಅನ್ನ ಬಟ್ಟೆಗಳಿಗೆ ಅವರು ಯಾರಿಗೂ ಹೊರೆಯಾಗಿರಲಿಲ್ಲ. ತಮಗೆ ಹತ್ತು

ವಸ್ತು ಸಾಮಗ್ರಿಗಳಿಗಾಗಿ ದುಡಿಯುವರು. ದುಡಿದುಣ್ಣುವ ಒಕ್ಕಲಿಗರ ಮನೆತನವೇ ಅದು. ದುಡಿತದಲ್ಲಿ ಧರ್ಮವನ್ನು ಕಾಣುತ್ತ ಬಾಳಿದ ಸಂಸಾರವದು.

ಹೊತ್ತು ತಂಗುತ್ತ ಬಂದರೂ ಶ್ರೇಯಾಂಸನ ಸುಳುವಿರಲಿಲ್ಲ. ಅವನ ದಾರೀ ಕಾಯ್ದುಕಾಯ್ದು ಬೇಸತ್ತು ಸುಂದರವ್ವ ಬೂದು ಗುಂಬಳಕಾಯನ್ನೂ ಹೂವುಗಳನ್ನೂ ತಕ್ಕೊಂಡು ಹೆಣೆಯಲಿಕ್ಕೆ ಕುಳಿತಳು. ಕುಂಬಳಕಾಯಿಯು ಮುಚ್ಚುವಷ್ಟು ಹೂವುಗಳಿರಲಿಲ್ಲ. ಆದರಿಂದ ಅವಳ ಮನಸ್ಸಿಗೆ ಸಮಾಧಾನವಿರಲಿಲ್ಲ. ಶ್ರೇಯಾಂಸ ಮಧ್ಯಾಹ್ನದಿಂದಲೂ ಮನೆಯಲ್ಲಿ ಇರದುದರಿಂದ ಎಲ್ಲಿಯಾದರೂ ಹೂವುಗಳನ್ನೇ ಕೂಡಹಾಕಲಿಕ್ಕೆ ಹೋಗಿರಬೇಕೆಂದು ಅವಳ ನಿರೀಕ್ಷೆಯಾಗಿದ್ದಿತು. ಅವನು ಇನ್ನೂ ಬಾರದುದರಿಂದ ತಲೆ ಬಾಗಿಲ ಕಡೆಗೊಮ್ಮೆ ನೋಡುವಳು, ಮತ್ತೆ ಹೂವೊಂದನ್ನು ತಕ್ಕೊಂಡು ಸೂಜಿಯಲ್ಲಿ ಏರಿಸುವಳು. ಶ್ರೇಯಾಂಸ ಬರಲಿಕ್ಕೆ ವೇಳೆಯಾದಂತೆ ಅವಳ ಮನಸ್ಸು ನಿರಾಶೆಗೊಳ್ಳುವುದು. ಇದ್ದ ಹೂವುಗಳಲ್ಲಿಯೇ ಹೇಗೆ ಹೆಣೆದು, ಕಾಯಿಯ ಮೇಲುಮೈಯನ್ನಾದರೂ ಮುಚ್ಚಬೇಕೆಂದು ಯೋಚಿಸುವಳು. ಆ ಯೋಚನೆಯ ಧ್ವನಿಯಲ್ಲಿಯೇ ಕೇಳುವಳು :

"ಸರಸಾ, ಶ್ರೇಯಾಂಸ ಎಲ್ಲಿ ಹೋಗಿರಬೇಕಬೆ ?"

"ನಾನಾದರೆ ಏನು ಹೇಳಲಿ ತಾಯಿ ?"

ಸರಸವ್ವನೂ ಚಿಂತೆಯಿಂದ ನುಡಿಯುವಳು. ಮಗನು ಮುಂಜಾನೆಯ ಹತ್ತು ಗಂಟೆಯ ಸುಮಾರಿಗೇನೇ ಅವಸರದಿಂದ ನಾಲ್ಕು ತುತ್ತು ತಿಂದು ಹೋದವನು ಇನ್ನೂ ಮನೆಗೆ ಬಾರದುದರಿಂದ ಅವಳೂ ಚಿಂತೆಗೆ ಒಳಗಾಗಿದ್ದಳು. ಸೂರ್ಯಾಸ್ತದ ಹೊತ್ತಿಗೆ ತನ್ನ ಕೂಡ ಹೋಸಕ್ಕಾದರೂ ಬರಬಹುದೆಂದು ನಿರೀಕ್ಷಿಸಿದ್ದಳು. ಆ ಕಾಲಕ್ಕೂ ಬಾರದಿರಲು—ತಾನು ಇರುಳು ಬಾಯಲ್ಲಿ ನೀರು ಹಾಕದಿರುವುದರಿಂದ—ತಾನೊಬ್ಬಳೇ ಊಟ ತೀರಿಸಿದ್ದಳು. ಇದೀಗ ಎಲ್ಲ

ಮೇಲಿನ ಕೆಲಸವನ್ನು ಮುಗಿಸುವುದರಲ್ಲಿ ತೊಡಗಿದ್ದಳು.

"ಕುರುಬರ ಮನೆಯಲ್ಲಿ ಹುಟ್ಟುವವ, ತಪ್ಪಿ ನಮ್ಮಲ್ಲಿ ಹುಟ್ಟಿದಾನ, ಆಯ್ತು! ಇನ್ನು ಬಂದು ದೀಪ ಹಚ್ಚಿದ ಮೇಲೆ ಕೂಳ ಕತ್ತರಿಸತಾನ...." ಬಾಳಪ್ಪ ಬೇಸರದಿಂದ ನುಡಿದ.

"ಇನ್ನೂ ಸಾಲೆ ಕಲಿಯುವ ಹುಡುಗ, ಅವನಿಗೇನದ....?"

ಸರಸಪ್ಪ ಮನಸ್ಸಿನಲ್ಲಿಯೇ ಅಂದು ಸುಮ್ಮನಾದಳು. ಅದೇಕೋ ಹಾಸಿಗೆಯಿಂದ ಎದ್ದು ಅಡಿಗೆಯ ಮನೆಯತ್ತ ಬಂದ ಗಂಡನನ್ನು ಗಮನಿಸಿ, ಮೆಲ್ಲನೆ ಕೇಳಿದಳು:

"ಬಾಯಿಗೀಯಿ ಮುಕ್ಕಳಿಸುತೀರೇನು? ಬಿಸಿ ನೀರು **ಕೊಡಲೆ?"**

"ತಾಯೀ ಹೊಟ್ಟೆಯೊಳಗ ಸೂರ್ಯ ಹೋದ ಏನೋ?"

ಪಶ್ಚಿಮದ ಕಿಟಕಿಯೊಳಗಿಂದ ಆಕಾಶವನ್ನು ನಿರೀಕ್ಷಿಸುತ್ತ ಬಾಳಪ್ಪ ಅನುಮಾನದ ಸ್ವರವನ್ನು ಎತ್ತಿದ.

"ಇನ್ನೂ ಬಸ್ತಿಯೊಳಗಿನ ಸೂಚನಾ ಗಂಟೆ ಆಗಿಲ್ಲಲ?"

ಸರಸಪ್ಪನ ಮಾತನ್ನು ಅರ್ಧಕ್ಕೇ ತಡೆದು ಸುಂದರವ್ವ ನುಡಿದಳು.

"ಎಲ್ಲಿ ಕಿವಿ ಇಟ್ಟಿದ್ದಾಳೋ ಏನೋ! ಸೂಚನಾ ಗಂಟೆ ಹೊಡೆದು ಎರಡು ಗಳಿಗೆಯಾಗಿ ಹೋಯ್ತು...."

ಗಂಟೆಯ ನಾದ ಇನ್ನು ಅಡಗಿರಲಿಲ್ಲವಾದರೂ ಅಕ್ಕನ ಈ ಮಾತನ್ನು ಕೇಳಿ, ಬಾಳಪ್ಪ ಒಣಗಿದ ಗಂಟಲಿನಿಂದ ಪಡಸಾಲೆಗೆ ಮರಳಿ ಬರಬೇಕಾಯಿತು. ಅಶ್ವಿನ ತಿಂಗಳ ತುಂಡು ಮೋಡಗಳ ಮರೆಯಲ್ಲಿ ಸಂಜೆಯ ಆಗಸದೊಳಗಿನ ಸೂರ್ಯರಶ್ಮಿಗಳು ಭೂಮಿಯನ್ನು ಬೆಳಗುತ್ತಿದ್ದರೂ ಆತ ಬಾಯಲ್ಲಿ ನೀರು ಹಾಕಲಿಕ್ಕೆ ಬರುವಂತಿರಲಿಲ್ಲ. ಇಷ್ಟು ಬೇಗ ಗಂಟೆಯನ್ನು ಬಾರಿಸಿದ ಬಸ್ತಿಯೊಳಗಿನ ಉಪಾಧ್ಯಾಯರ ಮೇಲೆ ಆತ ಮನದಲ್ಲಿಯೇ ರೇಗಿಬರಬೇಕು. ಬಿಸಿ ನೀರಿನಿಂದ ಬರೇ ಮುಖವನ್ನಷ್ಟು ತೊಳೆದುಕೊಂಡು ಬಿಡಬೇಕಾಯಿತು.

ಬಾಳಪ್ಪ ಪಡಸಾಲೆಗೆ ಬರುವುದಕ್ಕೂ ಶ್ರೇಯಾಂಸ ಹೊರಗಿನಿಂದ ಬರುವುದಕ್ಕೂ ಗಂಟು ಬಿತ್ತು. ಶ್ರೇಯಾಂಸ ತಂದೆಯನ್ನು ಎದುರಿಗೆ ಕಂಡೊಡನೆಯೇ ಸ್ವಲ್ಪ ಹಿಂಜರಿದ. ಬಗಲಲ್ಲಿ ಹಿಡಿದ ಹುಲ್ಲಿನ ಸಿವುಡೊಂದನ್ನು ಅಲ್ಲಿಯೇ ಒತ್ತಟ್ಟಿಗೆ ಇಟ್ಟು ಒಳಗೆ ಹೋಗಲು ಹವಣಿಸಿದ. ಎದುರಿಗೆ ಸೋದರತ್ತೆಯು ಕುಂಬಳಕಾಯಿಗೆ ಹೂ ಮುಡಿಸುತ್ತ ಕುಳಿತುದನ್ನು ಕಂಡು, ಅವನಿಗೆ ಅವಳು ಹೂವು ತರಲಿಕ್ಕೆ ಹೇಳಿದುದು ನೆನಪಾಯಿತು. ಅದರಿಂದ ಇನ್ನಿಷ್ಟು ಬೇಗ ಅಲ್ಲಿಂದ ನುಸುಳಿಕೊಂಡಷ್ಟು ಚನ್ನು—ಎಂದು ಭಾವಿಸಿದಂತಿದ್ದ. ಅಷ್ಟರಲ್ಲಿ ಸುಂದರವ್ವ ಕೇಳಿದಳು :

"ಹೂವು ತಂದೇನಪ್ಪ ಶ್ರೇಯಾಂಸಾ ?"

"ತರಲಿಕ್ಕಂದೇ ಹೋಗಿದ್ದೆ. ಆದರೆ ಕಾಗೆಗಳು ನೂರ್ಯಸ್ತ ವಾದರು ಇದ್ದುವು. ಅದರಿಂದ ತೋಟಕ್ಕೆ ಹೋಗದೆ ಹಾಗೇ ಮನೆಗೆ ಬರಬೇಕಾಯಿತು"

ಎಂದು ಶ್ರೇಯಾಂಸ ಒಂದೇ ಮಾತಿನಿಂದ ಸೋದರತ್ತೆಗೂ ತಂದೆಗೂ ಸಮಾಧಾನಗೊಳಿಸಲಿಕ್ಕೆ ಯತ್ನಿಸಿದ.

"ದನಗಳು ತಿನ್ನದಂಥ ಹುಲ್ಲನ್ನು ಹೊತ್ತು ತಂದಿರುವ ನೋಡು !"

ಎಂದು ಅಪಹಾಸ್ಯದ ಸ್ವರದಲ್ಲಿ ನುಡಿಯು ಬೇಕೆಂದಿದ್ದ ಬಾಳಪ್ಪನ ಬಾಯಿಯು ಮಗನ ಈ ಮಾತಿನಿಂದ ಕಟ್ಟಿತು.

ಸಂಜೆ ಹೊತ್ತಿನಲ್ಲಿ ಹೊಲದೊಳಗೆ ಕಾಗೆಗಳನ್ನು ಹೊಡೆಯಲಿಕ್ಕೆ ದಿನಾಲು ಒಬ್ಬರು ಹೊಲಕ್ಕೆ ಹೋಗಬೇಕಾಗಿದ್ದಿತು ಕಾಗೆಗಳು ಹಿಂಡು ಹಿಂಡಾಗಿ ಬಂದು, ಹೊಲದಲ್ಲಿ ಕುಳಿತು, ನೆಲಗಡಲೆಯ ಕಾಯಿಗಳನ್ನು ಚುಂಚಿನಿಂದ ಕಿತ್ತಿ ಕಿತ್ತಿ ತಿನ್ನುತ್ತಿದ್ದುವು. ಅದರಿಂದ ಬೆಳೆಯು ಹಾಳಾಗುತ್ತಿದ್ದಿತು. ಆದರೆ ಇಂದು ಚತುರ್ದಶಿ. ಹಿಂಸೆಯನ್ನು ಮಾಡಬಾರದೆಂದು ಬಾಳಪ್ಪ ಹೊಲಕ್ಕೆ ಹೋಗಿರಲಿಲ್ಲ. ಹೋಗಲಿಕ್ಕೆ ಮಗನಿಗೂ ಹೇಳಿರಲಿಲ್ಲ. ತನ್ನ ಸ್ವಂತ ಬುದ್ಧಿಯಿಂದಲೇ ಶ್ರೇಯಾಂಸನ

ಹೊಲಕ್ಕೆ ಹೋಗಿ, ಬಳಿಗಳನ್ನು ಕಾಯ್ದು ಬಂದುದಕ್ಕೆ ಬಾಳಪ್ಪನಿಗೆ ಸಂತೋಷವಾಗದಿರಲಿಲ್ಲ. ಸ್ವಲ್ಪ ಉತ್ತೇಜಿತ ಸ್ವರದಲ್ಲಿಯೇ ನುಡಿದ ಆತ,—

"ಇಂದು ಯಾವ ಕಡೆಗೆ ಸೂರ್ಯೋದಯವಾಯ್ತು ?"

"ಹಾಗೇಕನ್ನುವಿರಿ ? ಶ್ರೇಯಾಂಸ ಮನೆಯ ಕೆಲಸ ಎಂದು ತಪ್ಪಿಸಿರುವ ? ನಾವೆಲ್ಲರೂ ಹೀಗೆ ಅಂದೂ ಅಂದು ಅವನ ಮನಸ್ಸನ್ನು ಕಲ್ಲು ಮಾಡಿದ್ದೇವೆ. ಹೆಚ್ಚಿಗೆ ಓದುವದಿದ್ದರೆ ಪುಸ್ತಕ ತಗೊಂಡು ಹೊಲಕ್ಕೇ ಹೋಗಲಿ ಅನ್ನು"

ಮಗನ ಗುಣಗಳನ್ನು ಎತ್ತಿ ಹಿಡಿದು ಸರಸಮ್ಮ ನುಡಿದಳು.

"ಅದೇ ಅನ್ನೋದು ನಾನು ; ಹೊಲ ಮನೆಯ ಕೆಲಸದತ್ತ ಅವನ ಮನಸ್ಸೇ ಇಲ್ಲ ಅಂತ. ಹೊಲದೊಳಗೇ ಹೋಗಿ ಪುಸ್ತಕ ಓವುತ್ತ ಮಾಡತಾನ. ಅವನ ಎದುರಿಗೇ ಕಾಗೆಗಳು ಬಹಿಮೂಗದ ಬಳ್ಳಿಗಳನ್ನು ಎತ್ತಿ ಎತ್ತಿ ಕಾಯಿಗಳನ್ನು ತಿನ್ನುತ್ತಿರುತ್ತವೆ. ಹೊಲಕ್ಕೆ ಹೋಗಿ ಏನು ಮಾಡಿದಂತಾಯಿತು ?"

ಬಾಳಪ್ಪ ಹೆಂಡತಿಯ ಉತ್ಸಾಹವನ್ನು ಕುಗ್ಗಿಸಿದ.

"ಓದುವ ಕಡೆಗೆ ಅವನ ಲಕ್ಷ್ಯ ಹೆಚ್ಚಿಗೆ ಅದೆ. ಸಾಲೆ ಕಲಿಯುವ ವರೆಗೆ ಅದು ಇರೋದೇ ಅಲ್ಲ !"

ಸರಸಮ್ಮ ಅದರಲ್ಲೂ ಸಮಾಧಾನವನ್ನು ಹುಡುಕಿ ಹೇಳಿದಳು.

"ಉಳಿದ ಹುಡುಗರು ಇವನ ಹಾಗೆ ಸಾಲೆಗೆ ಹೋಗು ವದಿಲ್ಲೇನು ?"

ಸುಂದರವ್ವ ಮಾತು ಬೆಳೆಯಿಸುವ ಇಚ್ಛೆಯನ್ನು ಪ್ರದರ್ಶಿಸಿದಳು. ಆವಳಿಗೆ ಶ್ರೇಯಾಂಸನು ಹೂವ್ವಗಳನ್ನು ತರದೆ ಇದ್ದುದಕ್ಕೆ ತುಂಬ ಅಸಮಾಧಾನವಾಗಿದ್ದಿತು. ಅದು ಅವಳ ಧ್ವನಿಯಲ್ಲಿ ಒಡ ಮೂಡುತ್ತಿದ್ದಿತು. ಆದರೂ ಬಾಳಪ್ಪನ ಮನಸ್ಸು ಕಲಕಲಿಲ್ಲ. ಅದೇಕೋ ಅಕ್ಕನ ಧರ್ಮಾಚರಣೆಯ ನಿಷ್ಠುರತೆಯ ಬಗ್ಗೆಯೂ ಅವನಿಗೆ

ಸ್ವಲ್ಪ ಬೇಸರವಾದಂತಾಗಿತ್ತು, ಆ ಚಣದಲ್ಲಿ ಅದನ್ನರಿತೋ ಏನೋ ಸರಸವ್ವ ಒಂದು ಮಾತನ್ನು ಹೆಚ್ಚಿಗೆ ಆಡುವ ಸಾಹಸ ಮಾಡಿದಳು :

"ಹೋಗುವರಲ್ಲ; ಆದರೆ ಇವನ ಹಾಗೆ ಎಲ್ಲಿ ಎಲ್ಲರೂ ಕಲಿತಿದ್ದಾರೆ ?"

ಎಂದು ಕೇಳುತ್ತ ಪಡಸಾಲೆಯಲ್ಲಿ ದೀಪವೊಂದನ್ನು ಹೊತ್ತಿಸಿಟ್ಟು ಮಗನಿಗೆ ಊಟಕ್ಕೆ ಕೊಡಲಿಕ್ಕೆ ಒಳಗೆ ಹೋದಳು. ಪಡಸಾಲೆಯ ತುಂಬ ಪಸರಿಸಿದ ಪ್ರಕಾಶದಲ್ಲಿ ಸುಂದರವ್ವ ತಮ್ಮನ ಮುಖದ ಕಡೆಗೊಮ್ಮೆ ನೋಡಿದಳು. ಅವನು ಈಗಾಗಲೇ ಸಾಯಂಕಾಲದ ಜಪದಲ್ಲಿ ತೊಡಗಿದ್ದ. ಮುಖವು ಪ್ರಸನ್ನವಾಗಿದ್ದಿತು, ದೃಷ್ಟಿಯು ಮೂಗಿನ ತುದಿಯಲ್ಲಿ ನೆಲೆಸಿದ್ದಿತು. ಅದೇ ಹೊತ್ತಿಗೆ ತಲೆ ಬಾಗಿಲಿನಿಂದ ಪದ್ಮಪ್ಪ ಬರಿಗಾಲಿನಿಂದ ಒಳಗೆ ಬಂದ. ಶ್ರೀಗಂಧದ ಕಂಪಿನ ಗಾಳಿಯೊಂದು ಮನೆಯಲ್ಲಿ ವ್ಯಾಪಿಸಿತು. ಮನೆಯೊಳಗಿನ ಪ್ರಶಾಂತ ವಾತಾವರಣವನ್ನು ಕಂಡು ಅವನ ಮನಸ್ಸು ಅರಳಿರಬೇಕು. ಮುಖದಲ್ಲಿ ಮುಗುಳುನಗೆಯೊಂದು ಸೂಸಿತು. ಅಂದು ಆತ ನೌಸಿಯಾದುದರಿಂದ—ಒಳಗಿನಿಂದ ಸರಸವ್ವ ತಂದು ಕೊಟ್ಟ—ಬಿಸಿನೀರಿನಿಂದ ಕಾಲುಗಳನ್ನು ತೊಳೆದುಕೊಂಡು, ಹುಲ್ಲಿನ ಚಾಪೆಯೊಂದನ್ನು ಬಿಡಿಸಿ, ಪಡಸಾಲೆಯಲ್ಲಿ ಅಡ್ಡಾದನು. ಎಲ್ಲವೂ ಸ್ವಾಭಾವಿಕವಾಗಿ ಸಾಗಿತು. ಅದೇಕೋ ಸುಂದರವ್ವ ಮಾತ್ರ ಚಟ್ಟನೆ ಎದ್ದು, ಹೂವು ಕಾಯಿಗಳನ್ನು ತಕ್ಕೊಂಡು ನಡುಮನೆಗೆ ಹೋದಳು. ಅವಳ ನಡಿಗೆಯು ಸಹಜವಾಗಿರಲಿಲ್ಲ.

೩

ನಿಜವಾಗಿಯೂ ಬಾಳಪ್ಪ ಅಂದಂತೆಯೇ ಶ್ರೇಯಾಂಸನ ನಡತೆಯಿತ್ತು. ಅಂದು ಅವನು ಮಧ್ಯಾಹ್ನದಲ್ಲಿ ಹೊಲಕ್ಕೆ ಹೋಗುವಾಗ ಕೈಯಲ್ಲಿ ಪುಸ್ತಕವನ್ನು ತಕ್ಕೊಂಡೇ ಹೋಗಿದ್ದನು. ಹೊಲವೊಂದು ಅವನಿಗೆ ತಪೋಭೂಮಿಯಾಗಿತ್ತು. ಸುತ್ತಲೂ ಅಚ್ಚ ಹಸುರಾದ ಪೈರುಗಳು! ಅವುಗಳನ್ನು ತಬ್ಬಿದ ಸಾಯಂಕಾಲದ ಸೂರ್ಯನ ಸ್ವರ್ಣಕಿರಣಗಳು! ಸೃಷ್ಟಿಯೆಲ್ಲ ಸುವರ್ಣದಲ್ಲಿ ಎರಕ ಹೊಯ್ದಂತೆ ಎನಿಸುವುದು. ಕೈಯೊಳಗಿನ ಪುಸ್ತಕವನ್ನು ಇದ್ದಕ್ಕಿದ್ದಂತೆಯೇ ಹಿಡಿದು, ಅದೆಷ್ಟೋ ಹೊತ್ತು, ಶ್ರೇಯಾಂಸ ಸೃಷ್ಟಿ ಸೌಂದರ್ಯವನ್ನು ನೋಡುತ್ತ ಮೈ ಮರೆತು ಕುಳಿತುದನ್ನು ಕಾಣಬಹುದು. ಅವನು ಹೊಲದಲ್ಲಿ ಇರುವದರಿಂದ ಹಾದಿಯಿಂದ ಹೋಗುವವರೂ ನೆಟ್ಟಗೆ ಹೋದರೆ ಹೋಗಬೇಕು. ಅವರು ಒಂದು ವೇಳೆ ಹೊಲದಲ್ಲಿ ಹೊಕ್ಕು ನೆಲಗಡಲೆಯ ನಾಲ್ಕೆಂಟು ಬಳ್ಳಿಗಳನ್ನು ಕಿತ್ತಿ ತಕ್ಕೊಂಡು ಹೋದರೂ ಅವನ ಅರಿವು ಏನೂ ಇರುತ್ತಿರಲಿಲ್ಲ. ಅಷ್ಟು ಸೃಷ್ಟಿ ಸೌಂದರ್ಯವು ಅವನನ್ನು ಮೋಹಿಸಿ ಬಿಡುವುದುಂಟು. ಆ ಸೌಂದರ್ಯ ರಾಶಿಯನ್ನು ಸೂರೆ ಮಾಡುತ್ತಿರುವ ಅವನಿಗೆ ಸುತ್ತಲಿನ ಪ್ರಪಂಚದ ಕಡೆಗೆ ಲಕ್ಷ್ಯವೇ ಹರಿಯುತ್ತಿರಲಿಲ್ಲ. ಅದರಿಂದ ಅವನ ಸುತ್ತಲೆಲ್ಲ ಕಾಗೆಗಳು ಕುಳಿತು ನೆಲಗಡಲೆಯನ್ನು ಕಿತ್ತು ತಿಂದು ಕೆಡಿಸಿ ಹೋಗುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಇಂಥ ದೃಶ್ಯವನ್ನು ಕಂಡು ಸುತ್ತಲಿನ ಹೊಲದಲ್ಲಿಯ ಜನರು ನಗುವುದೂ ಉಂಟು.

ಇಂಥ ಹಲವು ಸಂದರ್ಭದಲ್ಲಿ ಪದ್ಮಪ್ಪ ಸೋದರಳಿಯನನ್ನು ಹೊಲದಲ್ಲಿ ಕಂಡಿದ್ದ. ಶ್ರೇಯಾಂಸನ ಏಕಾಗ್ರತೆಯನ್ನು ಕಂಡು ಅವನ ಬಗ್ಗೆ ಏನನ್ನೋ ಕನಸನ್ನು ಕಟ್ಟಿ ಆನಂದಿಸುತ್ತಿದ್ದಿತವನ ವಿರಾಗ ಮನಸ್ಸು. ಒಂದು ಕ್ಷಣ ಅಳಿಯನ ನಡತೆಯನ್ನು ಹೊಗಳಿ ನುಡಿಯು ವವನಂತೆ ಮಾತನ್ನು ಆರಂಭಿಸುವ....

"ಹೊಲದ ನಾಲ್ಕು ಮೂಲೆಗಳಲ್ಲಿ ನೀರನ್ನಷ್ಟು ತಂದು ಇಡಬೇಕಲ್ಲ ....ಹಕ್ಕಿಗಳು ತಿಂದು ನೀರನ್ನೂ ಕುಡಿದು ಹೋಗುತ್ತಿದ್ದುವಲ್ಲ !"

ಪದ್ಮಪ್ಪನ ಮಾತನ್ನು ಕೇಳಿ, ಶ್ರೇಯಾಂಸ ಎದ್ದು ಕವಣೆಯನ್ನು ತಕ್ಕೊಂಡು ಕಾಗೆಗಳನ್ನು ಹೊಡೆಯಲಿಕ್ಕೆ ಹೋಗುವನು. ಅದರಿಂದ ಪದ್ಮಪ್ಪನಿಗೆ ಒಂದಿಷ್ಟು ನೋವಾಗುವುದು. ನಾನೊಂದು ಹೇಳಿದರೆ ಹುಡುಗನೊಂದು ತಿಳಿದುಕೊಂಡನಲ್ಲ !....ಎಂದು ಕೊರಗುವನು. ಅವನ ಮೆಚ್ಚಿನ ಆಚಾರ್ಯರಾದ ಶ್ರೀಶಾಂತಿಸಾಗರಮುನಿಗಳೂ ಬಾಲ್ಯದಲ್ಲಿ ಹೊಲದಲ್ಲಿ ಹಕ್ಕಿಗಳನ್ನು ಕಾಯಲಿಕ್ಕೆಂದು ಕಳಿಸಿದಾಗ ಹಕ್ಕಿಗಳನ್ನು ಹಾರಿಸುವ ಬದಲು ಅವುಗಳಿಗೆ ನೀರು ಕುಡಿಯುವ ವ್ಯವಸ್ಥೆ ಮಾಡಿದ್ದುದನ್ನು ಕೇಳಿದ್ದ. ಪ್ರಾಣಿ ದಯೆಯ ಮೂರ್ತ ಸ್ವರೂಪದಂತಿದ್ದ ಅವರ ಚಾರಿತ್ರ್ಯ, ಕೀರ್ತಿಗಳನ್ನು ನೋಡಿ ಮೆಚ್ಚಿದ್ದ. ವರ್ಷಕ್ಕೆ ಒಂದೆರಡು ಸಲ ಆ ಚಾರಿತ್ರ ಚಕ್ರವರ್ತಿಗಳ ದರ್ಶನವನ್ನು ಮಾಡಿ ಬರುತ್ತಿದ್ದ. ಅಂಥ ಮಹಾಮುನಿ ಸದೃಶ ಹುಡುಗನೊಬ್ಬನು ತಮ್ಮ ಮನೆಯಲ್ಲಿ ಬೆಳೆಯುತ್ತಿದ್ದುದನ್ನು ನೋಡಿ. ಅವನ ಹೃದಯ ಹರುಷದಿಂದ ತುಂಬುವುದು. ಶ್ರೇಯಾಂಸನ ಮನೋವೃತ್ತಿಯು ಅದೇ ರೀತಿಯಾಗಿ ಬೆಳೆಯಲೆಂದು ಪದ್ಮಪ್ಪ ಸುತ್ತಲಿನ ಪರಿಸರವನ್ನು ನಿರ್ಮಿಸಿ ಕೊಡುವನು.

ಚಿಕ್ಕಂದಿನಿಂದಲೂ ಶ್ರೇಯಾಂಸನಿಗೆ ಕತೆಗಳನ್ನು ಕೇಳುವುದರಲ್ಲಿ ಆಸಕ್ತಿ ಬಹಳ. ಮನೆಯಲ್ಲಿ ಅವನ ಆಸಕ್ತಿಯನ್ನು ಪೂರೈಸುವ ಹೊಣೆಯೆಲ್ಲ ಪದ್ಮಪ್ಪನ ಮೇಲೆಯೇ ಇರುತ್ತಿದ್ದಿತು. ಆ ಮನೆತನದಲ್ಲಿಯೇ

ಬಹುದಿನಗಳಮೇಲೆ ಹುಟ್ಟಿದ ಹುಡುಗನೆಂದರೆ ಶ್ರೇಯಾಂಸ. ಅದರಲ್ಲೂ ಮನೆಯಲ್ಲಿ ಅವನೊಬ್ಬನೇ ಚಿಕ್ಕ ಹುಡುಗ. ಅದರಿಂದ ಎಲ್ಲರ ಮುದ್ದಿನ ಮಗುವಾಗಿದ್ದನಾತ. ಬಾಳಪ್ಪನಿಗಿಂತ ಪದ್ಮಪ್ಪನಲ್ಲಿಯೇ ಅವನಿಗೆ ಸಲುಗೆ ಹೆಚ್ಚು. ಚಿಕ್ಕಂದಿನಲ್ಲಿ ಅವನ ಹಾಸಿಗೆಯಲ್ಲಿಯೇ ಮಲಗುವನು. ನಿದ್ದೆ ಬರುವವರೆಗೆ ಕತೆ ಹೇಳೆಂದು ಪದ್ಮಪ್ಪನನ್ನು ಕಾಡುವ, ಕತೆ ಕೇಳುವ. ಶ್ರೇಯಾಂಸ ಮಲಗಿದ ಮೇಲೆಯೇ ಪದ್ಮಪ್ಪನ ದಿನದ ಇರುಳಿನ ಧ್ಯಾನಕ್ಕೆ ಅವಕಾಶ ಸಿಕ್ಕುತ್ತಿದ್ದುದು.

ಪದ್ಮಪ್ಪ ಇಳಿವಯಸ್ಸಿನಲ್ಲಿ ತುಂಬ ಯತ್ನಿಸಿ ತುಸ ಓದು ಬರಹ ಕಲಿತಿದ್ದ. ಅದು ಸಂಸಾರದಲ್ಲಿ ವೈರಾಗ್ಯ ಹುಟ್ಟಿದ ಮೇಲೆ. ಅಂದಿನಿಂದ ಹಲವು ಜೈನಾಮಗಳನ್ನು ಓದಲಿಕ್ಕೆ ಯತ್ನಿಸುವನು. ಅವು ಅವನಿಗೆ ತಿಳಿಯುವುದು ಅಷ್ಟಕ್ಕಷ್ಟೆ. ಆದರೂ ಚಾತುರ್ಮಾಸದಲ್ಲಿ ಊರೊಳಗಿನ ಜೈನಮಂದಿರದಲ್ಲಿ ಹೇಳುವ ಪುರಾಣವನ್ನು ಕೇಳಲಿಕ್ಕೆ ನಿತ್ಯ ಹೋಗುತ್ತಿದ್ದನು. ಅದರಿಂದ ಅವನಲ್ಲಿ ಅನೇಕ ಕತೆಗಳ ಭಾಂಡಾರವೇ ಇತ್ತು. ಶ್ರೇಯಾಂಸ ಈಗ ದೊಡ್ಡವನಾಗಿ ಸಾಲೆಯನ್ನು ಕಲಿತು ಕೆಲವು ಪುಸ್ತಕಗಳನ್ನು ಓದುತ್ತಿದ್ದರೂ ಪದ್ಮಪ್ಪನ ಕತೆಗಳನ್ನು ಇನ್ನೂ ಆಗಾಗ ಕುತೂಹಲದಿಂದ ಕೇಳುವನು. ಚಿಕ್ಕವನಿರುವಾಗ ಕೇಳಿದ ಕಾಗೆ ಗುಬ್ಬಿಗಳ ಕತೆಗಳನ್ನು ನೆನೆದು ನಗುವನು.

ಶ್ರೇಯಾಂಸ ಮನೆಯಲ್ಲಿ ಎಲ್ಲ ರೀತಿಯಿಂದಲೂ ಅಕ್ಕರೆಯುವನಾದುದರಿಂದ ಅವನನ್ನು ಶಾಲೆಗೆ ಕಳಿಸಿಕೊಡಲಿಕ್ಕೂ ವಿಲಂಬವಾಯಿತು. 'ಇನ್ನೂ ಸಣ್ಣವ, ದೊಡ್ಡವನಾಗಲಿ, ಕಲಿತಾನು' ಎಂದೇ ಸರಸವ್ವ, ಸುಂದರವ್ವ ಹೇಳುತ್ತ ಬಂದರು. ಬಾಳಪ್ಪನಂತೂ ಮಗನ ಶಿಕ್ಷಣದ ಕಡೆಗೆ ಮನಸ್ಸನ್ನೇ ಹಾಕಿರಲಿಲ್ಲ. ಪದ್ಮಪ್ಪನೇ ಶ್ರೇಯಾಂಸನ ಕೂಡ ಸಾಲೆಗೆ ಹೋಗಿಬಂದು, ಅವನ ಎಂಟನೆಯ ವಯಸ್ಸಿನಲ್ಲಿ ಪ್ರಾಥಮಿಕ ಸಾಲೆಯಲ್ಲಿ ಹೆಸರು ಹಚ್ಚಿಸಿದನು. ಅಂದಿನಿಂದ ಶ್ರೇಯಾಂಸನು ಮಾತ್ರ ಪ್ರತಿವರ್ಷವೂ ಒಂದೊಂದು ವರ್ಗದಲ್ಲಿ

ತೀರ್ಗಡೆಯಾಗುತ್ತಲೇ ಬಂದಿದ್ದ. ತನ್ನ ಶಿಕ್ಷಣದಲ್ಲಿ ಪ್ರಗತಿಯನ್ನು ತೋರಿಸಿದ್ದ. ಅವನು ದಿನಾಲು ತಾನು ಕಲಿತ ಪಾಠಗಳನ್ನು ಪದ್ಮಪ್ಪನ ಮುಂದೆ ಮನೆಯಲ್ಲಿ ಓದಿ ಹೇಳುವ. ತಾನು ಕೇಳಿದ ಹೊಸ ಹೊಸ ಕತೆಗಳನ್ನೂ ಹೇಳುವ. ಅದನ್ನು ಕೇಳಿ ಮನೆಯವರೆಲ್ಲರೂ ಸಂತಸ ಗೊಳ್ಳುವರು. ಈಗೀಗ ಪದ್ಮಪ್ಪನ ಹೆಸರಿನಿಂದ ಮನೆಗೆ ಬರುವ 'ವಿವೇಕಾಭ್ಯುದಯ' ಮಾಸ ಪತ್ರಿಕೆಯನ್ನೂ ಶ್ರೇಯಾಂಸ ಓದುವ, ಓದಿ ಹಿರಿಯರಿಗೆ ಹೇಳುವ. ಅದರೊಳಗಿನ ಶ್ರೇಣಿಕರಾಜನ ಕತೆ, ಸುಕುಮಾರಸ್ವಾಮಿಯ ಚರಿತ್ರೆಗಳನ್ನು ಕೇಳಿ, ಮನೆಯವರು ಭಕ್ತಿ ಯಿಂದ ಕೈಮುಗಿಯುವರು. ಪುರಾಣವನ್ನು ಹೇಳುವವನು ಮನೆ ಯಲ್ಲಿಯೇ ಒಬ್ಬನಾದನೆಂದು ಹೇಳಿ ಹೇಳಿ ಎಲ್ಲರೂ ಹಿರಿ ಹಿರಿ ಹಿಗ್ಗುವರು.

ಅಂದು ಶ್ರೇಯಾಂಸ ಹೊಲಕ್ಕೆ ಹೋದುದು ಮುಖ್ಯವಾಗಿ ತನಗೆ ಬೇಕಾದ ಹುಲ್ಲನ್ನು ತರಲಿಕ್ಕೆ. ಆದರೂ ಅಲ್ಲಿಯೇ ಓದಲಿಕ್ಕೆ ಆದೀ ತೆಂದು ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಗದ್ಯಾನುವಾದವನ್ನು ಒಯ್ದಿದ್ದನಾತ. ಅದರಲ್ಲಿಯ ಸುಧನ್ವ- ಅರ್ಜುನರ ಯುದ್ಧದ ಕಥಾ ಭಾಗವನ್ನು ಓದಿ ಸಂತಸಗೊಂಡಿದ್ದ. ಅದರಲ್ಲಿಯೇ ವೈಮರೆತು, ಸಂಜೆಯಾದರೂ ಮನೆಗೆ ಹೋಗುವದನ್ನು ಬಿಟ್ಟು ಕುಳಿತಿದ್ದ. ತಟ್ಟನೆ ತನ್ನ ನಾಳಿನ ಕಾರ್ಯ ನೆನಪಾದೊಡನೆಯೇ ಹುಲ್ಲನ್ನು ಹೊತ್ತು ಕೊಂಡು ಮನೆಗೆ ನಡೆದುಬಿಟ್ಟ. ಮನೆಗೆ ಬಂದರೂ ಅವನ ಮನಸ್ಸಿಗೆ ನೆಮ್ಮದಿ ಇಲ್ಲ. ಹೇಗೋ ನಾಲ್ಕು ತುತ್ತು ಬಾಯಿಗೆ ತುರುಕಿ ತನ್ನ ಅಟ್ಟವನ್ನು ಏರಿದ. ಹೋಗುವಾಗ ಹಿರಿಯರ ಕಣ್ಣುಗಳಿಂದ ತಪ್ಪಿಸಿ, ಹುಲ್ಲನ್ನು ಅಟ್ಟಕ್ಕೆ ಒಯ್ಯಲು ಮರೆಯಲಿಲ್ಲ. ಆಮೇಲೆ ಬಹಳ ಹೊತ್ತಿನ ವರೆಗೂ ಇರುಳು ಶ್ರೇಯಾಂಸ ತನ್ನ ಕಾರ್ಯದಲ್ಲಿ ತೊಡಗಿದ್ದ. ಮನೆ ಯವರೆಲ್ಲರ ಮನಸ್ಸು ದೇವರ ಧ್ಯಾನದಲ್ಲಿ ತೊಡಗಿದುದಕ್ಕಿಂತ ಹೆಚ್ಚಾಗಿ ಅವನ ಮನಸ್ಸು ಅವನ ಕಾರ್ಯದಲ್ಲಿ ಮುಗ್ನವಾಗಿದ್ದಿತು.

ಮರುದಿನ ಅಮಾವಾಸ್ಯೆ. ಅದು ಆಶ್ವಿನ ಅಮಾವಾಸ್ಯೆ ಯಾದುದರಿಂದ ವ್ಯಾಪಾರಿಗಳ ವರ್ಷದ ಕೊನೆಯ ದಿನ. ಲಕ್ಷ್ಮಿಯ ಆರಾಧಕರಾದ ಅವರು ಕಾರ್ತಿಕ ಪ್ರತಿಪದೆಯ ದಿನ ಒಳ್ಳೆಯ ವೈಭವ ದಿಂದ ಲಕ್ಷ್ಮಿಯ ಪೂಜೆಯನ್ನು ಮಾಡುವರು. ಆದರೆ ಜೈನರ ಮನೆಯಲ್ಲೆಲ್ಲ ಅಮವಾಸ್ಯೆಯ ದಿನವೇ ಲಕ್ಷ್ಮಿಯ ಪೂಜೆಯು ನಡೆಯುವುದು. ಅದೇ ದಿನ ಬೆಳಗಿನ ಜಾವದಲ್ಲಿ ಭಗವಾನ್ ಮಹಾವೀರ ತೀರ್ಥಂಕರರು ಮೋಕ್ಷ ಲಕ್ಷ್ಮಿಯನ್ನು ಸಂಪಾದಿಸಿದುದ ರಿಂದ ಅದರ ಪ್ರತೀಕವಾಗಿ ಅವರು ತ್ಯಾಗಲಕ್ಷ್ಮಿಯ ಪೂಜೆಯನ್ನು ಮಾಡುವರು. ಮನೆಯನ್ನು ಸಿಂಗರಿಸುವರು. ಒಂದೆಡೆಗೆ ದೇವರ ಮಂಟಪವನ್ನು ಸಿದ್ಧಗೊಳಿಸುವರು. ಅದರಲ್ಲಿ ವೀರ ಜಿನನ ಭಾವ ಚಿತ್ರವನ್ನಿಟ್ಟು ಪೂಜಿಸುವರು.

ಶ್ರೇಯಾಂಸನ ಮನೆಯಲ್ಲಿಯೂ ಲಕ್ಷ್ಮಿಯ ಪೂಜೆಯು ನಡೆಯುತ್ತಿದ್ದಿತು. ಇತ್ತಿತ್ತಲಾಗಿ ಆ ಪೂಜೆಯ ಮಂಟಪವನ್ನು ಸಿಂಗರಿಸುವ ಕೆಲಸವೂ ಶ್ರೇಯಾಂಸನದೇ ಆಗಿತ್ತು. ಮುಂಜಾನೆ ಎದ್ದು ಬಾಳಪ್ಪ ಹೊಲಕ್ಕೆ ಹೋಗಿ, ಸೀತೆನೆಯ ದಂಟುಗಳನ್ನು ಕಬ್ಬುಗಳನ್ನು ಮಂಟಪಕ್ಕೆ ಕಟ್ಟಲು ತರುವನು. ಅಲ್ಲಿಯವರೆಗೆ ಶ್ರೇಯಾಂಸನು ಭಾವಚಿತ್ರವನ್ನು ಸ್ವಚ್ಛಮಾಡುವುದು, ಮಂಟಪದಲ್ಲಿ ಇಡಬೇಕಾದ ಜಿನಾಗಮನಕ್ಕೆ ಹೊಸ ಪಾಹುಡನ್ನು ಕಟ್ಟಿ ಸಿದ್ಧಗೊಳಿಸುವುದು, ದೀಪ ಧೂಪಗಳ ವ್ಯವಸ್ಥೆಯನ್ನು ಮಾಡುವುದು ಇವೆಲ್ಲ ಕೆಲಸಗಳನ್ನು ನೋಡಿ ಕೊಳ್ಳುತ್ತಿದ್ದನು.

ಈ ಸಲ ಮುಂಜಾನೆಯಿಂದಲೂ ಶ್ರೇಯಾಂಸ ಉತ್ಸಾಹದಿಂದ ಮಂಟಪದ ಸಿದ್ಧತೆಗೆ ತೊಡಗಿದ್ದಾನೆ. ಬೆಳಗಿನಲ್ಲಿ ಎಲ್ಲರೊಡನೆ ಅವನು ಜಿನಮಂದಿರಕ್ಕೆ ಹೋಗಿದ್ದರು, ಅವನ ಲಕ್ಷ್ಯವೆಲ್ಲ ಮನೆಯ ಕಡೆಗೆ ಇದ್ದಿತು. ಮಂಟಪ ಸಿದ್ಧಗೊಳಿಸಿ ಯಾವಾಗ ಎಲ್ಲರಿಗೂ ಆನಂದವಾಗುವಂತೆ ಮಾಡಿ ಬಿಟ್ಟೇನು, ಎಂದು ಅವನ ಮನಸ್ಸು ಹಾತು

ತರೆಯುತ್ತಿತ್ತು. ಅದರಿಂದ ಜಿನಮಂದಿರದಿಂದ ಎಲ್ಲರಿಗಿಂತ ಮುಂಚಿತ ವಾಗಿ ಮನೆಗೆ ಬಂದು ತನ್ನ ಕಾರ್ಯಕ್ಕೆ ಕೈಯಿಕ್ಕಿದನು.

ಪೂಜೆಯ ಹೊತ್ತಿಗೆಂದರೆ ಬಾಳಪ್ಪ ಜೋಳದ ದಂಟುಗಳನ್ನೂ ಕಬ್ಬುಗಳನ್ನೂ ತಕ್ಕೊಂಡು ಬಂದ. ಈಗಾಗಲೇ ಶ್ರೇಯಾಂಸನು ಸಿಂಗರಿಸಿದ ಮಂಟಪಕ್ಕೆ ನಿಲ್ಲಿಸಲಿಕ್ಕೆ ಹೋದ. ಆದರೆ ದೇವರ ಮನೆ ಯಲ್ಲಿ ರಚಿತವಾದ ಆ ಚಿಕ್ಕ ಹಂದರವು ಈ ಮೊದಲೇ ಬಾಳೆಯ ಗಿಡಗಳಿಂದ ಅಲಂಕೃತವಾಗಿತ್ತು. ನೋಡಿ ಬಾಳಪ್ಪ ಬೆರಗಾದ. ಅಲ್ಲಿರದ ಶ್ರೇಯಾಂಸನನ್ನು ಕೂಗಿ ಕೇಳಿದ,—

"ಬಾಳೆಯಮರಗಳನ್ನು ತರಲಿಕ್ಕೆ ಯಾರ ತೋಟಕ್ಕೆ ಹೋಗಿದ್ದಿ!"

ಶ್ರೇಯಾಂಸ ಅಲ್ಲಿರಲಿಲ್ಲ. ಅದರಿಂದ ಗಂಡನಿಗೆ ಉತ್ತರಕೊಡುವ ಭಾರ ಸರಸವ್ವನ ಮೇಲೆ ಬಿತ್ತು.

"ಆತ ಮುಂಜಾನೆಯಿಂದಲೂ ಹೊರಗೆ ಹೋಗಿಯೇ ಇಲ್ಲ!"

"ಹಾಗಾದರೆ ಬಾಳೆಯಗಿಡ ? ಎಲ್ಲಿಂದ ಬಂದವು ?

ಸ್ವಲ್ಪ ಬಿರುಸಿನಿಂದಲೇ ಬಾಳಪ್ಪ ಕೇಳಿದ.

"ಎಲ್ಲಿಯ ಬಾಳೆಯಗಿಡ? ಏನು ಅನ್ನುವಿರೋ ಏನೋ ?"

ಗಂಡನ ಮಾತು ಆಗಂತುಕವೆನಿಸಿದರಿಂದ ಸರಸವ್ವನೂ ಬೇಸರ ದಿಂದಲೇ ಕೇಳಿದಳು.

"ಇಲ್ಲಿ ಬಂದು ನೋಡ ಬಾ...."

ಹೋಳಿಗೆ ಮಾಡುವುದನ್ನು ಅರ್ಧಕ್ಕೆ ನಿಲ್ಲಿಸಿ ಸರಸವ್ವ ದೇವರ ಕೋಣೆಗೆ ಬಂದು ನೋಡಿದಳು. ಅವಳೂ ಬೆರಗುಗೊಂಡಳು. ಬಾಳೆಯ ಗಿಡಗಳು ಎಲ್ಲಿಂದ ಬಂದುವು ? ಶ್ರೇಯಾಂಸನಂತೂ ಹೊರಗೆ ಹೋದುದೇ ಇಲ್ಲ. ಪದ್ಮಪ್ಪನಂತು ಇನ್ನೂ ಬಸದಿಯಿಂದ ಮನೆಗೇ ಬಂದಿರಲಿಲ್ಲ. ಅವಳಿಗೂ ಏನೂ ತೋಚದಾಯಿತು. ಗದ್ದಕ್ಕೆ ಬೆರಳಿಟ್ಟು ಒಂದು ಕ್ಷಣ ನಿಂತಳು. ಅಷ್ಟರಲ್ಲಿ ಸೀತೆನೆಯ ದಂಟುಗಳನ್ನು ಕಟ್ಟಲಿಕ್ಕೆ ಮುಂದರಿದ ಬಾಳಪ್ಪನೇ ನುಡಿದ,—

"ಕಾಗದದ ಗಿಡ ಅವ, ಇವು !"

ಧ್ವನಿಯಲ್ಲಿ ತುಂಬ ಆಶ್ಚರ್ಯವಿತ್ತು. ತುಸು ಹೆಮ್ಮೆಯೂ ಬೆರೆತಿತ್ತು.

"ಏನು ಹೇಳುವಿರಿ ?"

ಸರಸವ್ವನಿಗೆ ಪತಿಯ ಮಾತಿನಲ್ಲಿ ಇನ್ನೂ ವಿಶ್ವಾಸವೇ ಹುಟ್ಟಿರಲಿಲ್ಲ. ಕಾಗದದ ಗಿಡಗಳು ಹೀಗೆ ಹೇಗೆ ಆದಾವು ?–ಎಂಬ ಸಂಶಯವೂ ಅವಳಿಗೆ.

"ನೋಡಲ್ಲ !"

ಎಂದು ಹಸರು ಕಾಗದದ ಎಲೆಯನ್ನು ಬೆರಳಿನಿಂದ ತಿಕ್ಕಿ ತೋರಿಸಿದ. ಆ ತೋರಿಸುವ ರೀತಿಯಲ್ಲಿ ಅವನಿಗು ಇನ್ನೂ ಆ ಗಿಡಗಳ ಕೃತ್ರಿಮತೆಯ ಬಗ್ಗೆ ಸಂಶಯವಿರುವಂತಿತ್ತು.

"ಇಂಥದನ್ನು ಏನಾದರು ಮಾಡಲಿಕ್ಕೆ ಹೇಳರಿ ಅವನಿಗೆ ! ಅದರೊಳಗೆ ಅವನ ಕೈ ಹಿಡಿಯುವ ಹುಡುಗರೇ ನಮ್ಮ ಊರಲ್ಲಿ ಇಲ್ಲ."

ಸರಸವ್ವ ಹೆಮ್ಮೆಯಿಂದ ಮಾತನ್ನು ಮುಂದುವರಿಸಿದಳು. "ಹಿಂದಕ್ಕೆ ನೋಡಲಿಲ್ಲ ? ನೀವೆಲ್ಲ ಬಾಬಾನಗರ ನೋಡಿಕೊಂಡು, ಹಾಗೆ ವಿಜಾಪುರ ನೋಡಿಕೊಂಡು ಬಂದಿರಿ. ಆಗ ನಾನು ಒಬ್ಬಳೇ ಮನೆಯಲ್ಲಿ ಇದ್ದೆ. ಇಲ್ಲಿ ಬಂದ ಮೇಲೆ ಸಣ್ಣ ಗೋಳ ಗುಮ್ಮಟ ಒಂದನ್ನು ಮಣ್ಣಿನಿಂದ ಮಾಡಿ ತೋರಿಸಿದ್ದ. ಸುಂದರಕ್ಕ ಹೇಳುತಿದ್ದಳು : ವಿಜಾಪುರದೊಳಗಿನ ಗೋಲ ಗುಮ್ಮಟಕಿಂತ ನಮ್ಮ ಶ್ರೇಯಾಂಸನ ಗುಮ್ಮಟ ಬಹಳ ಚಂದ ಆಗಿತ್ತಂತೆ....? ಅವನಿಗೆ ತಾನು ನೋಡಿದ್ದು, ಮಾಡಿದ್ದು ಎಲ್ಲರಿಗು ತೋರಿಸಬೇಕನ್ನು ಹವ್ಯಾಸ ಬಹಳ...."

"ಹುಚ್ಚ ಹವ್ಯಾಸ....!"

"ಹುಚ್ಚ ಹೇಗೆ ಅನ್ನುವಿರಿದಕ್ಕ ?"

"ಮತ್ತೇನು ಹಾಗಾದರೆ....? ಹೊಲದೊಳಗಿಂದಿಷ್ಟು ಹುಲ್ಲು ತಂದು ಕಟ್ಟಿ, ಮೇಲೆ ಬಿಳಿಯ ಕಾಗದ ಹಚ್ಚಿ ಬಾಳೆಯ ದಿಂಡು ಮಾಡಿ

ದಾನ. ಸಣ್ಣ ಬಿದಿರ ಎಳೆ ತೆಗೆದು ಅದಕ್ಕ ಹಸಿರು ಕಾಗದ ಅಂಟಿಸಿ ಎಲೆ ಮಾಡಿದಾನ. ಇದರೊಳಗೇನದ?"

"ಅದರೊಳಗೆ ಏನಿರದ ಇಷ್ಟು ಹೊತ್ತು ದಂಗಾಗಿ ನಿಂತಿದ್ದಿರೇನು? ಎಷ್ಟ ಚಂದ ಸುಳಿ ಎಲೆ ಮಾಡಿದಾನ ನೋಡಿರಲ್ಲ....ನನ್ನ ಕಂದ!"

ಎಂದು ಸರಸವ್ವ ತನ್ನ ಮುಂದಿನ ಕೆಲಸಕ್ಕೆ ತೆರಳಿದಳು.

'ಈಗ ಬಸದಿಯಿಂದ ಪದ್ಮಪ್ಪ ಸುಂದರವ್ವ ಬಂದು ಲಕ್ಷ್ಮಿಯ ಪೂಜೆಗೆ ನಿಂತರೆ ಪೂಜೆಗೆ ಬೆಳ್ಳಿಯ ನಾಣ್ಯಗಳನ್ನೇ ಇಡಲಿಕ್ಕೆ ಕೊಡುವದಿಲ್ಲ. ಬರೇ ಶಾಸ್ತ್ರಪೂಜೆಯನ್ನಷ್ಟೇ ಮಾಡಿ ಮುಗಿಸುವರು. ಅವರಿಗೆ ಲಕ್ಷ್ಮಿಯ ಪೂಜೆಯೆಂದರೆ ಮೋಕ್ಷಲಕ್ಷ್ಮಿಯ ಪೂಜೆಯಾಗಿದೆ, ದುಡ್ಡಿನ ಪೂಜೆಯಲ್ಲ. ಊರಲ್ಲೆಲ್ಲ ರೂಪಾಯಿಗಳನ್ನೇ ಪೂಜಿಸುವರು. ಅದಕ್ಕಾಗಿ ಶಾಸ್ತ್ರದ ಗಂಟಿನ ಹಿಂದೆ ಐದು ರೂಪಾಯಿಗಳನ್ನಾದರೂ ಕುಂಕುಮ ಗಂಧಗಳನ್ನು ಹಚ್ಚಿ ಇಡಬೇಕು. ಅಂದರೆ ಲಕ್ಷ್ಮಿಯ ಪೂಜೆಯು ಸಾರ್ಥಕವಾಗುವುದು' ಎಂದು ಯೋಚಿಸಿ ಅವಸರದಿಂದ ಪೆಟ್ಟಿಗೆಯೊಳಗಿನ ರೂಪಾಯಿಗಳನ್ನು ತರಲಿಕ್ಕೆ ಬಾಳಪ್ಪ ಇನ್ನೊಂದು ಕೋಣೆಗೆ ತೆರಳಿದ.

ಅವನ ಎದುರಿಗೇ-ಪಡಸಾಲೆಯಲ್ಲಿ ಪದ್ಮಪ್ಪ ಕೈಯಲ್ಲಿ ಗಂಧದ ಬಟ್ಟಲೊಂದನ್ನು ಹಿಡಿದುಕೊಂಡು, "ಬಸದಿಯಿಂದ ಇನ್ನೂ ಅವಳು ಬರಲಿಲ್ಲ?" ಎಂದು ಕೇಳುತ್ತ ಬಂದ!

ಹಿರಿಯರ ಅಕ್ಕರತೆಯೊಂದು ಶ್ರೇಯಾಂಸನ ಸುತ್ತಲೂ ಇದ್ದ ಪಂಜರವಾಗಿತ್ತು. ಅವನು ಎಲ್ಲಿದ್ದರೂ ಅದು ಅವನನ್ನು ಬಂಧಿಸುತ್ತಿದ್ದಿತು. ಸಾಲೆಗೆ ಹೋಗಿರಲಿ, ಓಣಿಯಲ್ಲಿ ಆಡುತ್ತಿರಲಿ, ಹೊಲಕ್ಕೆ ಹೋಗಿರಲಿ, ಮನೆಯಲ್ಲಿಯೇ ಓದುತ್ತಿರಲಿ ಏನು ಮಾಡುತ್ತಿದ್ದರೂ ಅವನ ಮೇಲೆ ಹಿರಿಯರ ಲಕ್ಷ್ಯ. ಅವನ ಪ್ರಕೃತಿಗೆ ಏನಾದರೂ ಆದೀತಲ್ಲ ಎಂಬ ಎಚ್ಚರ ತಾಯಿ ಅತ್ತೆಯರಿಗೆ. ಸಾಲೆಗೆ ಹೊರಟರೆ 'ಸಾಲೆ ಬಿಟ್ಟ ಕೂಡಲೆ ಮನೆಗೆ ಬಾ' ಎಂದು ಸೋದರತ್ತೆಯ ಸೂಚನೆ. ಓಣಿಗೆ ಜೊತೆಯವರ ಕೂಡ ಆಡಲಿಕ್ಕೆ ನಡೆದರೆ 'ಬಹಳ ಓಡಿಯಾಡ ಬೇಡ, ಬಿದ್ದೀಯೋ ಪುತ್ತ !' ಎಂದು ತಾಯಿ ಎಚ್ಚರಿಸುವಳು. ಹೊಲಕ್ಕೆ ಹೊರಟಾಗ 'ಹೊತ್ತು ಮುಳುಗುವುದರೊಳಗೆ ಬಂದು ಬಿಡು' ಎನ್ನುವ ಬಾಳಪ್ಪ. ರಾತ್ರಿ ಬಹಳ ಹೊತ್ತು ಓದುತ್ತ ಕುಳಿತರೆ 'ಜಾಗರಣೆ ಮಾಡಬೇಡ. ನಾಳೆ ಬೇನೆ ಬೇಸರಿಕೆ ಬಂದೀತು. ಇನ್ನು ಸಾಕು ಮಲಗು....' ಎಂದು ಪದ್ಮಪ್ಪ ಆಜ್ಞಾಪಿಸುವ. ಹೀಗಿರುವುದರಿಂದ ಶ್ರೇಯಾಂಸನು ತನ್ನ ಗುರುಗಳ ಮನೆಗೆ ರಾತ್ರಿಯಲ್ಲಿ ಅಭ್ಯಾಸಕ್ಕೆ ಹೋಗುವ ಯೋಜನೆಯನ್ನು ಮಂಜೂರು ಮಾಡಿಕೊಳ್ಳಬೇಕಾದರೆ ನಾಲ್ಕಾರು ತಿಂಗಳು ಪ್ರಯತ್ನಿಸಬೇಕಾಯಿತು.

ಮೊದಲು ತಾಯಿ ಸೋದರತ್ತೆಯರ ಮನಸ್ಸನ್ನು ಒಲಿಸಿಕೊಂಡು ಒಪ್ಪಿಗೆ ಪಡೆದ. ಆಮೇಲೆ ತಂದೆಯ ಮುಂದೆ ಅವನು ಮಾತೆತ್ತುವ ಮೊದಲೇ ಸುಂದರವ್ವನೇ ತಮ್ಮನಿಗೆ ಇರುವ ಸಂಗತಿಯನ್ನು ತಿಳಿಸಿದಳು. ಬಾಳಪ್ಪ ಮೊದಲು ತೀವ್ರವಾಗಿ ವಿರೋಧಿಸಿದ. ಆದರೂ

ಕೊನೆಗೆ,

"ಮನೆಯೊಳಗೆ ಓದಿದರೆ ಆಗುವದಿಲ್ಲೇನು?"

ಎಂದು ಅಕ್ಕನಿಗೆ ತಿರುಗಿ ಕೇಳಿದ.

"ಅಭ್ಯಾಸ ಬಹಳವಂತೆ. ಅಲ್ಲಿ ಎಲ್ಲರೂ ಕೂಡಿ ಓದುವರಂತೆ ಉಳಿದ ಹುಡುಗರೆಲ್ಲ ಹೋಗುತ್ತಾರೆ. ಇವನೂ ಹೋಗುವೆನೆನ್ನುವ ನಾಯ್ತು...."

ಅರೆಮನಸ್ಸಿನಿಂದ ಸುಂದರವ್ವ ನುಡಿದು ಸುಮ್ಮನಾದಳು.

"ಇಲ್ಲೇ ಮತ್ತಾರನ್ನಾದರೂ ಕರೆದುಕೊಂಡು ಅಭ್ಯಾಸ ಮಾಡಲಿ. ನಮ್ಮ ಅಟ್ಟದ ಮೇಲೆ ಇಬ್ಬರು ಮೂವರು ಬೇಕಾದ ಹಾಗೆ ಓದಿ ಮಲಗಿಕೊಳ್ಳಬಹುದು. ಸುಮ್ಮನೆ ಯಾರ ಯಾರ ಮನೆಗೋ ಮಲಗಿಕೊಳ್ಳಲಿಕ್ಕೆ ಹೋಗುವುದು ನನ್ನ ಮನಸ್ಸಿಗೆ ಬಾರದು...."

"ಇನ್ನ ಎರಡನೆಯವರ ಹುಡುಗರನ್ನು ತಂದು ಮನೆಯೊಳಗ ಹೊಗಿಸೋ ಅಪ್ಪ! ಅವರಷ್ಟು ಬಂದು ತಲೆ ಎಬ್ಬಿಸಿ ಬಿಡಲಿ ಅಂದ ರಾಯ್ತು. ಒಂದು ಘಳಿಗೆ ದೇವರ ಅನ್ನಲಿಕೂ ಶಾಂತತಾ ಉಳಿಯು ಲಿಕ್ಕಿಲ್ಲ ಮನೆಯೊಳಗ....ನಾಲ್ಕು ಮನೆಯ ಹುಡುಗರು. ಎಂದು ಕಾಲ ತೊಳಕೊಳ್ಳುವರೋ....ಎಲ್ಲೆಲ್ಲಿ ತಿರುಗಾಡಿ ಬಂದಿರುವರೊ.... ಹಾಗೇ ಬಂದು ನಮ್ಮ ಅಟ್ಟ ಏರುವವರು...."

ಇನ್ನು ಎಷ್ಟು ಹೊತ್ತು ಸುಂದರವ್ವನ ಮಾತು ಹಾಗೇ ಮುಂದರಿ ಯುತ್ತಿದ್ದಿತ್ತೋ ಏನೋ ಆದರೆ ಬಾಳಪ್ಪನೇ ಅದನ್ನು ನಡುವೆ ತಡೆದು ಹೇಳಿದ, ಮಾತನ್ನು ಮುಗಿಸುವ ರೀತಿಯಲ್ಲಿ,—

"ಪದ್ಮಪ್ಪ, ಅವರ ಮಾಸ್ತರರನ್ನು ಕೇಳಿ ನೋಡಲಿ ಒಮ್ಮೆ ಆವರು ಕಳಿಸು ಅಂದರೆ ಕಳಿಸೋಣಂತ...."

ಆಮೇಲೆ ಪದ್ಮಪ್ಪ ಮಾಸ್ತರರನ್ನು ಕಂಡು ಕೇಳಲಿಕ್ಕೆ ಒಂದೆರಡು ವಾರಗಳು ಕಳೆದುವು ತರುವಾಯ ಶ್ರೇಯಾಂಸನಿಗೆ ಅವನ ಗುರು

ಗಳಾದ ಆತ್ಮಾರಾಮ ಮಾಸ್ತರರ ಮನೆಗೆ ಅಭ್ಯಾಸಕ್ಕೆ ಹೋಗಲಿಕ್ಕೆ ಒಪ್ಪಿಗೆ ದೊರೆಯಿತು. ಆದರೂ ಸರಸವ್ವ ದಿನಾಲು ಹುಡುಗರ ಮಧ್ಯೆ ದಲ್ಲಿಯೇ ಮಲಗಿಕೊಳ್ಳುವಂತೆ ತನ್ನ ಮಗನಿಗೆ ಉಪದೇಶಿಸುತ್ತಿದ್ದಳು. ಮಾಸ್ತರರ ಮನೆಗೆ ಅಭ್ಯಾಸಕ್ಕೆ ಹೋಗುವದಿರುವದರಿಂದ ಶ್ರೇಯಾಂಸ ಸಾಯಂಕಾಲ ಹೊತ್ತಿರುವಾಗಲೇ ಊಟ ತೀರಿಸುವನು. ಇದರಿಂದ ಸೋದರಳಿಯ ಇರುಳು ಉಣ್ಣುವದಾದರೂ ತಪ್ಪಿತಲ್ಲ....ಎಂದು ಸುಂದರವ್ವ ಸಂತಸಗೊಂಡಳು. ಅವಳ ಬಯಕೆಯಂತೆ ಈಗ ಮನೆ ಯವರೆಲ್ಲರೂ ಹೊಸ ಮಾಡುವಂತಾಯಿತು. ಅದರಿಂದ ಅವಳ ಮನಸ್ಸಿಗೆ ಒಂದಿಷ್ಟು ಶಾಂತಿ, ಸಮಾಧಾನ.

ಆತ್ಮಾರಾಮರು ಕನ್ನಡ ಸಾಲೆಯ ಶಿಕ್ಷಕರು. ಮೂರನೆಯ ವರ್ಷದ ಟ್ರೇಂಡರು. ಅವರು ಶಿಕ್ಷಕ ವೃತ್ತಿಯಲ್ಲಿ ಆನಂದವುಳ್ಳವರು. ಹಳಗನ್ನಡ ಕವಿತೆ ವ್ಯಾಕರಣಗಳನ್ನು ಹೇಳ ಹತ್ತಿದರೆಂದರೆ ವರ್ಗದಲ್ಲಿ ಅವರು ಮೈಮರೆತು ಬಿಡುವರು. ಮಕ್ಕಳನ್ನು ಪರೀಕ್ಷೆಗಾಗಿ ಓದಿಸಿ ತೇರ್ಗಡೆ ಮಾಡುವುದು ಅವರ ಪ್ರಕೃತಿಗೆ ಒಗ್ಗುವ ವಿಷಯವಲ್ಲ. ಶಿಕ್ಷಣವೆಂದರೆ ವಿದ್ಯಾರ್ಥಿಗಳನ್ನು ನಾಳಿನ ಬಾಳಗರಡಿಯಲ್ಲಿ ಹೋರಾ ಡುವ ಜಟ್ಟಿಗಳನ್ನಾಗಿ ತರಬೇತುಗೊಳಿಸುವ ಕಲೆ—ಎಂದು ಅವರು ನಂಬಿದವರು. ಅದರಿಂದ ಅವರು ಹೇಳುವ ವಿಷಯಗಳಿಗೆ ಇತಿಮಿತಿಗಳಿ ರುತ್ತಿರಲಿಲ್ಲ. ಎದುರಿಗೆ ಕುಳಿತ ವಿದ್ಯಾರ್ಥಿಗಳ ಗ್ರಹಣಶಕ್ತಿಯ ಕಲ್ಪನೆಯೂ ಅವರಿಗೆ ಒಮ್ಮೊಮ್ಮೆ ಉಳಿಯುತ್ತಿರಲಿಲ್ಲ. 'ಗಿರಿಜಾ ಕಲ್ಯಾಣ'ದ ಕವಿತಾಪಾಠದಲ್ಲಿ ಆರಂಭವಾದ ವಿಷಯವು ಕಾಲಿದಾಸನ ಶಾಕುಂತಲ, ರತ್ನಾಕರವರ್ಣಿಯ ಭರತೇಶ ವೈಭವ, ಷಡಕ್ಷರಿಯ ಶಬರಶಂಕರ ವಿಳಾಸಗಳನ್ನು ವಿವರಿಸಿ ಮುಗಿಯುತ್ತಿದ್ದಿತು. ನಡು ನಡುವೆ ವ್ಯಾಕರಣದ ನಿಯಮಗಳನ್ನು ವಿವರಿಸಲಿಕ್ಕೆ ಕೇಶಿರಾಜನ ಶಬ್ದಮಣಿದರ್ಪಣದ ಶ್ಲೋಕಗಳು ಬರುವುದುಂಟು. ಹೀಗಾಗಿ ಅವರ ವರ್ಗದ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದು

ಕಡಿಮೆ. ಆದರೂ ಅವರ ಮನೆಯೊಂದು ವಿದ್ಯಾಪೀಠವಾಗಿತ್ತು. ಅಲ್ಲಿ ಶ್ರೇಯಾಂಸನ ಪ್ರವೇಶವಾಯಿತು.

ಆತ್ಮಾರಾಮ ಗುರುಗಳಿಗೆಂದರೆ ಶ್ರೇಯಾಂಸನು ಪ್ರೀತಿಯ ಶಿಷ್ಯನು. ಅವರ ಆಶೆ–ಆಕಾಂಕ್ಷೆಗಳನ್ನು ಪೂರ್ಣಗೊಳಿಸುವ ಶಿಷ್ಯೋತ್ತಮನಾಗಿದ್ದನೀತ. ಅವನು ಬರೆದ ಆಟಳ ವಿಷಯದ ನಿಬಂಧವು ಅವರ ಮನಸ್ಸನ್ನು ಮೊದಲು ಅವನ ಕಡೆಗೆ ಸೆಳೆಯಿತು. ಅವನ ಭಾಷೆಯಲ್ಲಿರುವ ಕನ್ನಡದ ಕೆಚ್ಚು ಅವರ ಒಲವನ್ನು ಸೆರೆ ಹಿಡಿಯಿತು. ಈ ಶಿಷ್ಯನ ವಿಷಯದಲ್ಲಿ ಹೆಚ್ಚಿಗೆ ದುಡಿದರೆ ತಮ್ಮ ಬಯಕೆ ಕೈಗೂಡುವದೆಂದು ಅವರಿಗೆ ತೋರಿತು. ಅಂದಿನಿಂದ ಆತ್ಮಾರಾಮ ಮಾಸ್ತರರ ಮನೆಯವರಲ್ಲಿ ಶ್ರೇಯಾಂಸನೂ ಒಬ್ಬನಾದ, ಅವರ ಆತ್ಮೀಯನಾದ.

ಎಲ್ಲ ವಿದ್ಯಾರ್ಥಿಗಳಿಗೂ ಆತ್ಮಾರಾಮ ಮಾಸ್ತರರು ಮನೆಯಲ್ಲಿ ಮುಲ್ಕಿ ಪರೀಕ್ಷೆಯ ಅಭ್ಯಾಸ ಹೇಳುತ್ತಿದ್ದರು. ಅವರಲ್ಲಿಯೇ ಶ್ರೇಯಾಂಸನೂ ಒಬ್ಬನಾಗಿದ್ದ. ಶ್ರೇಯಾಂಸನಿಗೆ ಕನ್ನಡ ಹಾಗೂ ಗಣಿತ ವಿಷಯದಲ್ಲಿ ಇರುವ ಹೆಚ್ಚಿನ ಯೋಗ್ಯತೆಯನ್ನು ಅವನ ಗುರುಗಳು ತಿಳಿದುಕೊಂಡಿದ್ದರು. ಅವನು ಇತಿಹಾಸವನ್ನು ಶೋಧಕ ಬುದ್ಧಿಯಿಂದ ಅಭ್ಯಸಿಸುವ ಬಗೆಯನ್ನು ಅರಿತಿದ್ದರು. ಅದರಿಂದ ಅವರ ಮನೆಯೊಳಗಿನ ಚಿಕ್ಕ ಪುಸ್ತಕ ಭಂಡಾರವನ್ನೇ ಸುಮಾರಾಗಿ ಅವನ ಸ್ವಾಧೀನಪಡಿಸಿದಂತೆ ಮಾಡಿದ್ದರು. ಸಾಲೆಯೊಳಗಿನ ವಾಚನಾಲಯಕ್ಕೂ ಶ್ರೇಯಾಂಸನೇ ಕಾರ್ಯದರ್ಶಿಯಾಗಿದ್ದನು. ಹೀಗಾಗಿ ಅವನ ಓದುವ ಹಸಿವೆಗೆ ಸಾಕಷ್ಟು ಅನ್ನ ದೊರೆತಂತಾಯಿತು.

ಆತ್ಮಾರಾಮ ಮಾಸ್ತರರೂ, ಕನ್ನಡ ಪ್ರಸಿದ್ಧ ಕಾದಂಬರಿಗಾರರಾದ ಗಳಗನಾಥರೂ ಧಾರವಾಡದ ಟ್ರೇನಿಂಗ ಕಾಲೇಜಿನಲ್ಲಿ ಕೂಡಿಯೇ ಕಳೆದವರು. ಅದರಿಂದ ಅವರ ಪುಸ್ತಕ ಸಂಗ್ರಹದಲ್ಲಿ ಗಳಗನಾಥರ ಕಾದಂಬರಿಗಳೆಲ್ಲ ಇದ್ದುವು. ಅವುಗಳ ಜೊತೆಗೆ 'ಸದ್ಬೋಧ ಚಂದ್ರಿಕೆ'ಯ ಹಲವು ಸಂಪುಟಗಳೂ ಶ್ರೇಯಾಂಸನ ಕೈಗೆ ಸಿಕ್ಕುವು.

ಸಾಲೆಯ ಅಭ್ಯಾಸವನ್ನು ಬದಿಗಿಟ್ಟು ಶ್ರೇಯಾಂಸ ಹಗಲಿರಳೂ ಅವು ಗಳನ್ನೇ ಓದತೊಡಗಿದ. ಓದ ಓದುತ್ತಾ ಹೋದಂತೆ ಅವನ ಹೃದಯ ಅರಳ ತೊಡಗಿತು. ಗಳಗನಾಥರ ವಿಷಯಕ್ಕೆ ಆದರ ಹೆಚ್ಚಾಯಿತು. ಅವರ 'ಧರ್ಮರಹಸ್ಯ'ದಿಂದ ಭಾರತದ ಪ್ರಾಚೀನ ಕಾಲದ ಜನ ಜೀವನದ ಕಲ್ಪನೆ ಬಂದಿತು. ಬೌದ್ಧಧರ್ಮದ ಕ್ರಾಂತಿಯ ಸಂದೇಶ ಶ್ರೇಯಾಂಸನ ಹೃದಯಕ್ಕೆ ತಟ್ಟಿತು. ಅದರಂತೆ 'ತಿಲೋತ್ತಮೆ' ಮೊಗಲರ ಆಳಿಕೆಯೊಳಗಿನ ರಜಪೂತರ ಚಿತ್ರವನ್ನು ಅವನ ಕಣ್ಣೆದುರಿಗೆ ಹಿಡಿಯಿತು. 'ಶಿವಪ್ರಭುವಿನ ಪುಣ್ಯ'ವು ಕೆಚ್ಚೆದೆಯ ಮರಾಠರ ಪರಿಚಯ ಮಾಡಿಕೊಟ್ಟಿತು. 'ಕನ್ನಡಿಗರ ಕರ್ಮಕಥೆ', 'ಕುಮುದಿನಿ' ಗಳು ವಿಜಯನಗರ ಸಮ್ರಾಜ್ಯದ ವಿಷಯಕ್ಕೂ ಕರ್ನಾಟಕದ ವಿಷ ಯಕ್ಕೂ ಅಭಿಮಾನವನ್ನು ತುಂಬಿದುವು. ಆಗ ಶ್ರೇಯಾಂಸನಿಗೆ ಸಾಲೆ ಯಲ್ಲಿ ತಾನು ಕಲಿಯುತ್ತಿರುವ ಇತಿಹಾಸವು ನೀರಸವೆನಿಸತೊಡಗಿತು. ಅಂಥ ಇತಿಹಾಸದ ಇಪ್ಪಿಗಳನ್ನು ಪಾಠಮಾಡುವದಕ್ಕಿಂತ ಇಂಥ ಹತ್ತೆಂಟು ಕಾದಂಬರಿಗಳನ್ನು ಇತಿಹಾಸ ಪುಸ್ತಕದಂತೆ ಓದಿಬಿಟ್ಟರೆ ಸಾಕೆನಿಸಿತು. ಅದೇ ಕಾಲಕ್ಕೆ ಕನ್ನಡ ಕುಲಪುರೋಹಿತರಾದ ಶ್ರೀ ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ'ವು ಶ್ರೇಯಾಂಸನ ಕೈಗೆ ಸಿಕ್ಕಿತು. ಅದರಿಂದಂತೂ ಅವನಲ್ಲಿದ್ದ ಕರ್ನಾಟಕದ ಅಭಿಮಾನವು ನೂರ್ಮಡಿಯಾಯಿತು. ಕನ್ನಡಿಗರ ಇತಿಹಾಸ, ಸಾಹಿತ್ಯ, ಶಿಲ್ಪಗಳ ಪರಿಚಯ ಬೆಳೆಯಿತು. ತಮ್ಮೂರ ಸುತ್ತಲಿನ ಹಳೆಯ ಕಟ್ಟಡಗಳನ್ನು ಕಲ್ಬರಹಗಳನ್ನು ಕಾಣುವ ಹೊಸ ದೃಷ್ಟಿಯೊಂದು ಶ್ರೇಯಾಂಸನಲ್ಲಿ ಉದಿಸಿತು. ಆ ದೃಷ್ಟಿಗೆ ಧಾರವಾಡದ 'ವಿದ್ಯಾವರ್ಧಕ ಸಂಘ'ದ ಪ್ರಕಟನೆಯಾದ 'ವಿದ್ಯಾರಣ್ಯ' ಪುಸ್ತಕವೂ ಸೂಕ್ಷ್ಮತೆಯನ್ನು ತಂದು ಕೊಟ್ಟಿತು. ಹೀಗೆ ಶ್ರೇಯಾಂಸನ ವಾಚನವು ವಿವಿಧರೀತಿಯಲ್ಲಿ ಸಾಗಿತು. ಅದರ ಪರಿಣಾಮವೂ ಅವನು ಆಗಾಗ ವರ್ಗದಲ್ಲಿ ಬರೆ ಯುವ ನಿಬಂಧಗಳ ಮೇಲೆ ಆಗುತ್ತಿದ್ದಿತು. ಅದನ್ನು ಕಂಡು ಅವನ

ಗುರುಗಳು ಹಿರಿ ಹಿರಿ ಹಿಗ್ಗುವರು. ಉಳಿದ ವಿದ್ಯಾರ್ಥಿಗಳ ಎದುರಿಗೆ ಶ್ರೇಯಾಂಸನ ನಿಬಂಧಗಳನ್ನು ಓದಿ ಹೇಳುವರು, ಪ್ರೋತ್ಸಾಹಿಸುವರು.

ಈಗೀಗ ಹಗಲಿರುಳು ಶ್ರೇಯಾಂಸನು ಆತ್ಮಾರಾಮ ಮಾಸ್ತರರ ಮನೆಯಲ್ಲಿಯೇ ಕಳೆಯುತ್ತಿದ್ದನು. ಒಂದು ರವಿವಾರ ಮಧ್ಯಾಹ್ನ, ಮಾಸ್ತರರ ಅಟ್ಟದ ಮೇಲೆ ಪುಸ್ತಕಗಳನ್ನು ತಿರುವಿ ಹಾಕುತ್ತಿರುವಾಗ ಅವನ ಕೈಗೆ 'ಸುಧಾರಕ' ಮಾಸಪತ್ರಿಕೆಯ ಕಟ್ಟು ಸಿಕ್ಕಿತು. ಅದರ ಪುಟಗಳನ್ನು ತೆಗೆದು ನೋಡುತ್ತಿದ್ದಂತೆಯೇ ಅದರಲ್ಲಿ ತನ್ನ ಗುರುಗಳ ಹೆಸರನ್ನು ಒಂದೆಡೆಗೆ ಕಂಡ. ಅದರ ಕೆಳಗೆ ಬರೆದ 'ಕನ್ನಡಿಗನ ಕಳವಳ' ಎಂಬ ಚಿಕ್ಕ ಲೇಖನವೊಂದನ್ನು ಆದರದಿಂದ ಆತುರದಿಂದ ಓದಿದ. ತನ್ನ ಗುರುಗಳೂ ಗಳಗನಾಥರಂತೆ, ಆಲೂರ ವೆಂಕಟರಾಯರಂತೆ ಬರಹಗಾರರೆಂಬುದನ್ನು ತಿಳಿದ ಅವನ ಆಶ್ಚರ್ಯಕ್ಕೆ ಅಳತೆಯೇ ಇಲ್ಲದಾಯಿತು. ತನ್ನ ಹತ್ತಿರ ಇದ್ದ ಗುರುಗಳ ಯೋಗ್ಯತೆಯನ್ನು ಇಷ್ಟು ದಿವಸ ಕಳೆದರೂ ತಿಳಿಯದೆ ಹೋದೆನಲ್ಲ-ಎಂದು ಮನದಲ್ಲಿಯೇ ನೊಂದುಕೊಂಡ. ಅವರ ವಿಷಯಕ್ಕಿದ್ದ ಆದರವು ಇಂದು ಶ್ರೇಯಾಂಸನಲ್ಲಿ ಹತ್ತು ಮಡಿಯಾಯಿತು. ಭಕ್ತಿಯಿಂದ ಆ ಲೇಖನವನ್ನು ಹೃದಯಕ್ಕೆ ಒತ್ತಿಕೊಂಡ. ತನ್ನ ಗುರುವಿನ ಕಳವಳವೆಲ್ಲ ಅವನ ಹೃದಯವನ್ನು ವ್ಯಾಪಿಸಿದಂತಾಯಿತು. ಹಾಗೆಯೇ ಅದೆಷ್ಟು ಹೊತ್ತು ಕುಳಿತಿದ್ದನೋ! "ಶ್ರೇಯಾಂಸ..." ಎಂದು ಕೆಳಗಿನಿಂದ ಗುರುಗಳು ಕೂಗಿದಾಗಲೇ ಅವನಿಗೆ ಎಚ್ಚರ. ಆಶ್ಚರ್ಯದಿಂದ ಅಟ್ಟದಿಂದ ಕೆಳಗಿಳಿದು ಬಂದ, ಶ್ರೇಯಾಂಸ. ಕೈಯಲ್ಲಿ ಹಾಗೇ 'ಸುಧಾರಕ'ದ ಕಟ್ಟಿತ್ತು!

ಇದೀಗ ಆತ್ಮಾರಾಮ ಮಾಸ್ತರರು ಊರಿಂದ ಬಂದಿದ್ದರು. ಮಕ್ಕಳಿಗೆಂದು ತಂದ ಹಣ್ಣು ಹಂಪಲಗಳನ್ನು ಶ್ರೇಯಾಂಸನಿಗೂ ಕೊಟ್ಟರು. ಎಲ್ಲರೊಡನೆ ಸೇರಿ ತಿಂದ. ಶ್ರೇಯಾಂಸ ಅಟ್ಟದ ಮೇಲೆ

ಇರುವನೆಂಬುದನ್ನು ತಮ್ಮ ಹಿರಿಯ ಮಗನಿಂದ ಕೇಳಿದ ಅವರು ಕೈ ಕಾಲುಗಳನ್ನು ತೊಳೆಯುವ ಮುಂಚೆಯೇ ಅವನನ್ನು ಕೂಗಿದ್ದರು! ಅವನಿಗೊಂದು ವಿಶೇಷ ಸಂಗತಿಯನ್ನು ತಿಳಿಸಬೇಕಾಗಿದ್ದಿತವರಿಗೆ. ಅದರಂತೆ ಶ್ರೇಯಾಂಸನಿಗೂ ಗುರುಗಳಿಗೆ ಅವರ ಲೇಖನ ತಾನು ಓದಿದ ಸಂಗತಿಯನ್ನು ಅರುಹಬೇಕಾಗಿದ್ದಿತು, ಆನಂದವನ್ನು ವ್ಯಕ್ತ ಪಡಿಸಬೇಕಾಗಿದ್ದಿತು. ಇಬ್ಬರಿಗೂ ತಮ್ಮ ತಮ್ಮ ವಿಷಯಗಳನ್ನು ಹೇಳುವ ಆತುರ.... ಶ್ರೇಯಾಂಸನೇ ಮಾತಿಗೆ ಮೊದಲು ಮಾಡಿದ:

"ತಮ್ಮ ಕಳವಳ ಕಂಡೆ!"

ಆತ್ಮಾರಾಮ ಮಾಸ್ತರರಿಗೆ ಒಮ್ಮೆಲೇ ಶ್ರೇಯಾಂಸನ ಮಾತಿನ ಅರ್ಥ ಹೊಳೆಯಲಿಲ್ಲ. ಕುತೂಹಲದಿಂದ ಅವನ ಕಡೆಗೆ ನೋಡ ತೊಡಗಿದರು. ಆಗ ಅವನ ಕೈಯೊಳಗಿನ 'ಸುಧಾರಕ'ದ ಕಟ್ಟಿನ ಕಡೆಗೆ ಅವರ ದೃಷ್ಟಿ ಹರಿಯಿತು. ಕೂಡಲೆ ಆನಂದದಿಂದ ಅವರ ಬಾಯಿಂದ ಉದ್ಗಾರ ಹೊರಟಿತು.

"ಹೋ! ಹೋ! 'ಕನ್ನಡಿಗನ ಕಳವಳ'ವನ್ನು ಓದಿದೆಯಾ?"

ಆತ್ಮಾರಾಮರಿಗೆ ಹಿಡಿಸಲಾರದಷ್ಟು ಹಿಗ್ಗು! ತನ್ನ ಲೇಖನ ವೊಂದನ್ನು ತನ್ನ ಶಿಷ್ಯ ಓದಿದನಲ್ಲ ಎಂಬ ಉಬ್ಬು. ಅದೇ ಉಬ್ಬಿನಲ್ಲಿ ಶ್ರೇಯಾಂಸನಿಗೆ ಕೇಳಿದರವರು:

"ಹೇಗೆನಿಸಿತಾ ಲೇಖ?"

"ಚೆನ್ನಾಗಿದೆ!"

ಪಾಪ ಕನ್ನಡ ಆರನೆಯ ತರಗತಿಯಲ್ಲಿ ಓದುವ ವಿದ್ಯಾರ್ಥಿ ಇದಕ್ಕಿಂತ ಹೆಚ್ಚಿಗೆ ಏನನ್ನು ಹೇಳಬಲ್ಲ. ಅವನಿಗೆ ತಿಳಿಯುವುದಾದರೂ ಎಷ್ಟು? ಆದರೂ ಅವನನ್ನು ಮುಂದೆ ಕೂಡಿಸಿಕೊಂಡು ಆತ್ಮಾರಾಮ ಮಾಸ್ತರರು ತಾಸೆರಡು ತಾಸುಗಳವರೆಗೆ ಗಡಿನಾಡಿನಲ್ಲಿರುವ ಕನ್ನಡದ ಸ್ಥಿತಿ, ಕನ್ನಡಿಗರ ಗತಿಗಳನ್ನೆಲ್ಲಾ ವಿವರಿಸಿದರು. ಕನ್ನಡ ಸಾಲೆ ಯಲ್ಲೂ ಕೂಡ ಕೆಲವು ದಿನಗಳ ಹಿಂದೆ ಮರಾಠಿಯನ್ನೂ ಕಲಿಸುವ

ಪರಿಸ್ಥಿತಿ ಹೇಗಿತ್ತೆಂಬುದನ್ನು ವಿವರಿಸಿದರು. ಅದರ ಜೊತೆಗೆ ಶಾಂತ ಕವಿಗಳ ವಿಷಯವೂ ತುರುಮುರಿಯುವರ ಮಾತೂ ಬಂದಿತು. ಶಾಂತ ಕವಿಗಳ ಸೇವೆಯನ್ನೂ ಅವರು ಕನ್ನಡಿಗರಲ್ಲಿ ಉಂಟು ಮಾಡಿದ ಜಾಗೃತಿಯನ್ನೂ ತುಂಬಾ ಹೊಗಳಿದರು. ಅವರ 'ವಿಜಯನಗರ ಸಾಮ್ರಾಜ್ಯ' ಕೀರ್ತನದೊಳಗಿನ ಕೆಲವು ಪದಗಳನ್ನು ಅಂದು ತೋರಿಸಿದರು. ಕನ್ನಡದ ರಾಷ್ಟ್ರೀಯಕವಿ ಶಾಂತಕವಿ ಎಂದರು. ಅವರು ಊರೂರು ತಿರುಗಿ ಕನ್ನಡದ ಕೀರ್ತನೆಯನ್ನು ಪ್ರಚಾರವನ್ನು ಮಾಡಿದ ಬಗೆಯನ್ನೂ ವಿವರಿಸಿದರು. ಕೊನೆಗೆ ಆವೇಶದಲ್ಲಿ ಅವರೂ ಕನ್ನಡ ಸಾಲೆಯ ಶಿಕ್ಷಕರೆಂದು ಹೇಳಿ ಮಾತು ಮುಗಿಸಿದರು.

ಮನೆಯು ದೊಡ್ಡ ಮಳೆ ಕುಟ್ಟಿ ಬೆಳಗಿದ ಸೃಷ್ಟಿಯಂತಿತ್ತು. ಮಾಸ್ತರರ ಹೆಂಡತಿಯೂ ಮಕ್ಕಳೂ ತಮ್ಮ ತಮ್ಮ ಸ್ಥಳಗಳಲ್ಲಿ ಸುಮ್ಮನೆ ಕುಳಿತು ಕೇಳುತ್ತಿದ್ದರು. ಶ್ರೇಯಾಂಸನಂತೂ ಗುರುಗಳ ಮುಖದಲ್ಲಿ ತನ್ನ ದೃಷ್ಟಿಯನ್ನೆಲ್ಲ ಕೇಂದ್ರೀಕರಿಸಿ, ಮನಸ್ಸುಗೊಟ್ಟು ಕೇಳುತ್ತಿದ್ದಾನೆ. ಗುರುಶಿಷ್ಯರಿಬ್ಬರಿಗೂ ಹೊರಗಿನ ಜಗತ್ತಿನ ಅರಿವೇ ಇರಲಿಲ್ಲ. ಹಸಿವೆಯ ಪರಿವೇ ಇರಲಿಲ್ಲ, ಆತ್ಮಾರಾಮರಿಗೆ.

"ಮುಂಜಾನೆ ಯಾವಾಗ್ಗೆ ಹೊರಟರುವಿರೊ ಬೆಳಗಾವಿಯಿಂದ.... ಊಟ ಆಗಿದೆಯೋ ಇಲ್ಲೋ !"

ಮೆಲ್ಲನೆ ಮಾಸ್ತರರ ಮಡದಿ ಮಾತೆತ್ತಿದಳು.

"ಊಟ ಆಗಬೇಕು...."

ಎಂದಿಷ್ಟೇ ಆತ್ಮಾರಾಮರು ನುಡಿದರು. ಅವರ ಮನಸ್ಸೂ ಇನ್ನೂ ಸ್ತಿಮಿತಕ್ಕೆ ಬಂದಂತಿರಲಿಲ್ಲ. ಭಾವಾವೇಶ ತಗ್ಗಿರಲಿಲ್ಲ. ಹಾಗೆಯೇ ಶ್ರೇಯಾಂಸನ ಕಡೆಗೆ ಹೊರಳಿ,

"ಇನ್ನೊಂದು ಕೆಲಸ ಆಗಬೇಕು. ಅದಕ್ಕೇ ನಾನು ಇಂದು ಅವಸರದಲ್ಲಿ ಊರಿಗೆ ಬಂದುದು...."

"ಏನು ?"

ಎಂದು ಕೇಳುವ ಪಾತ್ರತೆ ಶ್ರೇಯಾಂಸನಲ್ಲಿ ಇತ್ತೊ ಇಲ್ಲವೋ ಆದರೂ ಆತ ಕೇಳಿದ.

"ಇಲ್ಲಿ ಬಾ !"

ಎಂದು ಶ್ರೇಯಾಂಸನನ್ನು ಕರೆದುಕೊಂಡು ಆತ್ಮಾರಾಮ ಮಾಸ್ತರರು ಅಟ್ಟವನ್ನು ಏರಿದರು. ಮೇಲೆ ಹೋಗಿ, ತಮ್ಮ ಜನಿವಾರದೊಳಗಿನ ಬೀಗದ ಕೈಯಿಂದ ಅಲ್ಲಿಟ್ಟ ಒಂದು ಪೆಟ್ಟಿಗೆಯ ಬೀಗವನ್ನು ತೆಗೆದರು. ಆ ಪೆಟ್ಟಿಗೆಯೊಳಗಿನ ಒಂದು ದೊಡ್ಡ ಕಾಗದದ ಕಟ್ಟನ್ನು ಹೊರಗೆ ತೆಗೆದು, ಶ್ರೇಯಾಂಸನ ಕೈಗಿತ್ತರು. ಹಾಗೆಯೇ ಹೇಳಿದರು :

"ಇವು ನಾನು ಹಿಂದಕ್ಕೆ ಬರೆದ ನಾಟಕಗಳ ಪ್ರತಿಗಳು. ಇವುಗಳಲ್ಲೊಂದನ್ನು ಆಯ್ದು ನಮ್ಮ ಸಾಲೆಯಲ್ಲಿ ಮುಂದಿನ ವಾರದಲ್ಲಿ ಆಡಬೇಕು. ಸಾಹೇಬರು ಇನಸ್ಪೆಕ್ಟರರನ್ನು ನಮ್ಮ ಸಾಲೆಗೆ ಕರೆದುಕೊಂಡು ಬರುತ್ತಾರಂತೆ...."

ಶ್ರೇಯಾಂಸ ಭಕ್ತಿಯಿಂದ ಅವುಗಳನ್ನು ಸ್ವೀಕರಿಸಿ ಎತ್ತಿ ಕಣ್ಣಿಗೊತ್ತಿಕೊಂಡ. ದೇವರ ಪ್ರಸಾದ ಸಿಕ್ಕಷ್ಟು ಆನಂದವಾಯಿತವನಿಗೆ.

"ಊಟಕ್ಕೆ ಬರತೀರಾ ?"

ಕೆಳಗಿನಿಂದ ಆತ್ಮಾರಾಮರಿಗೆ ಕರೆ ಬಂದಿತು.

"ಈಗ ಬರುವೆ. ನೋಡುತ್ತಿರು...."

ಎಂದು ಶ್ರೇಯಾಂಸನಿಗೆ ಹೇಳಿ, ಆತ್ಮಾರಾಮ ಮಾಸ್ತರರು ಕೆಳಗೆ ಹೋದರು. ಆದರೆ ಅವರ ಮನಸ್ಸು ಅಲ್ಲಿಯೇ ಸುಳಿಯುತ್ತಿತ್ತು.

ಶ್ರೇಯಾಂಸ ಹಾಸಿದ ಗುಡಾರದ ಮೇಲೆ ಕುಳಿತು, ನಾಟಕಗಳ ಕಟ್ಟನ್ನು ಬಿಚ್ಚಿ, ನಾಲ್ಕಾರು ನಾಟಕಗಳ ಪುಟಗಳನ್ನು ತಿರುವಿ ಹಾಕಿದ. ಆಮೇಲೆ ಒಂದು ಏಕಾಂತ ನಾಟಕವನ್ನು ಕೈಗೆ ತಕ್ಕೊಂಡು ನೋಡಿದ. 'ಈತನೇ ವಿದ್ಯಾರ್ಥಿ!' ಎಂಬ ಏಕಾಂತ ನಾಟಕವದು.

ಅದನ್ನೋದುವಲ್ಲಿ ಮಗ್ನನಾಗಿಬಿಟ್ಟ. ಮೈಯಲ್ಲೊಂದು ಶಕ್ತಿ ಸಂಚರಿಸಿ ದಂತಾಯಿತು. ಒಳಗಣ್ಣು ತೆರೆಯಿತು. ಏಕಲವ್ಯನ ಗುರುಭಕ್ತಿ ಯಲ್ಲಿ ತಾನೂ ತೇಲಿ ಹೋಗಿಬಿಟ್ಟ.

ಹೊರಗೆ ಸೂರ್ಯ ಮುಳುಗಿದ. ಸಾವಕಾಶವಾಗಿ ಕತ್ತಲೆಯು ಸೃಷ್ಟಿಯನ್ನು ಆವರಿಸತೊಡಗಿತು. ಇದಾವುದರ ಅರಿವೂ ಶ್ರೇಯಾಂಸನಿ ಗಿರಲಿಲ್ಲ.

೫

ನಾಟಕ ನೋಡಲಿಕ್ಕೆ ಹೋದವರ ಬಾಯಲ್ಲೆಲ್ಲ ಏಕಲವ್ಯ ಪಾತ್ರದ ಹೊಗಳಿಕೆಯೋ ಹೊಗಳಿಕೆ. ಈ ಹೊಗಳಿಕೆಯು ನೆರೆಮನೆಯವರೊಬ್ಬರ ಮುಖಾಂತರ ಶ್ರೇಯಾಂಸನ ಮನೆಗೂ ತಲ್ಪದಿರಲಿಲ್ಲ. ಅದು ಮೊದಲು ಸುಂದರವ್ವನ ಕಿವಿಗೆ ಬಿದ್ದಿತು. ಅವಳು ತಲೆಬಾಗಿಲಿನ ಮೆಟ್ಟುಗಲ್ಲಿನ ಮೇಲೆ ಕುಳಿತಾಗ ನೆರೆಮನೆಯಲ್ಲಿರುವ ಅಂಗಡಿಕಾರರೊಬ್ಬರು ಊಟ ಮಾಡಿ ಅಂಗಡಿಗೆ ಹೋಗುತ್ತ ಹೇಳಿದರು,—

"ಏನು ಸುಂದರಾ, ನಿನ್ನ ಸೋದರಳಿಯು ನಾಟಕ ಚೆನ್ನಾಗಿ ಆಡಿದನಲ್ಲ. ಬಾಳಪ್ಪ ನೋಡಲಿಕ್ಕೆ ಬಂದಿದ್ದೇನು ಸಾಲೆಯು ಕಡೆಗೆ?"

"ಇಲ್ಲ; ಆದೇನೂ ನಮಗೆ ಹೇಳಿಲ್ಲ ಶ್ರೇಯಾಂಸ...."

ಎಂದಳು ಸುಂದರವ್ವ.

"ಹೇ! ಬಹಳ ಚಲೋ ಮಾಡಿದ ಬಿಡು ನೀ. ಏನು ಅವನ ಮಾತು, ಏನು ಅವನ ಹಾವಭಾವ.... ಹೇಳಲಿಕ್ಕೆ ಬೇಡ. ಎಲ್ಲಾರೊಳಗೂ 'ಒನ್ ನಂಬರ' ನೋಡು."

"ಎಲ್ಲಾ ನಿಮ್ಮ ಪುಣ್ಯದಿಂದಲೇ ಅಲ್ಲ!"

ಎಂದು ಹೇಳಿ ಸುಂದರವ್ವ ಒಳಗೆ ಬಂದಳು. ಅವಳಿಗೂ ತನ್ನ ಅಳಿಯನ ಹೆಚ್ಚುಗಳವನ್ನು ಕೇಳಿ ಸಂತಸವಾಗಿತ್ತು. ಅದನ್ನು ಸರಸವ್ವನಿಗೆ ಬೀರುತ್ತ ನುಡಿದಳು:

"ಏನೋ ನಮ್ಮ ಶ್ರೇಯಾಂಸ ನಾಟಕದೊಳಗೆ ಇದ್ದ ಶಿಂತಲ್ಲ ಸಾಲೆಯೊಳಗ...."

"ಮೊನ್ನೆ ಏನೋ ಅನ್ನುತ್ತಿದ್ದ ತಾಯಿ !"

"ಮನೆಯೊಳಗೆ ಗಂಡಸರು ಇದ್ದೂ ಇಲ್ಲದಂತೆಯೇ. ಒಬ್ಬರೂ ಹೋಗಿಲ್ಲ, ನೋಡಿಲ್ಲ. ಇನ್ನೊಬ್ಬರು ಬಂದು ಹೇಳಿದ ಮೇಲೇ ನಮಗ ಗೊತ್ತು ಆಗೋದು...."

"ಪದಮಾ ಅಣ್ಣಾ ಅಂತೂ ನಾಟಕ ನೋಡೋದೇ ಇಲ್ಲ. ನಾಟಕ ನೋಡಿದರೆ ಕರ್ಮ ಕಟ್ಟತದ ಅಂತಾರ ಅವರು. ಅಂದ ಮೇಲೆ ನಮ್ಮ ಶ್ರೇಯಾಂಸ ನಾಟಕದೊಳಗ ಪಾರ್ಟ ಮಾಡಿದರೆ ಹೇಗೆ ಮನಸ್ಸಿಗೆ ಬಂದೀತವರಿಗೆ....? ಇವರಂತೂ ಹೊಲಾ ಆಯ್ತು ಇವ ರಾಯ್ತು.... ಊರ ಸುದ್ದಿಯೇ ಅವರಿಗೆ ಇರುವುದಿಲ್ಲ....ಅಂದ ಮೇಲೆ ಯಾರ ನೋಡಲಿಕ್ಕೆ ಹೋಗತಾರ ತಾಯಿ ! ಮಂದಿ ಹೇಳಿದ್ದೇ ಕೇಳಿ **ಸಂತೋಷ ಪಡೋದಲ್ಲ ನಾವು....**"

ಮಗನ ಗುಣಗಾನದ ವಿಷಯವಾದುದರಿಂದ ಸರಸವ್ವನ ಮಾತು ತುಸು ಉದ್ದವಾಯಿತು ಧ್ವನಿಯಲ್ಲಿ ಸ್ವಲ್ಪ ಅಭಿಮಾನವೂ ಇತ್ತು.

ಇದು ಸುಂದರವ್ವನ ಯಾವ ಸುಪ್ತ ಭಾವನೆಯನ್ನು ಕೆರಳಿಸಿತೋ ಏನೋ. ಅವಳೇ ಆನಂದದಿಂದ ತಂದ ಸುದ್ದಿಗೆ ಅವಳೇ ಈಗ ಪ್ರತಿ ಭಟಿಸಲು ಮುಂದಾದಳು :

"ಬಣ್ಣಾ ಬಳಿದುಕೊಂಡು ಏನಂತ ನಾಟಕ ಮಾಡಬೇಕು, ನಮ್ಮ ಶ್ರೇಯಾಂಸ ? ಇಂಥಾ ಕೆಲಸ ಕಸಬಿನಿಯರ ಮಕ್ಕಳು ಮಾಡ ಬೇಕು ತಾಯಿ !"

ಅತ್ತಿಗೆಯ ಮಾತಿಗೆ ಪ್ರತಿಯಾಗಿ ಹೇಳಲಾರದೆ ಸರಸವ್ವ ಸುಮ್ಮ ನಾದಳು. ನಾದಿನಿಯಿಂದ ವಿರೋಧ ಬಾರದುದರಿಂದ ಸುಂದರವ್ವನ ಮಾತಿನ ಶಕ್ತಿ ಕುಗ್ಗಿತಾದರೂ ಮಾತು ಮುಂದುವರಿಯಿತು :

"ಈಗೀಗ ಶ್ರೇಯಾಂಸ ಬಹಳ ಹಾದೀ ಬಿಟ್ಟ ಹೋಗಲಿಕ್ಕೆ ಹತ್ತಿದಾನ.... ಅವನಿಗೊಂದ ಮಾಸ್ತರ ಮನೆ ಆಗೇದ. ಹಗಲೂ ರಾತ್ರಿ ಅಲ್ಲೇ ಇರತಾನ. ಓದತಾನೋ, ಏನು ಬರೇ ಇಂಥಾ ನಾಟಕ

ಮಾಡತ ತಿರಗತಾಸೋ ಯಾರಿಗೆ ಗೊತ್ತು ? ಕೇಳಿದರೆ ಅಭ್ಯಾಸಕ್ಕೆ ಸೋಗತೇನ ಅಂತ ಹೇಳತಾನ....ಈಗಿನ ಹುಡುಗರ ವಿಷಯಕ್ಕ ಏನೂ ಹೇಳಲಿಕ್ಕೆ ಬರುವುದಿಲ್ಲ.... ಸರಸಾ. ನಮ್ಮ ಬೆನ್ನಿಗೇನು ಕಣ್ಣು ಅವ ? ಇದ್ದ ಹುಡುಗ ಒಬ್ಬ ಹೀಗೆ ನಾಟಕಾ ತಮಾಶಾ ಅಂತ ಮಾಡತ ಹೋದರೆ ತೀರಿತಲ್ಲ.... ವ್ರತ, ನಿಯಮ ಹೇಗೆ ನಡೆಯಬೇಕು ಮುಂದೆ ಮನೆಯೊಳಗ...."

ಸುಂದರವ್ವನ ಮಾತು ಹೀಗೆಯೇ ಇನ್ನೆಷ್ಟು ಹೊತ್ತು ಸಾಗುತ್ತಿದ್ದಿತೋ ಏನೋ. ಹೊರಗಿನಿಂದ ಪದ್ಮಪ್ಪ ಬಂದು,

"ಏನದು ?"

ಎಂದು ಕೇಳಿದುದರಿಂದ ಅದಕ್ಕೆ ತಡೆಯಾಯಿತು.... ಆದರೂ ಪತಿಯ ಎದುರಿಗೂ ವಿಷಯವನ್ನು ಸುಂದರವ್ವ ಮಂಡಿಸದೆ ಬಿಡಲಿಲ್ಲ. ಈ ನ್ಯಾಯಾಧೀಶನ ಮುಂದೆ ತನಗೇ ಗೆಲುವೆಂಬುದು ಅವಳಿಗೆ ಗೊತ್ತಿತ್ತು. ಅಂದರೂ ಪದ್ಮಪ್ಪನ ನುಡಿಯು ಬೇರೆಯಾಯಿತು :

"ಈ ಜಗತ್ತೇ ಒಂದು ನಾಟಕ....ನಾವೆಲ್ಲರೂ ಸಾಯುವವರೆಗೆ ನಾಟಕ ಆಡುತ್ತ ಇದ್ದೇವೆ. ಇದನ್ನು ತಿಳಿಯದವರಿಗೆ ತಿಳಿಸಿಕೊಡಲಿಕ್ಕೆಂದು ಆ ಸಣ್ಣ ನಾಟಕ ಅವೆ. ಅದರೊಳಗ ಭಾಗ ತಕ್ಕೊಂಡರೆ ಏನಾತು ? ಅವರೇನು ಕಂಪನಿ ಮಾಡಿಕೊಂಡ ಊರೂರ ತಿರಗುವದಿಲ್ಲ ಏನಲ್ಲ.... ಸಂತೋಷಕ್ಕಂತ ಮಾಡುವರು. ಸಂಸಾರದಲ್ಲಿ ಇರುವವರಿಗೆ ಇದೆಲ್ಲ ಬೇಕು. ಅದರಿಂದ ವೈರಾಗ್ಯ ಹುಟ್ಟಿದಾಗ ಅವರೇ ಬಿಡುವರಲ್ಲ ! ನಾವೇಕೆ ಅಡ್ಡ ಆಗಬೇಕು ಅವರಿಗೆ ?"

ಶ್ರೇಯಾಂಸನ ವಿಷಯಕ್ಕೆ ಪದ್ಮಪ್ಪನಲ್ಲಿದ್ದ ಅಖಂಡ ವಿಶ್ವಾಸವು ಅವನಿಂದ ಹೀಗೆ ನುಡಿಸಿತು. ಅಲ್ಲದೆ ಹೆಂಡತಿಯಲ್ಲಿ ಉದಿಸಿದ್ದು ಮಾನಕಷಾಯವೆಂದರಿತಿದ್ದ ಅವನು ಇನ್ನಿಷ್ಟು ಮಾತುಗಳನ್ನು ಮುಂದರಿಸಿದ :

"ಈಗ ನಿರ್ವಾಣ ಸ್ವಾಮಿಗಳಾಗಿಲ್ಲ........ಗೋಕಾಕದ ಶ್ರೀ

ಪಾಯಸಾಗರರು, ಅವರು ಮೊದಲು ನಾಟಕದೊಳಗೆ ಪಾರ್ಟ ಮಾಡಿದವರೇ. ಆ ಆಟ ಎಲ್ಲಾ ಮುಗಿದ ಈಗ ನಗ್ನಸ್ವಾಮಿಗ ಳಾದರು, ಅಭಿನವ ಸಮಂತಭದ್ರ ಅನಿಸಿಕೊಂಡರು ! ಅದಕ್ಕೇನು ಹೇಳಲಿಕ್ಕೆ ಬರುವುದಿಲ್ಲ. ಆತ್ಮಜ್ಞಾನ ಒಂದು ಇತ್ತೆಂದರೆ ಅವನು ಏನು ಬೇಕಾದದ್ದನ್ನ ಮಾಡಲಿ. ಇಂದಿಲ್ಲ ನಾಳೆ ಆತ್ಮಕಲ್ಯಾಣದ ಹಾದಿ ಹಿಡೀತಾನ. ಅದೇ ಇಲ್ಲ ಆದರೆ ಈ ಪ್ರಪಂಚ ತಪ್ಪಿದ್ದಲ್ಲ. ಹುಟ್ಟು ಸಾವಿನೊಳಗೆ ಗೋಪ್ತಿ ಕುಡಿಯುತ್ತ ಹೋಗೋದೇ. ಅಂಥಾ ಜೀವೇ ನಲ್ಲ ನಮ್ಮ ಶ್ರೇಯಾಂಸನದು."

ಶ್ರೇಯಾಂಸನ ನಡತೆಯನ್ನು ಪ್ರತಿಪಾದಿಸುವ ದಿಸೆಯಲ್ಲಿ ಪದ್ಮಪ್ಪ ನಿಂದ ಮಾತುಗಳು ಹೊರಟವು. ಇದನ್ನು ಕೇಳಿ ಒಂದು ಕ್ಷಣ ಸರಸವ್ವ ನಿಗೆ ಸಂತೋಷವೇನೋ ಆಯಿತು. ಆದರೆ ಮರುಕ್ಷಣದಲ್ಲಿ ತನ್ನ ಶ್ರೇಯಾಂಸನೂ ಸ್ವಾಮಿಯಾದಾನೆ ? ಎಂಬ ಪ್ರಶ್ನೆಯು ಅವಳ ಮನಸ್ಸಿನ ಎದುರು ಬಂದು ನಿಂತು ಹೆದರಿಸಿತು. ಹಾಗಾದರೆ ತನ್ನ ಸಂಸಾರದ ಗತಿಯೇನು ? ಇದ್ದೊಬ್ಬ ಮಗ ದೀಕ್ಷೆ ತಕ್ಕೊಂಡು ಹೋಗಿ ಬಿಟ್ಟರೆ.... ? ಪದ್ಮಪ್ಪನ ನಡೆ ನುಡಿಗಳಲ್ಲಿ ತುಂಬ ಶ್ರದ್ಧೆಯನ್ನು ಇಟ್ಟು ಕೊಂಡಿದ್ದ ಆ ಹೆಣ್ಣು ಜೀವಕ್ಕೆ ಈ ವಿಚಾರವನ್ನು ಇಷ್ಟಕ್ಕೇ ಬಿಟ್ಟು ಕೊಡಲಿಕ್ಕೆ ಆಗಲಿಲ್ಲ. ಹಗಲೆಲ್ಲ ವಿಚಾರಿಸಿ ವಿಚಾರಿಸಿ ತಲೆ ಕೆಡಿಸಿ ಕೊಂಡಳು. ಮಗನ ಮನಸ್ಸಿನ ಒಲವನ್ನು ತಿಳಿದುಕೊಳ್ಳಲಿಕ್ಕೆಂದು ಸಂಜೆಯ ಊಟದ ಹೊತ್ತಿಗೆ ಮಾತನ್ನೆತ್ತಿದಳು.

"ಈ ಹೊತ್ತು ಲಗೂನೆ ಹೋಸಕ್ಕೆ ಬಂದಿ ಬಾಳಾ ?"

"ಹಾಗೇ ಓದುತ್ತ ಕುಳಿತರೆ ಸಂಜೆ ಆಗಿ ಬಿಡತದ. ರಾತ್ರಿ ಊಟ ಮಾಡಿದರೆ ಹಿರಿಯರಿಗೆ ಸೇರುವದಿಲ್ಲ....."

"ಈಗೇನು ನೀನು ನಿಯಮ ಮಾಡಿರುವಿ ಏನು ? ಇನ್ನೂ ಸಾಲೆ ಕಲಿಯುವ ಹುಡುಗ ನೀನು. ಯಾವಾಗ್ಗೆ ಉಂಡರೇನು ?"

ಹಿಂದಿನ ದಿನದಂತಿದ್ದರೆ ಸರಸಪ್ಪ ಮಗನಿಗೆ ಹೀಗೆಂದೂ ಉಪ

ದೇಶಿಸುತ್ತಿರಲಿಲ್ಲ. ಆದರೆ ಇಂದು ಅವಳಿಗೆ ಮಗನು ಇಂಥ ಯಾವ ವ್ರತೋಪವಾಸಗಳ ಕಡೆಗೂ ಮನಸ್ಸು ಹಾಕಬಾರದೆಂದೆನಿಸಿದ್ದಿತು.

"ನಮ್ಮ ಆರೋಗ್ಯದ ನಿಯಮ, ಧರ್ಮದ ನಿಯಮ, ಬಹಳ ಹೊಂದಿ ಹೋಗತಾವ ಅವ್ವ ....!"

"ಧರ್ಮ ಕರ್ಮ ಎಲ್ಲ ಮುಪ್ಪಿನವರಾದ ಮೇಲೆ. ಇಷ್ಟು ಇನ್ನು ಹುಡುಗ ಇದ್ದಾಗ ಅದೇನು ಮಾಡೋದಪ್ಪ....!"

"ಧರ್ಮದ ವಿಷಯಕ್ಕೆ ಹಾಗೆ ಹೇಗೆ ಹೇಳೋದವ್ವ....! ಧರ್ಮ ಅಂಬೋದು ಎಲ್ಲರಿಗೂ ಬೇಕಲ್ಲ....!"

ಶ್ರೇಯಾಂಸ ಎಲ್ಲಿಯೋ ಓದಿದ ನಾಲ್ಕು ಮಾತುಗಳನ್ನು ತಾಯಿಯ ಎದುರಿಗೆ ಹೇಳುತ್ತಿದ್ದ. ಅವನು ಧರ್ಮವನ್ನು ಕುರಿತು ಇನ್ನೂ ವಿಚಾರಿಸಿರಲಿಲ್ಲ. ವಿಚಾರಿಸುವ ಯೋಗ್ಯತೆಯನ್ನೂ ಪಡೆದಿರ ಲಿಲ್ಲ. ಆದರೂ ಆತನ ಈ ಮಾತುಗಳು ಸರಸವ್ವನ ಹೃದಯದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿದುವು. ತಂದೆ ಮನೆಗೆ ಬರುವ ಮುಂಚೆ ಊಟ ಮುಗಿಸಿ ಮಾಸ್ತರರ ಮನೆಗೆ ಅಭ್ಯಾಸಕ್ಕೆ ಹೋಗಬೇಕೆಂಬ ಹವಣಿಕೆಯಲ್ಲಿದ್ದ ಅವನಿಗೆ ತಾಯಮನದ ಕಳವಳದ ಅರ್ಥ ಹೇಗಾ ದೀತು ಪಾಪ !

ಸರಸವ್ವನೇ ಬೇರೆ ವಿಷಯಕ್ಕೆ ಮಾತನ್ನು ಎಳೆದಳು :

"ನಾಳೆ ಆದಿತ್ಯವಾರ. ಸಾಲೆಯಿಲ್ಲ. ನೀನೂ ಒಬ್ಬ ಬರುವಿ. ಆಳ ಒಬ್ಬ ಕಡಿಮೆ ಹತ್ತುವ ಅಂತ ಹತ್ತಿಯೊಳಗ ಎಡೆ ಹೊಡೆಯ ಬೇಕಂತ ಮಾಡಿದ್ದಾರೆ. ನೀನೂ ನಾಳೆ ಹೊಲಕ್ಕೆ ಹೋಗುವಿಯಲ್ಲ ?"

"ನನಗೆ ಅಭ್ಯಾಸ ಬಹಳ ಅದೆ...."

"ಒಂದು ಪಾವಲಿ ಉಳಿಯತದಲ್ಲ." ಸ್ವಲ್ಪ ತಡೆದು "ಪದ್ಮಪ್ಪ ಧರ್ಮ ಧರ್ಮ ಅಂತ ಹೊಲ ಉಳುವುದು ಹರಗುವುದು ಯಾವ ದನ್ನೂ ಮಾಡೋದಿಲ್ಲ. ಹಿಂಸಾ ಆಗತದ ಅಂತಾನ. ಮನೆಯೊಳಗೆ ಇದ್ದರೂ ಒಬ್ಬ ಸ್ವಾಮಿಯೇ ಇದ್ದಂತೆ ಇದ್ದಾನ. ಅವನನ್ನು ಲೆಕ್ಕ

ದೊಳಗೆ ನಾವು ಹಿಡಿಯುವಂತಿಲ್ಲ. ನೀ ಒಬ್ಬ ಅಭ್ಯಾಸ ಅಭ್ಯಾಸ ಅಂತ ಯಾವುದಕ್ಕೂ ಉಪಯೋಗ ಬೀಳುವದಿಲ್ಲ. ಅಂದ ಮೇಲೆ ಸಂಸಾರ ಹೇಗೆ ಸಾಗಬೇಕು? ಸುಗ್ಗಿಯ ದಿವಸ ಬಂದುವು. ಹಕ್ಕಿಯೂ ಕಾಳು ಕೂಡಹಾಕುವ ದಿವಸ ಇವು! ಈಗ ಹೊಲಕ್ಕ ಬರುವದಿಲ್ಲ ಅಂದರ ಹೇಗೆ? ನಿನಗೇನು ಸಾಲೆ ಬಿಟ್ಟು ಬಾ ಅನ್ನುವರೇನು? ಬಿಡುವು ಇದ್ದ ದಿವಸ ಬರುವದಿಲ್ಲ ಅಂದರೆ ಹೇಗೆ? ಅವರೇ ಈಗ ಹೊಲದಿಂದ ಬರುವರು. ಏನು ಹೇಳಿ ಹೋಗುವಿ ಹೋಗು....ನಸ ಗಂತೂ ಹೇಳು ಅಂದಿದ್ದರು....ಹೇಳದೆ...."

ಸರಸವ್ವ ಸ್ವಲ್ಪ ಬಿರುಸಾಗಿ ಮಾತನಾಡಿದಳು. ಆಡುವಾ ಗೇನೋ ಆಡಿದಳು. ಮಗನ ಮುಖದ ಕಡೆಗೆ ನೋಡಿದಾಗ ಊಟಕ್ಕೆ ಕುಳಿತಾಗ ಈ ಮಾತನ್ನೇಕೆ ತೆಗೆದೆನೋ ಎಂದೆನಿಸಿತವಳಿಗೆ. ಶ್ರೇಯಾಂಸನ ಬಾಯಲ್ಲಿ ತುತ್ತು ಜಿಗುಟಾಗಿದ್ದಿತು. ನುಂಗಲಾರದೆ ಹಾಗೇ ನುರಿಸುತ್ತಿದ್ದ. ಎಡೆಯೊಳಗಿನ ಕೈಯು ಎಡೆಯೊಳಗೇ ಇತ್ತು. ಕೊನೆಗೊಮ್ಮೆ ಎರಡು ಗುಟುಕು ನೀರು ಕುಡಿದು, ನುಂಗಲಾರದ ತುತ್ತನ್ನು ನುಂಗಿ ಎದ್ದ. ಬಚ್ಚಲೊಳಗೆ ಹೋಗಿ ಕೈತೊಳೆದುಕೊಂಡು ಬಂದ.

ಸರಸವ್ವ ಸುಮ್ಮನೆ ಕುಳಿತಿದ್ದಳು. ಎದುರಿಗೆ ದೀಪ ಉರಿಯು ತ್ತಿದ್ದಿತು. ಮಗನು ಹೊಟ್ಟೆ ತುಂಬ ಉಣ್ಣಲಿಲ್ಲವಲ್ಲ–ಎಂದು ಮನ ದಲ್ಲಿಯೇ ಕೊರಗುತ್ತಿದ್ದಳು. ಅವನ ಎಡೆಯ ಕಡೆಗೊಮ್ಮೆ ನೋಡಿ ದಳು. ಆಮೇಲೆ ಮಗನಿಗೆ ಅಂದಳು:

"ರೊಟ್ಟೀ ಬಿಟ್ಟು ಏಕೆ ಎದ್ದಿಯೋ?"

"ಹೊಟ್ಟೆ ತುಂಬಿತು."

ಎಂದಿಷ್ಟೇ ಹೇಳಿ ಶ್ರೇಯಾಂಸ ಪಡಸಾಲೆಗೆ ನಡೆದ. ಅವನ ಮನಸ್ಸೆಲ್ಲ ಮಾಸ್ತರರ ಮನೆಯ ಕಡೆಗೆ ಹರಿಯುತ್ತಿದ್ದಿತು. ಈಗಾಗಲೇ ಹುಡುಗರೆಲ್ಲ ಅಭ್ಯಾಸಕ್ಕೆ ಸೇರಿರಬೇಕು. ತಾನೂ ಹೋಗಿ ಅವರಲ್ಲಿ

ಯಾವಾಗ ಕೂರುವೆನೋ ಎಂದು ಅವನ ಮನಸ್ಸು ತವಕಗೊಳ್ಳು ತ್ತಿತ್ತು. ಜೋಳದ ಚೀಲದ ಮೇಲಿಟ್ಟ, ತುರಮುರಿಯವರು ಕನ್ನಡ ಗದ್ಯದಲ್ಲಿ ಸಂಗ್ರಹಿಸಿದ ಬಾಣ ಕಾದಂಬರಿಯನ್ನು ಕೈಯಲ್ಲಿ ಹಿಡಿದು ಕೊಂಡು, ತುಸು ಹೊತ್ತು ಪಡಸಾಲೆಯ ತುದಿಗೆ ನಿಂತ. ಸರಸಮ್ಮ ಅಡುಗೆಯ ಮನೆಯಲ್ಲಿ ಪಾತ್ರೆಗಳನ್ನು ತಿಕ್ಕುವ ಕೆಲಸ ನಡೆಯಿಸಿದ್ದಳು. ಸಾಯಂಕಾಲದ ದೇವ ದರ್ಶನವನ್ನು ಮುಗಿಸಿಕೊಂಡು ಬಂದು ಈ ಮೊದಲೇ ಪಡಸಾಲೆಯಲ್ಲಿ ಕುಳಿತ ಸುಂದರವ್ವ ಒಳಗೆ ನಡೆದ ತಾಯಿ ಮಕ್ಕಳ ಮಾತನ್ನು ಕೇಳಿದ್ದಳು. ಶ್ರೇಯಾಂಸ ಮಾಸ್ತರರ ಮನೆಗೆ ಹೊರಡುವ ಸಿದ್ಧತೆಯಲ್ಲಿದ್ದುದನ್ನು ಕಂಡು,

"ಮಾಸ್ತರರ ಮನೆಗೆ ಹೊರಟೆ ಏನು ?" ಎಂದು ಕೇಳಿದಳು.

"ಹೂಂ !"

ಭಾರವಾದ ದನಿಯಲ್ಲಿ ಶ್ರೇಯಾಂಸ ಉಚ್ಚರಿಸಿದ.

"ದೇವರ ಅಂಗಾರ ಹಚ್ಚಿಕೋ ಬೇಕಿಲ್ಲ? ಅದs ನೋಡು ಅಲ್ಲಿ ಬಸ್ತಿಯ ಕರಡಿಗೆಯೊಳಗೆ...."

"ಹೋಗುವಾಗ ಬಸ್ತಿಗೆ ಹೋಗೇ ಹೋಗತೇನಲ್ಲ....!"

ಬೇಗನೆ ಮನೆಯಿಂದ ಹೊರಬೀಳಲಿಕ್ಕೆ ಒಂದು ಅವಕಾಶವನ್ನು ಕಲ್ಪಿಸಿಕೊಳ್ಳುತ್ತ ಶ್ರೇಯಾಂಸ ನುಡಿದ.

"ನಾಳೆ ಆದಿತ್ಯವಾರ. ಇಂದು ಮಾಸ್ತರರ ಮನೆಗೆ ಹೋಗ ದಿದ್ದರೆ ನಡೆಯುವುದಿಲ್ಲವೆ ?" ಸ್ವಲ್ಪ ತಡೆದು...."ಈಗ ಅವರು ಬಸ್ತಿ ಯೊಳಗಿನ 'ತತ್ವಾರ್ಥ ಸೂತ್ರ' ತರತೇವೆ ಅಂತ ಹೇಳಿದ್ದರು. ಸ್ವಲ್ಪ ಓದಿ ಹೇಳೀ ಅಂತ ಮಾಡಿದ್ದೆವು...."

ಹೀಗೆ ಸುಂದರವ್ವ ತನ್ನ ಬೇಡಿಕೆಯನ್ನು ಮುಂದಿಟ್ಟಳು.

"ಅದರೊಳಗೆ ನನಗೇನು ತಿಳಿಯುವುದು....?"

"ಸಾಲೆ ಕಲಿತ ನಿನಗ ತಿಳಿಯದೆ, ನಮಗೆ ತಿಳೀತದೆ ಏನು ? ಪುರಾಣ ಪುಣ್ಯಕತೆ ಅಂದರೆ ಯಾವಾಗಲೂ ನಿನಗೆ ಹೀಗೇ. ಧರ್ಮದ

ಕಡೆಗೆ ಮನಸ್ಸೇ ಇಲ್ಲ. ಮತ್ತು ಏನು ಓದುವಿಯೋ ಏನೋ, ಹಗಲಿರುಳೂ ಪುಸ್ತಕ ಕೈಯೊಳಗೇ ಹಿಡದಿರುವಿ."

ಎಂದು ಸ್ವಲ್ಪ ಸಿಡುಕಿನಿಂದಲೇ ಸುಂದರವ್ವ ಮಾತನಾಡಿದಳು. ಶ್ರೇಯಾಂಸ ಮನೆಯಲ್ಲಿ ಶಾಸ್ತ್ರ ಓದಿ ಹೇಳುವುದೂ ಸರಸವ್ವನಿಗೆ ಇಂದು ಬೇಕಿರಲಿಲ್ಲ. ಅವನ ಮನಸ್ಸು ಧರ್ಮ, ಸನ್ಯಾಸಗಳಿಂದ ದೂರ ಹೋಗುವುದೇ ಅವಳಿಗೆ ಇಷ್ಟವಾಗಿತ್ತು. ಅದರಿಂದ ಅವಳೀಗ ಮತ್ತೆ ಮಾತನಾಡಬೇಕಾಯಿತು.

"ಅವನ ಅಭ್ಯಾಸಕ್ಕ ಅವನು ಹೋಗವಲ್ಲನೇಕೆ ?"

"ಅವನೆಲ್ಲಿ ನಿಲ್ಲಲಿಕ್ಕ ನಿಂತಾನ ಈಗ? ನೀ ಇಷ್ಟು ಅವಸರದಿಂದ ನಡುವೆ ಬಾಯಿ ಹಾಕಿ ಹೇಳತಿದಿ...."

"ನನ್ನದೇನು ಇಲ್ಲ ತಾಯಿ! ಅವನೇ ಈಗ ಊಟಕ್ಕೆ ಕುಳಿತಾಗ ಅಭ್ಯಾಸ ಬಹಳ ಅದ ಅನ್ನುತ್ತಿದ್ದ. ಅದಕ್ಕ ನಾ ಹೇಳಿದೆ."

"ಹೀಗೇ ಮಾಡಿ ಅವನನ್ನು ಹಾಳು ಮಾಡಿದಿರಿ. ಇಂದು ನಾಟಕ ಮಾಡಿದ, ನಾಳೆ ಇನ್ನೊಂದು ಮಾಡುವ....ಆಮೇಲೆ ನನ್ನ ಮಗ, ನನ್ನ ಮಗ ಅಂತ ಹರಳ ಹೋದ ಗೆಜ್ಜಿ ಹಾಗೆ ಒದರುತ ಕೂಡುವಿರಿ, ಆಯ್ತು!"

ಸುಂದರವ್ವ ಶ್ರೇಯಾಂಸನ ಭವಿಷ್ಯ ನುಡಿದಳು. ಆದರೆ ಅದನ್ನು ಕೇಳಲಿಕ್ಕೆ ಅವನು ಅಲ್ಲಿ ಇದ್ದರಲ್ಲವೆ?

೬

ಪ್ರಾಥಮಿಕ ಸಾಲೆಯ ಏಳನೆಯ ತರಗತಿಗೆ ಬರುವಷ್ಟರಲ್ಲಿ ಶ್ರೇಯಾಂಸನಿಗೆ ಮನೆಯವರ ಮಮತೆಯ ಪಂಜರದಿಂದ ಹೊರಗೆ ಬಂದ ಹಕ್ಕಿಯಂತಾಗಿದೆ. ಅವನಿಗೆ ಅತ್ತಿತ್ತ ಹಾರಾಡಲಿಕ್ಕೆ ತುಸು ಪಕ್ಕಗಳು ಬಂದಂತೆನಿಸಿದ್ದಿತು. ಅದಕ್ಕೆಲ್ಲ ಕಾರಣರಾದವರು ಆತ್ಮಾರಾಮ ಮಾಸ್ತರರು. ಅವರ ವಿವೇಕಯುತ ಅಕ್ಕರತೆಯು ಅವನಿಗೆ ಹಿತವೆನಿಸಿದ್ದಿತು. ಈಗ ಅವನ ಮನೆಯವರೂ ಕೂಡ ಅಲ್ಲಿ ಹೋಗ ಬೇಡ, ಇಲ್ಲಿ ಹೋಗಬೇಡ ಎಂದು ಅಡ್ಡಿ ಮಾಡುವುದಿಲ್ಲ. ಅವನ ಅಭ್ಯಾಸ ಅವನು ಮಾಡಿಕೊಂಡಿರಲು ಬಿಟ್ಟಿರುವರು. ಆದರೂ ನಡು ನಡುವೆ ತಂದೆ ಬಾಳಪ್ಪನು ಹೊಲದ ಕೆಲಸಕ್ಕೆ ತನ್ನ ನೆರವಿಗೆಂದು ಕರೆಯುವ. ತಾಯಿ ಆಗಾಗ ಹೊಲಕ್ಕೆ ತಂದೆಯ ಬುತ್ತಿಯನ್ನು ಒಯ್ದುಕೊಟ್ಟು ಬರಲಿಕ್ಕೆ ಹೇಳುವಳು. ಅವನ್ನೆಲ್ಲ ಸಮಯ ನೋಡಿಕೊಂಡು ಮಾಡುತ್ತ ತನ್ನ ಅಭ್ಯಾಸಕ್ಕೂ ಮನೆತನದ ಕೆಲಸಗಳಿಗೂ ಹೊಂದಿಕೆ ಮಾಡಿಕೊಂಡು ಹೋಗುವ ರೂಢಿಯು ಅವನಿಗೂ ಆಗಿದೆ. ಓದಿ ಓದಿ ಬೇಸತ್ತಾಗ-ವಿಚಾರಕ್ಕೆ ಅವಕಾಶ ಬೇಕಾದಾಗ ಹೊಲಕ್ಕೆ ಹೊರಡುವುದು ಅವನ ಮಾನಸಿಕ ಬೆಳವಣಿಗೆಗೆ ಹಿತವಾಗಿಯೇ ಪರಿಣಮಿಸುವುದು. ಸೃಷ್ಟಿಸೌಂದರ್ಯದ ನಿರೀಕ್ಷಣೆಗೆ ಅದೊಂದು ಸ್ವಭಾವಿಕವಾಗಿ ಒದಗಿ ಬಂದ ಸಂದರ್ಭವಾಗುತ್ತಿದ್ದಿತು.

ದೂರದಲ್ಲಿ ಶ್ರೇಯಾಂಸನು ಬುತ್ತಿಯನ್ನು ಹೊತ್ತುಕೊಂಡು ಬರುತ್ತಿರುವುದನ್ನು ಹೊಲದಲ್ಲಿ ಹಕ್ಕಿಯನ್ನು ಕಾಯುತ್ತಿದ್ದ ಬಾಳಪ್ಪನು ಕಂಡು ಹಿರಿಹಿರಿ ಹಿಗ್ಗುವನು. ಮಗ ದೊಡ್ಡವನಾದ, ಮುಂದಿನ ವರ್ಷ

ವೆಂದರೆ ಅವನ ಕಲಿಯುವಿಕೆ ಮುಗಿಯುವುದು, ಹೊಲದ ಕೆಲಸಕ್ಕೆ ನೆರವಾಗುವನು-ಎಂದು ಏನೇನೋ ಕನಸನ್ನು ಕಾಣುವನು. ಹೊಲದಲ್ಲಿ ಸುತ್ತೆಲ್ಲ, ಸಂಗಡ ಕರೆದುಕೊಂಡು ತಿರುಗಾಡಿ ಬೆಳೆಯನ್ನು ತೋರಿಸುವನು. ಎಲ್ಲಿ ಒಡ್ಡಿಗೆ ಹೆಚ್ಚು ಮಣ್ಣು ಒಗೆಯಬೇಕು, ಎಲ್ಲಿ ಬೆಳೆದ ಕರಿಕೆಯನ್ನು ಹಡ್ಡಿ ತೆಗೆದರೆ ಒಡ್ಡು ಒಡೆಯುವುದು ಇತ್ಯಾದಿ ಸಂಗತಿಗಳನ್ನು ವಿವರಿಸುವನು. ಆಗ ಶ್ರೇಯಾಂಸನ ಮನಸ್ಸೆಲ್ಲ ಸೀತಾ ವನವಾಸದಲ್ಲಿಯೋ, ಚಂದ್ರಾಪೀಡನೊಡನೆ ಅಚ್ಛೋದ ಸರೋವರದ ತಡಿಯಲ್ಲಿಯೋ ಸುತ್ತುತ್ತಿರುವುದು. ತಂದೆ ಹೇಳಿದುದಕ್ಕೆಲ್ಲ 'ಹೂಂ! ಹೂಂ!' ಎನ್ನುವ. ಆದರೆ ಅದೊಂದೂ ಅವನ ತಲೆಯನ್ನು ಸೇರದು. ಹಾಗೆ ಮಗನನ್ನು ಕರೆದುಕೊಂಡು ಹತ್ತಿಯ ಹೊಲಕ್ಕೆ ಹೋಗುವ ಬಾಳಪ್ಪ.

"ನಮ್ಮ ನೆಲಕ್ಕೆ ಜಯವಂತಿ ಬೀಜ ಆಗದು. ದೇಸೀ ಹತ್ತಿಯೇ ಚೆನ್ನಾಗಿ ಬೆಳೆಯುವುದು."

ಎಂದು ಮಗನಿಗೆ ನೆಲದ ಗುಣವನ್ನು ವಿವರಿಸುವನು. ಅದಕ್ಕೆ ಶ್ರೇಯಾಂಸನಿಂದ ಯಾವ ಉತ್ತರವೂ ಸಿಗದಿರಲು, ಮಗನ ಕಡೆಗೆ ಹೊರಳಿ ನೋಡುವ. ಆದರೆ ಮಗ ಅಲ್ಲೆಲ್ಲಿದ್ದಾನೆ! ಅದೋ ಆ ಹೊಲದ ಮೂಲೆಯಲ್ಲಿ ಬೆಳೆದ ಯಾವುದೋ ಒಂದು ಕಂಟಿಯ ಹೂವುಗಳ ಚೆಲುವನ್ನು ನೋಡುತ್ತ ನಿಂತಿದ್ದಾನೆ!

"ಶ್ರೇಯಾಂಸ!"

ಕೆರಳಿ ಕೂಗಿದ ಬಾಳಪ್ಪ.

"ಆಂ!"

ಶ್ರೇಯಾಂಸನ ಉದ್ಗಾರವಿದು.

"ಅಲ್ಲೇನು ನೋಡುತ್ತಿರುವೆ?"

"ಏನೋ, ಹೂವುಗಳು ಚೆಂದ ಕಂಡವು!"

"ಅವುಗಳನ್ನೇ ಹೊಲದಲ್ಲೆಲ್ಲ ಬೆಳೆಯಿಸಿ ಬಿಡು...."

ತಂದೆಯ ಮಾತಿಗೆ ತಿರುಗಿ ಹೇಳದೆ ಅವನ ಕಡೆಗೆ ಬಂದ. ಆಗ ಬಾಳಪ್ಪ ಪುನಃ ಆರಂಭಿಸಿದ :

"ನಮ್ಮ ನೆಲಕ್ಕ ಜಯವಂತಿ ಆಗದು...."

"ಜಯವಂತಿ ಹತ್ತಿಗೆ ಉದ್ದ ಎಳೆ ಹೊರಡುತ್ತಾವೆ. ದೇಸೀ ಹತ್ತಿಗಿಂತ ಇದೇ ಒಳ್ಳೆಯದು...."

ಶ್ರೇಯಾಂಸ ತನ್ನ ಜಾಣ್ಮೆಯನ್ನು ಪ್ರದರ್ಶಿಸ ಹೋದ, ತಂದೆಯ ವಿಚಾರವನ್ನು ಪೂರ್ಣ ತಿಳಿದುಕೊಳ್ಳದೆ. ಅದರಿಂದ ಬಾಳಪ್ಪ ಇನ್ನಿಷ್ಟು ಕೆರಳಿ, 'ಈ ಶುಂಭನಿಗೆ ಏನು ಹೇಳಿ ಏನು ಉಪಯೋಗ' ಎಂದು ಮನದಲ್ಲಿಯೇ ಅಂದುಕೊಂಡು, ಮಗನನ್ನು ಮನೆಗೆ ಕಳಿಸಿಕೊಡುವನು.

ಹಲವು ಸಲ ಶ್ರೇಯಾಂಸನಿಗೂ ಹೊಲದಲ್ಲಿ ತಾನು ಕಳೆಯುತ್ತಿರುವ ವೇಳೆಯು ವ್ಯರ್ಥ ಹೋಗುವದೆಂದೂ ಅನಿಸುವುದು. ಆದರಿಂದ ಬುತ್ತಿಯನ್ನು ಇಟ್ಟು ಮನೆಗೆ ಮರಳುವುದೂ ಉಂಟು. ಮಗನ ಈ ಸ್ವಭಾವವನ್ನು ಕಂಡು, ಬಾಳಪ್ಪ ಹೆಂಡತಿಗೆ ಹೇಳುವ :

"ಹುಡುಗ ಹೊಲಕ್ಕೆ ಬಂದರೆ ಕಿವಿಯಲ್ಲಿ ಗಾಳಿ ಸೇರಿದ ಚಿಗರೆಯ ಹಾಗೇ ಆಗುವ.... ಆಕಳ ಎಳಗರುವನ್ನು ಹೊಸದಾಗಿ ಹೊರಗೆ ಬಿಟ್ಟಾಗ ಅದಕ್ಕೆ ಹೇಗೆ ಆಗುವದೋ ಹಾಗೇ ನಮ್ಮ ಶ್ರೇಯಾಂಸನಿಗೂ ಹೊಲಕ್ಕೆ ಬಂದಾಗ ಆಗತದ...."

"ಇನ್ನೂ ರೂಢಿ ಇಲ್ಲ." ಸರಸಪ್ಪನ ಸಮಾಧಾನವಿದು.

"ಇದರಲ್ಲಿ ಎಂಥ ರೂಢಿಯದು? ಸಂಗಡದವರ ಹುಡುಗರು ಇಲ್ಲೇನು? ಎರಡೆರಡು ದಿನ ಹೊಲದೊಳಗೆ ವಸ್ತಿ ಇರುವರು. ಎತ್ತುಗಳನ್ನು ಮೇಯಿಸುವರು."

"ಸಾಲೆಯ ಮೇಲೆ ಧ್ಯಾನ ಅದೆ ಈಗ. ನಾಳೆ ಸಾಲೆ ಬಿಟ್ಟ ಮೇಲೆ ಎಲ್ಲ ಮಾಡತಾನು.... ಇವನೂ !"

"ಮಾಡತಾನೋ, ಏನು ಪದ್ಮಪ್ಪನ ಹಾಗೆ....ಎಲ್ಲಾ ಬಿಟ್ಟು

ಬಿಡತಾನೋ !"

ನಿರಾಶೆಯಿಂದ ಬಾಳಪ್ಪ ನುಡಿಯುವ, ಸುತ್ತಲಿನ ಹಣ್ಣಾದ ಪೈರಿನ ಕಡೆಗೆ ನೋಡುತ್ತ.

"ಅದಕ್ಕs ನಾನು ಅನ್ನೋದು ಮುಂದಿನ ವರ್ಷ ಮದುವೆ ಮಾಡಿ ಬಿಡೋಣ ಅಂತ...."

ಸರಸವ್ವ ತನ್ನ ಬಯಕೆಯನ್ನು ಮುಂದೆ ಚಾಚುವಳು.

"ಮನೆಯೊಳಗೊಂದ ಎಲ್ಲರು ಒಪ್ಪಬೇಕಲ್ಲ. ಸುಂದರವ್ವನ ಮನಸ್ಸು ಬೇರೆ....ಪದ್ಮಪ್ಪ ಏನನ್ನುವನೋ ಯಾರಿಗೆ ಗೊತ್ತು ?"

ಹೊಲದೊಳಗಿನ ಕೆಲಸ ಬೊಗಸೆಗಳನ್ನು ಬಿಟ್ಟು, ಮಗನ ಭವಿತವ್ಯದ ಬಗ್ಗೆ ಏನೇನೋ ಕಲ್ಪನೆಗಳನ್ನು ಕಟ್ಟುತ್ತ ಅದರಲ್ಲಿಯೇ ಎಷ್ಟೋ ವೇಳೆಯನ್ನು ಕಳೆಯುತ್ತಿದ್ದರಾದಂಪತಿಗಳು.

* * * *

ಇಲ್ಲಿ ಶ್ರೇಯಾಂಸನಿಗೆ ಇನ್ನೊಬ್ಬ ಹೊಸ ಶಿಕ್ಷಕರ ಸಹವಾಸವೂ ಸಿಕ್ಕಿದ್ದಿತು. ಜೈನಾಪುರ ಕನ್ನಡ ಸಾಲೆಗೆ ನೀರಲಕಟ್ಟಿ ಮಾಸ್ತರರು ವರ್ಗವಾಗಿ ಬಂದಂದಿನಿಂದ ಹೊಸ ಚೇತನವು ಬಂದಂತಾಗಿದ್ದಿತು. ಅವರು ಸ್ವತಃ ಹಾರ್ಮೋನಿಯಂ ಬಾರಿಸಿ ಹಾಡಬಲ್ಲ ಶಿಕ್ಷಕರು. ವರ್ಗದಲ್ಲಿ ವಿಷಯವನ್ನು ಕಲಿಸುವದಕ್ಕಿಂತ ನಾಟಕ, ಹಾಡು, ಸ್ವಾಗತ ಪದಗಳಿಂದಲೇ ಬಂದ ಶಾಲಾಧಿಕಾರಿಗಳನ್ನು ದಂಗುಗೊಳಿಸುವ ತಲೆ ಅವರದು. ಅವರ ಪಠ್ಯೇತರ ಚಟುವಟಿಕೆಗಳಲ್ಲಿಯೂ ಶ್ರೇಯಾಂಸನಿಗೆ ಅಗ್ರಪಟ್ಟವಾಯಿತು. ಆರಂಭದಲ್ಲಿ ಹಾರ್ಮೋನಿಯಮ್‌ದ ಜೊತೆಗೆ ಬಾಯಿತೆರೆಯಲಿಕ್ಕೆ ಬಾರದ ಶ್ರೇಯಾಂಸನನ್ನು ನೀರಲಕಟ್ಟಿ ಮಾಸ್ತರರು ನಿರುಪಯೋಗಿ ಎಂದು ತಿಳಿದರೂ ಅವನ ಅಭಿನಯ, ಸ್ಪಷ್ಟವಾದ ಮಾತುಗಾರಿಕೆಗೆ ಮರುಳಾಗಿ ಬಿಟ್ಟರು ! ಅಂದಿನಿಂದ ನಾಟಕದೊಳಗಿನ ಪ್ರಧಾನ ಪಾತ್ರಗಳೆಲ್ಲ ಶ್ರೇಯಾಂಸನ ಪಾಲಿಗೇನೇ ಬಂದುವು.

ಈ ವರ್ಷದ ಪಂಚಮಿಯ ಸರಸ್ವತಿ ಉತ್ಸವಕ್ಕೊಂದು ಹೊಸ ಕಳೆಯೇ ಬಂದಂತಾಯಿತು. ಆತ್ಮರಾಮ ಮಾಸ್ತರರೊಂದು ಹೊಸ ನಾಟಕವನ್ನು ಬರೆದರು. ಅದರಲ್ಲಿ ಸೀರಲಕಟ್ಟಿ ಮಾಸ್ತರರು ಪದ್ಯಗಳನ್ನು ಕೂಡಿಸಿದರು. ತಿಂಗಳೊಪ್ಪತ್ತು ಸಾಲೆಯೊಂದು ನಾಟಕದ ರಂಗಭೂಮಿಯೇ ಆಯಿತು. ನಾಟಕ ಸಿದ್ಧವಾಯಿತು.

ಇಲ್ಲಿಯವರೆಗೆ ತೆರೆಗಳಾಗಲಿ, ರಂಗಭೂಮಿಯ ರಚನೆಯಾಗಲಿ ಇಲ್ಲದೆ ಹಗಲು ಸಾಲೆಯಲ್ಲಿ ನಾಟಕವನ್ನು ಆಡಿ ಊರ ಹಿರಿಯರಿಗೆ ತೋರಿಸುತ್ತಿದ್ದರು, ಶಾಲಾಬಾಲಕರು. ಈ ವರ್ಷ ಸೀರಲಕಟ್ಟಿ ಮಾಸ್ತರರ ಯೋಜನೆಯ ಪ್ರಕಾರ ನಾಟಕದ ಸಿದ್ಧತೆಯೆಲ್ಲ ಬೇರೆ ರೀತಿಯಿಂದಲೇ ಆಗಿದ್ದಿತು. ನೆರೆಯ ಊರ ಮುರಿದ ನಾಟಕ ಕಂಪನಿಯವರಿಂದ ತೆರೆಗಳನ್ನು ವೇಷಭೂಷಣಗಳನ್ನು ತರಿಸಲಾಯಿತು. ನಟರಿಗೆ ಬಣ್ಣ ಹಚ್ಚಲಿಕ್ಕೆ ಹತ್ತು ರೂಪಾಯಿಗಳನ್ನು ಕೊಟ್ಟು ಆ ಹಳೆಯ ಕಂಪನಿಯವನನ್ನೇ ತಲೆಮಾಸಿದರು. ಹೊರಗೆ ಮಂಟಪವನ್ನ ಹಾಕಲಾಯಿತು. ನಾಲ್ಕಾರು ಗ್ಯಾಸು ಬತ್ತಿಗಳನ್ನು ಹೇಳಿದರು. ಈ ಆಡಂಬರವೆಲ್ಲ ಆತ್ಮಾರಾಮ ಮಾಸ್ತರರಿಗೆ ಅಷ್ಟು ಮನಸ್ಸಿಗೆ ಬರಲಿಲ್ಲ. ಆದರೂ ಸೀರಲಕಟ್ಟಿ ಮಾಸ್ತರರ ಉತ್ಸಾಹಕ್ಕೆ ಅಡ್ಡಿ ಬಾರದೆ ಎಲ್ಲದಕ್ಕೂ ಸಹಕರಿಸಿದರು. ಸಹಾಯಕ ಶಿಕ್ಷಕರ ಉತ್ಸಾಹಕ್ಕೆ ಭಂಗಬಾರದಂತೆ ನಡೆದುಕೊಂಡರು.

ನಾಟಕದ ಸಂದರ್ಭವು ರಾಮಾಯಣದ ಕಥೆಗೆ ಸಂಬಂಧಿಸಿದುದು; “ಲವವಿಜಯ” ಎಂದದರ ಹೆಸರು. ಅದರಲ್ಲಿ ಲವನ ಪಾತ್ರವನ್ನೇ ಶ್ರೇಯಾಂಸನಿಗೆ ಕೊಡಲಾಗಿದ್ದಿತು. ಅದನ್ನು ಬಹು ಚೆನ್ನಾಗಿ ಶ್ರೇಯಾಂಸ ಅಭಿನಯಿಸಿದ. ಉಳಿದ ವಿದ್ಯಾರ್ಥಿಗಳ ಅಭಿನಯವೂ ಒಳ್ಳೆಯದಾಗಿದ್ದಿತು. ಅದರಿಂದ ನಾಟಕವು ಎಲ್ಲರ ಮನಸ್ಸನ್ನು ಆಕರ್ಷಿಸಿತು. ಎರಡು ತಾಸುಗಳವರೆಗೆ ಪ್ರೇಕ್ಷಕರು ಮೈಮರೆತು ಕುಳಿತಿದ್ದರು. ಕೊನೆಯ ಒಂದೆರಡು ಪ್ರವೇಶನಗಳಿರುವಾಗ ರಂಗ

ಭೂಪಿಯುಮೇಲೆ ನೀರಲಕಟ್ಟಿ ಮಾಸ್ತರರು ಬಂದು, ಒಂದು ಚಿಕ್ಕ ಭಾಷಣವನ್ನು ಮಾಡಿದರು. ಸಾಲೆಯಲ್ಲಿಯ ಕೆಲವು ಉಪಕರಣಗಳಿಗಾಗಿ ಹಣದ ಬೇಡಿಕೆಯನ್ನು ಸಾರ್ವಜನಿಕರ ಎದುರಿಗೆ ಇಟ್ಟರು. ಕೂಡಲೆ ಹಿಂದೆ ಕುಳಿತ ಯಾವನೋ ಒಬ್ಬ ಒಕ್ಕಲಿಗನು ಎದ್ದು, ಲವನ ಪಾತ್ರವನ್ನು ವಹಿಸಿದ ಶ್ರೇಯಾಂಸನಿಗೆಂದು ಐದು ರೂಪಾಯಿಗಳನ್ನು ಬಹುಮಾನವಾಗಿ ಕೊಟ್ಟನು. ಮುಂದೆ ಸಾಲೆಯ ಕುರ್ಚಿ ಬೆಂಚುಗಳನ್ನೆಲ್ಲ ಹಿಡಿದುಕೊಂಡು ಕುಳಿತ ಊರ ಪ್ರಮುಖರು ಇನ್ನು ಹಾಗೆಯೇ ಎದ್ದು ಹೋಗದಂತಾಯಿತು. ಅವರು ಒಳ್ಳೇ ಗೊಂದಲದಲ್ಲಿ ಬಿದ್ದರು. ನೀರಲಕಟ್ಟಿ ಮಾಸ್ತರರು ನಾಟಕಕ್ಕೆ ಕರೆದು ತಂದು ಒಳ್ಳೇ ಬಲೆ ಬೀಸಿದರಲ್ಲ ಎಂದುಕೊಂಡರು. ಆತ್ಮಾರಾಮ ಮಾಸ್ತರರ ನಿರಪೇಕ್ಷ ಸೇವೆಯನ್ನು ಮನದಲ್ಲಿಯೇ ನೆನೆದರು. ಆದರೂ ಹಣ ತೆರದೆ ಏಳುವುದು ಅವರ ಪ್ರತಿಷ್ಠೆಗೆ ಕುಂದು ತರುವಂತಿದ್ದಿತು. ಆದರಿಂದ ಚಿಕ್ಕಗೌಡರು ಮುಂದಾಗಿ ಹತ್ತು ರೂಪಾಯಿಗಳನ್ನು ಕೊಡುವದಾಗಿ ಹೇಳಿದರು. ಅವರ ಕಾಣಿಕೆಯನ್ನು ಜನರಲ್ಲಿ ಸಾರಿ, ಕೆಲವು ಅಭಿನಂದನಪರ ಮಾತುಗಳನ್ನು ಆಡಿದರು, ನೀರಲಕಟ್ಟಿ ಮಾಸ್ತರರು. ಇದರಿಂದ ಊರ ಕುಲಕರ್ಣಿಗೂ ಬಿಸಿ ತಗುಲಿತು. ಎದ್ದು ನಿಂತು ಅವರೂ ಹತ್ತು ರೂಪಾಯಿ ಕೊಡುವದಾಗಿ ಅಭಿವಚನವಿತ್ತರು. ಇವರೆಲ್ಲ ಹತ್ತು ಹತ್ತು ರೂಪಾಯಿಗಳನ್ನು ಕೊಡುವುದಾಗಿ ಹೇಳಿದ ಮೇಲೆ ದೊಡ್ಡ ಗೌಡರು ಹಿಂದುಳಿಯುವುದು ಹೇಗೆ? ಅವರು ಹದಿನೈದು ರೂಪಾಯಿಗಳನ್ನು ಕೊಟ್ಟರು. ಹೀಗೆ ಊರ ಪ್ರಮುಖರಲ್ಲಿ ದುಡ್ಡು ಕೊಡುವ ಏರಾಟವೇ ನಡೆಯಿತು. ಅದರಿಂದ ಒಂದರ್ಧ ತಾಸಿನಲ್ಲಿ ಇನ್ನೂರು ರೂಪಾಯಿಗಳವರೆಗೆ ಸಾಲೆಗೆ ನಾಟಕದಿಂದ ಧನಸಂಗ್ರಹವಾಯಿತು. ಆದರೆ ಇನ್ನುಮುಂದೆ ಎಂದಿಗೂ ಹೀಗೆ ಸಾಲೆಯ ನಾಟಕವನ್ನು ನೋಡಲಿಕ್ಕೆ ಬರಬಾರದೆಂದು ಕೆಲವು ಪ್ರಮುಖರು ಮನದಲ್ಲಿಯೇ ನಿಶ್ಚಯಿಸಿದರು. ತಮ್ಮ

ಸ್ಥಾನಮಾನಗಳಿಗಾಗಿಯೋ ತಮ್ಮೂರಲ್ಲಿ ನೌಕರಿಗೆ ಬಂದ ಮಾಸ್ತರರು ಇಂಥ ನಾಟಕಗಳನ್ನು ಮಕ್ಕಳಿಂದ ಆಡಿಸಿ ತೋರಿಸಿ ತಮ್ಮನ್ನು ಸಂತಸದಲ್ಲಿಡಬೇಕೆಂದು ಅವರು ಬಯಸುತ್ತಿದ್ದರು. ಹೀಗೆ ಜೇಬಿಗೆ ಕತ್ತರಿ ಬೀಳುವದಾದರೆ ಅವರಿಗೆ ಇದಾವುದೂ ಬೇಕಿರಲಿಲ್ಲ. ಮುಂದೆ ಏನೇ ಆಗಲಿ, ಈಗಂತೂ ಸಾಲೆಗೆ ಹಣ ಕೂಡಿತು.

ಮರುದಿನ ಸಾಲೆಯಲ್ಲಿ ಮಾತಿಗೆ ಮಾತು ಹೊರಟಾಗ ನೀರಲಕಟ್ಟಿ ಮಾಸ್ತರರು ತಾವು ಒಬ್ಬ ಒಕ್ಕಲಿಗನ ಕೈಯಲ್ಲಿ ಐದು ರೂಪಾಯಿಗಳನ್ನು ಮೊದಲೇ ಕೊಟ್ಟು ಕೊಡಲಿಕ್ಕೆ ಹೇಳಿ ಕೊಡಿಸಿದ್ದನ್ನು ಹೇಳಿದರು. ಅದರಿಂದಲೇ ದುಡ್ಡಿನ ಮಳೆಗೆ ಆರಂಭವಾಯಿತೆಂದೂ ಆಢ್ಯತೆಯಿಂದ ಸೂಚಿಸಿದರು. ಮೇಲೆ 'ಹಿಂದುಸ್ತಾನದ ಜನವೆಂದರೆ ಒಂದು ಕುರಿಯ ಹಿಂಡು ಇದ್ದಂತೆ, ಇಲ್ಲೇನು? ಒಂದು ಮುಂದಿನ ಕುರಿ ಬಿದ್ದರೆ ತೀರಿತು. ಎಲ್ಲ ಬೀಳುತ್ತವೆ' ಎಂದು ಶಿಫಾರಸು ಪತ್ರವನ್ನು ಕೊಟ್ಟು ಬಿಟ್ಟರು.

"ನೀವೂ ಭಾರತೀಯರೆಂಬುದನ್ನು ಮರೆತಂತಿದೆಯಲ್ಲ!"

ಆತ್ಮಾರಾಮ ಮಾಸ್ತರರು ನಗೆಯಾಡಿದರು.

"ಇದೊಂದು ದೊಡ್ಡ ಕುರಿಯಾಯ್ತು!"

ಎಂದರು ಇನ್ನೊಬ್ಬ ಶಿಕ್ಷಕರು.

"ಕುರಿಯಲ್ಲ, ತೋಳ!"

ಎಂದರಿನ್ನೊಬ್ಬರು.

ಎಲ್ಲರ ಮಾತುಗಳನ್ನು ನೀರಲಕಟ್ಟಿ ಮಾಸ್ತರರು ನಗುತ್ತಾ ಸ್ವಾಗತಿಸಿದರು. ಆಮೇಲೆ ಕೂಡಿದ ಹಣದ ವ್ಯಯದ ವಿಚಾರಕ್ಕೆ ಮೊದಲಾಯಿತು. ಸಾಲೆಯ ವಾಚನಾಲಯಕ್ಕೆ ಪುಸ್ತಕಗಳನ್ನು ತರಿಸಬೇಕೆಂದು ಹಲವು ಜನ ಶಿಕ್ಷಕರು ಸೂಚಿಸಿದರು.

"ಸಾಲೆಗೆ ಒಂದು ಪೇಟಿ, ಒಂದು ಜೋಡು ತಬಲಾ ಮಾಡಿಸಿ ಬಿಡೋಣ. ಇನ್ನೊಬ್ಬರನ್ನು ಅವಲಂಬಿಸದೆ ಮುಂದೆ ನಮಗೆ

ನಾಟಕ ಆಡಲಿಕ್ಕೆ ಅನುಕೂಲವಾಗುವುದು...."

ಸೀರಲಕಟ್ಟಿಯವರ ಸೂಚನೆಯದು.

"ನಾಟಕವೇನು ನಿತ್ಯದ ಕೆಲಸವಲ್ಲ. ಶಿಕ್ಷಕರಿಗೆ ಸಹಾಯವಾಗುವಂಥ ಕೆಲವು ಪುಸ್ತಕಗಳನ್ನು ಕೊಳ್ಳಬೇಕು....ನಮ್ಮ ಸಾಲೆಯಲ್ಲಿ ಒಳ್ಳೆಯ ಶಬ್ದಕೋಶವೂ ಕೂಡ ಒಂದಿಲ್ಲ....ಹಳೆಯ ನಾಲ್ಕಾರು ಕಾವ್ಯಗಳಿಲ್ಲ....ಶಾಸ್ತ್ರೀಯ ವಿಷಯ ಕಲಿಸಲಿಕ್ಕೆ ಉಪಕರಣಗಳಿಲ್ಲ.... ಇವು ಮೊದಲು ಆಗಬೇಕು...."

ಆತ್ಮಾರಾಮ ಮಾಸ್ತರರ ಈ ಸೂಚನೆಯೇ ಮನ್ನಿಸಲ್ಪಟ್ಟಿತು. ಅದರಿಂದ ಶ್ರೇಯಾಂಸನಿಗೂ ಆನಂದವಾಯಿತು, ತನಗೆ ಕೆಲವು ಹೊಸ ಹೊಸ ಪುಸ್ತಕಗಳು ಸಿಕ್ಕುವವೆಂದು. ಆದರೆ ಇದರಿಂದ ಸೀರಲಕಟ್ಟಿ ಮಾಸ್ತರರಿಗೆ ಸಮಾಧಾನವಾಗಲಿಲ್ಲ. ಅವರಿಗೆ ಸ್ವಂತ ಉಪಯೋಗಕ್ಕಾಗಿ ಪೇಟಿ ತಬಲಾಗಳ ವ್ಯವಸ್ಥೆಯಾಗಬೇಕಿತ್ತು. ಅದರಿಂದ ಉಳಿದ ಶಿಕ್ಷಕರಿಗೆ ಕಲೆಯಲ್ಲಿ ಅಭಿರುಚಿಯೇ ಇಲ್ಲ, ಅವರು ಕಲಾವಿದರೇ ಅಲ್ಲ; ಹಾಡಲಿಕ್ಕೆ ಬಾರದವರು ಮನುಷ್ಯರೇ ಅಲ್ಲ ಎಂದೇನೇನೋ ನಾಲ್ಕೆಂಟುದಿನ ಗೊಣಗುತ್ತಲಿದ್ದರು !

ಸೀರಲಕಟ್ಟಿ ಮಾಸ್ತರರ ಒತ್ತಿಟ್ಟ ಭಾವನೆಯು ಪ್ರಕಟವಾಗಲಿಕ್ಕೆ ಸ್ವಲ್ಪ ದಿನಗಳಲ್ಲಿ ಒಂದು ಸಂದರ್ಭವು ಒದಗಿ ಬಂತು. ಜೈನಾಪುರ ಊರಿಗೆ ಮೈಸೂರ ಪ್ರಾಂತ್ಯದ ಡಂಬಳ ನಾಟಕ ಕಂಪನಿಯು ಬಂದು ತಳವೂರಿತು. ಆ ಕಂಪನಿಯ ಮ್ಯಾನೇಜರನನ್ನು ತಾವೇ ಹೋಗಿ ಕಂಡು ಪರಿಚಯ ಬೆಳಸಿದರು, ಸೀರಲಕಟ್ಟಿ ಮಾಸ್ತರರು. ಅವರಿಗೆ ಇರಲಿಕ್ಕೆ ಊರೊಳಗೆ ಮನೆಯನ್ನು ಹುಡುಕಿಕೊಟ್ಟರು. ಅವರಿಗೆ ಬೇಕಾದ ಸಹಕಾರವನ್ನೆಲ್ಲ ನೀಡಿದರು. ಊರಲ್ಲಿ ಯಾರು ಯಾರಿಗೆ ಫ್ರೀ ಪಾಸು ಕೊಡಬೇಕೆಂಬುದನ್ನು ಸೂಚಿಸಿದರು. ಅದರಂತೆ ಸ್ವತಃ ಮ್ಯಾನೇಜರರ ಕೂಡ ಊರ ಪ್ರಮುಖರ ಮನೆಗಳಿಗೆಲ್ಲ ಹೋಗಿ, ಪಾಸು ಕೊಡಿಸಿ, ನಾಟಕ ನೋಡಲಿಕ್ಕೆ ಬರಲು ಔತಣವಿತ್ತು ಬಂದರು.

ಹಿಂದೆ ನೀರಲಕಟ್ಟಿ ಮಾಸ್ತರರ ಸಾಲೆಯು ನಾಟಕ ನೋಡಲಿಕ್ಕೆ ಹೋದಾಗ ಕೈ ಸುಟ್ಟುಕೊಂಡವರು ಈ ಸ್ತ್ರೀಪಾತ್ರಗಳಿಂದ ತುಸು ಸಂತಸಗೊಂಡರು. ಅದರಲ್ಲೂ ಕೆಲವರು, ಮಾಸ್ತರರು ಇದರಲ್ಲೇನು ಹೊಸ ಬಲೆ ಒಡ್ಡಿರುವರೋ ಏನೋ ಎಂದೂ ಶಂಕಿಸದೆ ಇರಲಿಲ್ಲ. ಏನಿದ್ದರೂ ನೀರಲಕಟ್ಟಿ ಮಾಸ್ತರರ ಹೆಸರು ಜೈನಾಪುರದಲ್ಲಿ ಎಲ್ಲರ ಬಾಯಲ್ಲೂ ಬರಹತ್ತಿತು. ಮುಖ್ಯಾಧ್ಯಾಪಕರಾದ ಆತ್ಮಾರಾಮರಿ ಗಿಂತ ನೀರಲಕಟ್ಟಿಯವರ ಪ್ರತಿಷ್ಟೆಯೇ ಊರಲ್ಲಿ ಬೆಳೆಯಿತು.

ನಾಟಕದ ಟಿಕೀಟುಗಳನ್ನು ಸಾಲೆಯ ವಿದ್ಯಾರ್ಥಿಗಳಲ್ಲಿ ಮಾರ ಲಿಕ್ಕೆಂದು ನೀರಲಕಟ್ಟಿ ಮಾಸ್ತರರು ತಕ್ಕೊಂಡು ಬಂದರು. ಎಲ್ಲ ವಿದ್ಯಾರ್ಥಿಗಳಿಗೂ ಅರ್ಧ ಚಾರ್ಜು ಎಂದು ಆಸ್ಥೆಯಿಂದ ಎಲ್ಲ ವರ್ಗ ಗಳಲ್ಲಿಯೂ ಹೋಗಿ ಸಾರಿ ಹೇಳಿಬಂದರು. ಅಭ್ಯಾಸ ತಪ್ಪಿಸಬೇಕೆಂ ದಿರುವ ವಿದ್ಯಾರ್ಥಿಗಳಿಗೆ ಇದೊಂದು ಒಳ್ಳೆಯ ಸಂದರ್ಭವೇ ಒದಗಿ ದಂತಾಯಿತು. ದುಡ್ಡು ತರಲಿಕ್ಕೆಂದು ನಡುನಡುವೆ ಕೇಳಿ ಮನೆಗೆ ನಡೆದರು, ವಿದ್ಯಾರ್ಥಿಗಳು. ಇರುಳುನಾಟಕ ನೋಡಿ ಬಂದು, ಮುಂಜಾನೆ ಹೊತ್ತಿಗೆ ಸರಿಯಾಗಿ ಸಾಲೆಗೆ ಬಾರದಾದರು. ಹೀಗಾಗಿ ಸಾಲೆಯ ಆಭ್ಯಾಸಕ್ಕೆ ತೊಂದರೆಯಾಗ ಹತ್ತಿತು. ಸಾಲೆಯ ನಾಟಕ ಕ್ಕಾಗಿ ಅಭ್ಯಾಸ ಕ್ರಮ ತಪ್ಪಿದ್ದು ಎರಡು ಮೂರು ತಿಂಗಳಾದರೂ ಅದು ಸುಧಾರಿಸದಾಯಿತು. ಪರೀಕ್ಷೆಯಂತೂ ಸಮೀಪಿಸುತ್ತ ನಡೆ ಯಿತು. ಇದರಿಂದಾಗಿ ಆತ್ಮಾರಾಮ ಮಾಸ್ತರರು ಅಭ್ಯಾಸದ ಕಡೆಗೆ ವಿದ್ಯಾರ್ಥಿಗಳ ಮನಸ್ಸನ್ನು ಎಳೆಯತೊಡಗಿದರು. ಸಹಾಯಕ ಶಿಕ್ಷಕ ರನ್ನು ಎಚ್ಚರಿಸಿದರು. ನೀರಲಕಟ್ಟಿ ಮಾಸ್ತರರಿಗಂತೂ ಸ್ಪಷ್ಟವಾಗಿಯೇ ಹೇಳಿದರು :

“ಇನ್ನು ನಾಟಕದ ನಾದ ಸಾಕು” ಎಂದು.

ನೀರಲಕಟ್ಟಿ ಮಾಸ್ತರರು ಆ ಕಾಲಕ್ಕೇನೋ ಸುಮ್ಮನಾದರು. ಅವರು ಈ ಮೊದಲೇ ಇನ್ನೊಂದು ಹೆಜ್ಜೆ ಮುಂದೆ ಇಟ್ಟಿದ್ದರು.

ನಾಟಕದೊಳಗಿನ ಒಬ್ಬ ನಟನು ನಾಲ್ಕಾರು ದಿನಗಳ ವರೆಗೆ ತನ್ನ ಊರಿಗೆ ಹೋಗುವವನಿದ್ದ. ಅವನ ಬದಲಾಗಿ ಆ ಕಂಪನಿಯ ನಾಟಕಗಳಲ್ಲಿ ಪಾತ್ರವಹಿಸುವ ಹೊಣೆಯನ್ನು ಹೊತ್ತಿದ್ದರು ಅವರು. ಮರುದಿನದ ನಾಟಕ–ಸಂಪೂರ್ಣ ರಾಮಾಯಣ–ಅದರಲ್ಲಿ ರಾವಣನ ಪಾತ್ರವನ್ನು ನೀರಲಕಟ್ಟಿ ಮಾಸ್ತರರೇ ಅಭಿನಯಿಸುವರೆಂದು ಗೊತ್ತಾಗಿದ್ದಿತು, ಅದರ ಪೂರ್ಣ ತಯಾರಿಯಲ್ಲಿಯೂ ಅವರಿದ್ದರು. ಈಗ ತಾನೇ ಏಕೆ ಹೆಡ್ ಮಾಸ್ತರರಿಗೆ ಹೇಳಬೇಕು. ನಾಳೆ ಬೆಳಗಾದರೆ ಪ್ರಕಟನೆಯಿಂದ ತಾನೇ ಗೊತ್ತಾಗುವುದಲ್ಲ ಎಂದು ಸುಮ್ಮನಿದ್ದರು.

ಮರುದಿನ ಪ್ರಕಟನೆಯೂ ಹೊರಟಿತು '**ನಾಟ್ಯಾನಂದ ನೀರಲಕಟ್ಟಿ**'ಯವರ ಹೆಸರು ಪ್ರಕಟವಾಗಿತ್ತು. ಊರೊಳಗಿನ ಜನಕ್ಕೆ ಪ್ರಿಯರಾದ ನೀರಲಕಟ್ಟಿ ಮಾಸ್ತರರ ಹೆಸರನ್ನು ತಮ್ಮ ಕಂಪನಿಯ ಲಾಭಕ್ಕೆ ಬಳಸಿಕೊಳ್ಳಬೇಕೆಂದು ಯೋಚಿಸಿದ ಮ್ಯಾನೇಜರರ ಹಂಚಿಕೆ ಫಲಿಸಿತು. ಅದಕ್ಕೆ ಪ್ರತಿಯಾಗಿ ನೀರಲಕಟ್ಟಿಯವರಿಗೆ '**ನಾಟ್ಯಾನಂದ**' ಎಂಬ ಬಿರುದೂ ದೊರೆತಿದ್ದಿತು

ಈ ಪ್ರಕಟನೆಯನ್ನು ನೋಡಿ ಎಲ್ಲಕ್ಕಿಂತಲೂ ಹೆಚ್ಚಾಗಿ ಕಳವಳಗೊಂಡವನು ಪದ್ಮಪ್ಪನು. ತಮ್ಮ ಶ್ರೇಯಾಂಸನಿಗೆ ಇಂಥ ಶಿಕ್ಷಕರ ಸಹವಾಸ ಬಂದಿತಲ್ಲ ಎಂದು ಅವನು ಮರುಗಿದನು. ಶ್ರೇಯಾಂಸನು ಅವನ ಪಾತ್ರವನ್ನು ಅಭಿನಯಿಸಿದಾಗ ನೋಡಿ ಬಂದ ಬಾಳಪ್ಪನು ಮನೆಯಲ್ಲಿ ಉತ್ಸಾಹದಿಂದಲೇ ಮಗನ ಚಾತುರ್ಯವನ್ನು ಹೇಳಿದ್ದನು. ಮರುದಿನ ಶ್ರೇಯಾಂಸನ ಕೀರ್ತಿಯೂ ಪದ್ಮಪ್ಪನ ಕಿವಿಗೆ ಬಿದ್ದಿದ್ದಿತು. ಅದರ ಜೊತೆಗೆ ಶ್ರೇಯಾಂಸನು ನಾಟಕದ ಮನೆಯಲ್ಲಿ ಆ ದಿನ ಇರುಳು ಹೊಟೇಲಿನಿಂದ ತರಿಸಿದ ಚಹ ಕುಡಿದ ಸಂಗತಿಯೂ ಹೇಗೋ ಪದ್ಮಪ್ಪನ ಕಿವಿಗೆ ಮುಟ್ಟಿದ್ದಿತು. ಅದರಿಂದ ಅವನು ತುಂಬ ನೊಂದುಕೊಂಡಿದ್ದ. ನೀರಲಕಟ್ಟಿ ಮಾಸ್ತರರ ಚಟುವಟಿಕೆಗಳ ಬಗ್ಗೆ

ಅಸಹ್ಯಪಟ್ಟುಕೊಂಡಿದ್ದ. ಈಗ ಈ ಪ್ರಕಟನೆಯನ್ನು ಕಂಡಮೇಲಂತೂ ತಮ್ಮ ಶ್ರೇಯಾಂಸನ ಬಗ್ಗೆ ತಾವು ಎಚ್ಚರ ತಕೊಳ್ಳದೆ ಗತಿಯಿಲ್ಲವೆಂದು ತೀರ್ಮಾನಿಸಿ,

"ಹುಡುಗನಿಗೆ ನಾಟಕಕ್ಕೆ ಹೋಗಲಿಕ್ಕೆ ದುಡ್ಡು ಕೊಡಬೇಡಿರಿ"

ಎಂದು ಮನೆಯಲ್ಲಿ ಪದ್ಮಪ್ಪ ಸೂಚನೆಯಿತ್ತ.

"ಅವನಿಗೆ ಯಾರು ಕೊಡುವರು ? ಒಮ್ಮೆ ಏನೋ ಅವರಪ್ಪ ಕೊಟ್ಟಿದ್ದ. ಅದೂ ಅವರ ಮಾಸ್ತರ ತಿಕೀಟ ತಂದು ಕೊಟ್ಟಿದ್ದರು ಅಂತ....ಹೇಳಿದ ಮೇಲೆ...."

ಸುಂದರವ್ವ ಗಂಡನಿಗೆ ಸಮಾಧಾನ ಹೇಳಿದಳು.

"ಬೇಲಿ ಎದ್ದು ಹೊಲ ಮೇದಂತೆ ಆಗಿದೆ. ಹುಡುಗರನ್ನು ಹಾಳಿಗೆ ಹಚ್ಚಲಿಕ್ಕೆ ಇಂಥಾ ಮಾಸ್ತರರೇ ಕಾರಣರು....ತಲೆಯ ಮೇಲಿಷ್ಟು ಜುಟ್ಟು ಕಾಯ್ದುಕೊಂಡು, ಹೊಟೇಲದೊಳಗ ಚಹ ಕುಡಿಯುತ್ತ ತಿರಗುವ ಇವರಿಗೆ ಶಿಕ್ಷಕ ಕೆಲಸಕ್ಕೆ ನಿಯಮಿಸಿದ್ದೇ ತಪ್ಪು. ಇವರಲ್ಲಿ ಧರ್ಮ ಇಲ್ಲ, ನೀತಿ ಇಲ್ಲ....ಅದನ್ನೇ ಹುಡುಗರು ಕಲಿಯುತ್ತಾ ಹೋಗುವವರು." ಸ್ವಲ್ಪ ತಡೆದು, "ನಮ್ಮ ಆತ್ಮಾರಾಮ ಮಾಸ್ತರ ಇಲ್ಲ ಈಗ ?"

ಹೀಗೆ ಪದ್ಮಪ್ಪನಂತೆ ಹೇಳುವವರು ಊರಲ್ಲಿ ತೀರ ಕಡಿಮೆ ಜನ. ನೀರಲಕಟ್ಟಿ ಮಾಸ್ತರರ ಪ್ರಸಿದ್ಧಿಯನ್ನು ಕಾಣಲಾರದ್ದಕ್ಕೆ ಹೆಡ್ ಮಾಸ್ತರರು ಹುಡುಗರಿಗೆ ನಾಟಕಕ್ಕೆ ಹೋಗಬಾರದೆನ್ನುವರೆಂದೇ ಊರ ಜನರಲ್ಲಿ ಪ್ರಚಾರವಾಗಿತ್ತು. ಅದಕ್ಕೆ ಬಹುಮಟ್ಟಿಗೆ ನೀರಲಕಟ್ಟಿಯವರೇ ಕಾರಣರಾಗಿದ್ದರು.

ಊರಲ್ಲಿ ಏನು ನಡೆದಿದ್ದರೂ ಶ್ರೇಯಾಂಸ ಮಾತ್ರ ಹತ್ತೆಂಟು ನಾಟಕಗಳನ್ನು ನೋಡದೆ ಇರಲಿಲ್ಲ. ಒಂದು ನಾಟಕಕ್ಕೆ ಹೋಗಲಿಕ್ಕೆ ತಂದೆ ರೊಕ್ಕ ಕೊಡಬೇಕಾದರೆ ಸಾಕುಬೇಕಾಗಿ ಹೋಗಿದ್ದಿತು. ಆದರೆ ತಾಯಿಯ ಪೆಟ್ಟಿಗೆಯಿಂದ ಅವನು ಮತ್ತೆರಡು ನಾಟಕಗಳಿಗೆ ಹೋಗು

ವುದಕ್ಕೆ ದುಡ್ಡು ಸಿಕ್ಕಿತು. ಆಮೇಲೆ ಆ ಮಾರ್ಗವೂ ಕಟ್ಟಾಯಿತು. ಇನ್ನೂ ನಾಟಕ ನೋಡುವ ಹಂಬಲವೇನೂ ಹಿಂಗಲಿಲ್ಲ, ಶ್ರೇಯಾಂಸನಿಗೆ. ಕಿತ್ತೂರ ಚೆನ್ನಮ್ಮನ ನಾಟಕವನ್ನು ನೋಡಿ ಅವನು ಮೈಮರೆಯುವನು. ಅದರಲ್ಲಿಯ ಕನ್ನಡಿಗರ ವೀರಶ್ರೀಯನ್ನು ನೆನೆಯುವನು. ಅದೇ ಕಾಲಕ್ಕೆ ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ'ದೊಳಗಿನ ಹಲವು ಸಂಗತಿಗಳು ಅವನ ದೃಷ್ಟಿಪಥದಲ್ಲಿ ಸುಳಿದು ಹೋಗುವವು. ರಾಮಾಯಣದೊಳಗಿನ ಶಬರಿಯು ರಾಮನಿಗಾಗಿ ಕಾದುಸಿಂತ ಸನ್ನಿವೇಶವು ಅವನ ಹೃದಯವನ್ನು ಹಣ್ಣುಗೊಳಿಸುವುದು. ಅವಳ ಭಕ್ತಿಯಿಂದ ಶ್ರೇಯಾಂಸನ ಮನಸ್ಸು ಪರಿಶುದ್ಧವಾಗುವುದು. 'ಚಿತ್ರಾಂಗದೆ'ಯೊಳಗಿನ ಬಬ್ರುವಾಹನನ ಶೌರ್ಯ, 'ಛತ್ರಪತಿ ಶಿವಾಜಿ'ಯೊಳಗಿನ ಶಿವಾಜಿಯ ಪರನಾರೀ ಸೋದರ ಭಾವನೆಗಳು ಇವನ ಮನಸ್ಸಿನ ಮೇಲೆ ತುಂಬ ಪರಿಣಾಮವನ್ನು ಮಾಡಿದುವು. ನಾಟಕನೋಡಿ ಬಂದಮೇಲೆ ಎರಡು ಮೂರು ದಿನಗಳವರೆಗೆ ಅದರೊಳಗಿನ ದೃಶ್ಯಗಳನ್ನು ಬಗೆಗಣ್ಣಿನೆದುರಿಗೆ ತಂದು ತಂದು ನೋಡಿ ನಲಿಯುವ ಶ್ರೇಯಾಂಸ. ತನ್ನಲ್ಲಿಯೇ ತಾನು ತಲ್ಲೀನನಾಗಿರುವ. ಈ ತಲ್ಲೀನತೆಯನ್ನು ನೋಡಿ ಸಾಲೆಯಲ್ಲಿ ಆತ್ಮಾರಾಮ ಮಾಸ್ತರರು ಒಮ್ಮೊಮ್ಮೆ ಕೇಳುವರು :

"ಏನು ವಿಚಾರದಲ್ಲಿರುವೆಯೋ ಶ್ರೇಯಾಂಸ ?"

"ಆಂ ! ಏನಿಲ್ಲ....!"

ಒಮ್ಮೆಲೇ ಕನಸಿನಿಂದ ಎಚ್ಚತ್ತವನಂತೆ ಶ್ರೇಯಾಂಸ ಉತ್ತರ ಕೊಡುವ.

"ಮೈಯಲ್ಲಿ ಆರೋಗ್ಯ ಚೆನ್ನಾಗಿಲ್ಲವೆ ?"

"ಇದೆ...."

"ನಿನ್ನೆ ಅಭ್ಯಾಸಕ್ಕೆ ಬಂದಿರಲಿಲ್ಲವಲ್ಲ ?"

"ಕತ್ತಲೆಯಾಯಿತು. ಮನೆಯಲ್ಲಿಯೇ ಓದಿ ಮಲಗಿದೆ...."

"ಏನು ನಾಟಕಕ್ಕೆ ಹೋಗಿದ್ದೆಯೊ ?"

"ಇ....ಲ್ಲ...."

"ಹೋದರೇನು ಅಡ್ಡಿಯಲ್ಲ. ಆದರೆ ಮೊನ್ನೆ ನಿನ್ನ ಪದ್ಮಪ್ಪ ಬೇರೆ ಏನೋ ಅನ್ನುತ್ತಿದ್ದ....ಅದಕ್ಕಂದೆ...."

ಶ್ರೇಯಾಂಸ ಸುಮ್ಮನಾದ. ನಿಜವಾಗಿಯೂ ಮುನ್ನಾದಿನ ಇರುಳು ಅವನು ನಾಟಕವನ್ನು ನೋಡಲಿಕ್ಕೆ ಹೋಗಿದ್ದ. ಮನೆಯಲ್ಲಿ ಮಾಸ್ತರರ ಮನೆಗೆ ಅಭ್ಯಾಸಕ್ಕೆ ಹೋಗುವೆನೆಂದು ಹೇಳಿ, ಇತ್ತ ನಾಟಕದ ಥೇಟರಿಗೆ ತೆರಳಿದ್ದ. ಈ ಸಂಗತಿ ಎಷ್ಟೋ ವಿದ್ಯಾರ್ಥಿಗಳಿಗೂ ಗೊತ್ತಿತ್ತು. ಅದನ್ನು ಆತ್ಮಾರಾಮ ಮಾಸ್ತರರ ಕಿವಿಗೆ ಹಾಕಬೇಕೆಂದು ಮಾತೆತ್ತುವಷ್ಟರಲ್ಲಿ ಮಾಸ್ತರರು ಅಭ್ಯಾಸವನ್ನು ಆರಂಭಿಸುವದಕ್ಕಾಗಿ ಶ್ರೇಯಾಂಸನ ಹತ್ತಿರ ಪುಸ್ತಕವನ್ನು ಬೇಡಿದರು.

ಶ್ರೇಯಾಂಸ ತನ್ನ ಪುಸ್ತಕದ ಗಂಟನ್ನು ಬಿಚ್ಚಿದ. ಆದರೆ ಗುರುಗಳಿಗೆ ಕೊಡಲಿಕ್ಕೆ ಅವರು ಬೇಡಿದ 'ಗಣಿತ' ಅವನಲ್ಲಿರಲಿಲ್ಲ. ಇದು ಗೊತ್ತಿದ್ದೂ ಕೂಡ ಅವನು ತನ್ನ ಗಂಟಿನಲ್ಲಿ ನೋಡಲಿಕ್ಕೆ ಸಹಜವಾಗಿ ಕೈಹಾಕಿದ. ದಿನದ ಪರಿಪಾಠದ ಫಲವದು !

"ನಿನ್ನೆಯೇ ಸೋಮನಿಗೆ ಗಣಿತ ಮಾರಿದಾನರಿ ಶ್ರೇಯಾಂಸ...."

ಒಬ್ಬ ವಿದ್ಯಾರ್ಥಿ ಹೇಳಿಯೇ ಬಿಟ್ಟ.

"ಇರಲಿ ; ನಿನ್ನದು ತಾ !"

ಎಂದರು ಮಾಸ್ತರರು. ಸಧ್ಯ ಅಭ್ಯಾಸ ಆರಂಭಿಸಬೇಕಾಗಿತ್ತವರಿಗೆ.

ಆದರೂ ವರ್ಗದ ಇನ್ನೊಂದು ಮೂಲೆಯಿಂದ ಧ್ವನಿಯೊಂದು ಹೊರಟಿತು.

"ನಾಟಕದ ಟಿಕೀಟಿಗೆ ದುಡ್ಡು ಬೇಕಲ್ಲರಿ !"

ಆತ್ಮಾರಾಮ ಮಾಸ್ತರರು ಆ ದನಿ ಬಂದತ್ತ ಸಿಟ್ಟಿನಿಂದೊಮ್ಮೆ ನೋಡಿದರು. ಆಮೇಲೆ ಶ್ರೇಯಾಂಸನ ಕಡೆಗೆ ದೃಷ್ಟಿಯೊಂದನ್ನು ಬೀರಿ, ಯಾವನೋ ಒಬ್ಬ ವಿದ್ಯಾರ್ಥಿಯು ಕೈಯಲ್ಲಿ ತಂದುಕೊಟ್ಟ ಪುಸ್ತಕವನ್ನು ತೆರೆದು ಗಣಿತವನ್ನು ಹೇಳಲು ಆರಂಭಿಸಿದರು.

ಆದರೆ ಶ್ರೇಯಾಂಸನ ಮನಸ್ಸು ಅಭ್ಯಾಸದ ಕಡೆಗೆ ಇರಲಿಲ್ಲ.

ಉಳಿದ ವಿದ್ಯಾರ್ಥಿಗಳ ಮನಸ್ಸಿಗೂ ಸಮಾಧಾನವಿರಲಿಲ್ಲ.

೭

ನಾಟಕ ಕಂಪನಿಯು ಎರಡು ಮೂರು ತಿಂಗಳು ಜೈನಾಪುರದಲ್ಲಿ ತಳವೂರಿತು. ಅದರಿಂದ ಶ್ರೇಯಾಂಸನಿಗೂ ಅದರೊಳಗಿನ ಒಬ್ಬೊಬ್ಬ ನಟರ ಪರಿಚಯವಾಯಿತು. ಅವರ ಜೊತೆಗೆ ಹಗಲು ಶ್ರೇಯಾಂಸ ಊರಲ್ಲಿ ತಿರಗುವಂತಿರಲಿಲ್ಲ. ಅದನ್ನು ಪದ್ಮಪ್ಪನಾಗಲಿ, ತನ್ನ ತಂದೆಯಾಗಲಿ ಕಂಡಾರೆಂದು ಅವನಿಗೆ ಹೆದರಿಕೆಯಿತ್ತು. ನಾಟಕ ನೋಡಲಿಕ್ಕೆ ಪುಕ್ಕಟೆ ಹೋಗುವಷ್ಟು ಪರಿಚಯವನ್ನು ಮಾತ್ರ ಬೆಳೆಯಿಸಿಕೊಂಡಿದ್ದನು. ಅದಕ್ಕೆ ಅವನ ಗುರುಗಳಲ್ಲೊಬ್ಬರಾದ ನೀರಲಕಟ್ಟಿ ಮಾಸ್ತರರೂ ನೆರವಾಗಿದ್ದರು. ಅವರ ಜೊತೆಗೆ ಒಂದೆರಡು ಸಲ ಕಂಪನಿಯವರ ಮನೆಗೆ ಹೋಗಿ, ಮ್ಯಾನೇಜರರಿಗೂ ಮುಖ ಪರಿಚಯದ ಹುಡುಗನಾಗಿದ್ದ ಶ್ರೇಯಾಂಸ. ಅದರಿಂದ ಕಂಪನಿಯ ನಾಟಕಗಳೆಲ್ಲ ಅವನವೇ ಆಗಿದ್ದುವು.

ಊರಲ್ಲಿಯ ಹೆಂಗಸರು ಗಂಡಸರು ಎಲ್ಲರೂ ನಾಟಕಗಳನ್ನು ನೋಡಿ ನೋಡಿ ನಲಿದರು. ಕಂಪನಿಯವರಿಗೂ ದುಡ್ಡು ಸಾಕಷ್ಟು ಕೂಡಿತು. ಆ ಸಲದ ಸುಗ್ಗಿಯು ಚೆನ್ನಾಗಿ ಆದುದರಿಂದ ಜನರ ಕೈಯಲ್ಲಿ ದುಡ್ಡು ಇದ್ದುವು. ಅದನ್ನೆಲ್ಲ ನಾಟಕ ಕಂಪನಿಯವರು ಹೀರಿಕೊಂಡು ಬಿಟ್ಟರು. ಜನಕ್ಕೆ ಬೇಕೆನಿಸುವ ಕೆಳತರಗತಿಯ ಹಾಸ್ಯ, ಸ್ತ್ರೀ ಪಾತ್ರಗಳನ್ನು ಅಭಿನಯಿಸಲು ಸ್ತ್ರೀಯರನ್ನೇ ತಂದು ಕಂಪನಿಯವರು ಸಿರಿವಂತರಾದರು ಅವರಿಗೆ ನೀರಲಕಟ್ಟಿ ಮಾಸ್ತರರ ಸಹಕಾರವು ತುಂಬ ಫಲವನ್ನು ಕೊಟ್ಟಿತು.

ಊರೆಲ್ಲ ಇಷ್ಟು ನಾಟಕಗಳನ್ನು ನೋಡಿ ಸಂತಸಪಡುತ್ತಿದ್ದರೂ

ಶ್ರೇಯಾಂಸನ ಮನೆಯವರು ಒಂದು ದಿನವೂ ನಾಟಕ ನೋಡಲಿಕ್ಕೆ ಹೋಗಲಿಲ್ಲ. ನೆರೆಹೊರೆಯ ಹೆಂಗಸರು ನಾಟಕಕ್ಕೆ ಹೋಗುವಾಗ ಸರಸವ್ವನನ್ನು ಮನೆಯಿಂದ ಹೊರಗೆ ಕರೆದು ಕೇಳುತ್ತಿದ್ದರು :

"ಒಂದು ದಿನವಾದರೂ ನಾಟಕಕ್ಕೆ ನಡೆಯಲ್ಲ!"

"ನಮ್ಮವರ ಮನಸ್ಸಿಗೆ ಬರುವುದಿಲ್ಲ ತಾಯಿ ಅಂಥದು"

ಸರಸವ್ವ ಅವರಿಗೆ ಹೇಳುವಳು.

"ಇಲ್ಲದ ಒಂದು ಹೇಳುವಾಕೆ ನೀ. ನಿನ್ನ ಮಗ ಹಗಲಿ ರಾತ್ರಿ ಅಲ್ಲೇ ಇರತಾನಲ್ಲ ?"

"ತನ್ನ ಮಗನಿಗೇ ನಾಟಕ ನೋಡುವ ಗುತ್ತಿಗೆ ಕೊಟ್ಟಾಳ ಬಿಡು ಸರಸಾ."

ಎಂದು ಇನ್ನೊಬ್ಬಳು ನುಡಿದು, ಜೊತೆಯವಳೊಡನೆ ನಾಟಕಕ್ಕೆ ನೇಳೆಯಾಗುವದೆಂದು ಅವಸರದಿಂದ ಹೋಗುವಳು. ಸರಸವ್ವ ಸಿದಾನವಾಗಿ ನಡೆದು ಮನೆಯೊಳಗೆ ಬರುವಳು.

ಹೀಗೆ ಶ್ರೇಯಾಂಸ ನಾಟಕದ ಹುಚ್ಚಿನಲ್ಲಿಯೇ ಈ ವರ್ಷದ ಬಹು ದಿನಗಳನ್ನು ಕಳೆದಿದ್ದರೂ ಮುಲ್ಕಿ ಪರೀಕ್ಷೆಯಲ್ಲಿ ಸಾಲೆಗೆ ಮೊದಲಿಗನಾಗಿ ತೇರ್ಗಡೆ ಹೊಂದಿದ. ಇದರಿಂದ ಪದ್ಮಪ್ಪನಿಗೆ ಹಿಡಿಸಲಾರದಷ್ಟು ಆನಂದ. ಆ ಆನಂದ ಭರದಲ್ಲಿ ಶ್ರೇಯಾಂಸನ ಹಿಂದಿನ ಅಪರಾಧಗಳನ್ನೆಲ್ಲ ಮರೆತುಬಿಟ್ಟರವರು. ಆತ್ಮಾರಾಮ ಮಾಸ್ತರರಿಗೂ ತುಂಬ ಸಂತಸವಾಗಿದ್ದಿತು.

ಪರೀಕ್ಷೆ ಮುಗಿದು ಸಾಲೆಗೆ ಬಿಡುವು ಆಗಿದ್ದರೂ ಶ್ರೇಯಾಂಸ ಆತ್ಮಾರಾಮ ಮಾಸ್ತರರ ಮನೆಗೆ ಹೋಗುವದನ್ನೇನೂ ನಿಲ್ಲಿಸಿರಲಿಲ್ಲ. ಹಲವು ಜನ ವಿದ್ಯಾರ್ಥಿಗಳು ಪರೀಕ್ಷೆಗೆ ಹೋಗಿ ಬಂದಮೇಲೆ ಮಾಸ್ತರರಿಗೆ ಭೆಟ್ಟಿಯೂ ಕೂಡ ಆಗಿರಲಿಲ್ಲ. ಆದರೆ ಶ್ರೇಯಾಂಸ ಹಾಗೆ ಮಾಡಿರಲಿಲ್ಲ. ದಿನಾಲು ನಾಲ್ಕಾರು ತಾಸುಗಳನ್ನಾದರೂ ಆತ್ಮಾರಾಮ ಮಾಸ್ತರರ ಮನೆಯಲ್ಲಿಯೇ ಕಳೆಯುವನು. ಪರೀಕ್ಷೆಗೆಂದು

ಹೋದ ವಿದ್ಯಾರ್ಥಿಗಳ ಕೂಡ ಆತ್ಮಾರಾಮರು ಹೋದಾಗ ತಮ್ಮ ಶಾಲೆಯ ವಾಚನಾಲಯಕ್ಕಾಗಿ ನೂರಾರು ಪುಸ್ತಕಗಳನ್ನು ಕೊಂಡು ತಂದಿದ್ದರು. ಹಿಂದೆ ನಾಟಕದ ಕಾಲಕ್ಕೆ ಕೂಡಿದ ಹಣದಲ್ಲಿಯ ಬಹು ಭಾಗವನ್ನು ಇದರಲ್ಲಿ ವೆಚ್ಚಮಾಡಿದ್ದರು. ಆ ಹೊಸ ಪುಸ್ತಕಗಳೆಲ್ಲ ಇನ್ನೂ ಹೆಡ್‌ಮಾಸ್ತರರ ಮನೆಯಲ್ಲಿಯೇ ಇದ್ದುವು. ಅವು ಶ್ರೇಯಾಂಸನ ಮನಸ್ಸನ್ನು ಸೆಳೆದಿದ್ದುವು. ಈ ಬೇಸಿಗೆಯ ಬಿಡುವಿನಲ್ಲಿ ಅವನ್ನೆಲ್ಲ ಓದಿ ಬಿಡುವುದೆಂದು ಆತ ನಿಶ್ಚಯಿಸಿದ್ದ. ಅದರಂತೆ ಅವನ ಕಾರ್ಯಕ್ರಮವೂ ಸಾಗಿತ್ತು.

ಬಾಳಪ್ಪ ತಿಂಗಳೊಪ್ಪತ್ತು ಸುಮ್ಮನಿದ್ದ. ಮಗನ ದಿನಚರಿಯನ್ನು ನಿರೀಕ್ಷಿಸಿದ. ಅವನು ತಾನಾಗಿಯೇ ಹೊಲಕ್ಕೆ ಬರುವ ಲಕ್ಷಣವೇನೂ ತೋರಲಿಲ್ಲ. ಏಳನೆಯ ಇಯತ್ತೆಯ ಪರೀಕ್ಷೆಯಾಯಿತು ಕಲಿಯುವುದು ಮುಗಿಯಿತು. ಇನ್ನು ಹೊಲದ ಕೆಲಸ ನೋಡಬೇಕು ಮಗ ಎಂದವನ ಬಯಕೆ. ಅದಕ್ಕಾಗಿ ಒಂದು ದಿನ ಪಡಸಾಲೆಯಲ್ಲಿ ಎಲ್ಲರೂ ಕುಳಿತಾಗ ಬಾಳಪ್ಪ ಮಗನಿಗೆ ಹೇಳಿದ :

"ಇನ್ನೆರಡು ದಿನಗಳಲ್ಲಿ ಅಕ್ಷಯ ತೃತೀಯೆ. ಅಂದು ಶುಭ ದಿನ ಅದೇ ದಿನ ನೀನೂ ಹೊಲಕ್ಕೆ ಬರಲಿಕ್ಕೆ ಆರಂಭಿಸು...."

"ಅದಕ್ಕೂ ಏನು ಮುಹೂರ್ತ ಬೇಕೇನು ?"

ಸುಂದರವ್ವ ಕೇಳಿದಳು.

"ಯಾವದಾದರೂ ಹೊಸ ಕೆಲಸ ಆರಂಭಿಸುವದಾದಲ್ಲಿ ಚಲೋ ದಿನ ನೋಡಿ ಆರಂಭಿಸುವುದೇ ನೆಟ್ಟಗಲ್ಲ !"

ಏನೋ ಒಂದು ಕಾರಣವನ್ನು ಹೇಳಿ ಅಕ್ಕನ ಬಾಯಿ ಮುಚ್ಚಿಸಿದ ಬಾಳಪ್ಪ.

"ಹಬ್ಬದ ದಿನ ಹೊಲಕ್ಕೇನು ಹೋಗುತೀರಿ ? ಅಂದು ಬಸ್ತಿಯೊಳಗೆ ಪೂಜೆ ಪುನಸ್ಕಾರ...."

ಸರಸವ್ವ ಗಂಡನ ಮಾತಿಗೆ ಪ್ರತಿಯಾಗಿ ಹೇಳಿದಳು.

"ಪೂಜೆ ಪುನಸ್ಕಾರಗಳೇನು ಮುಂಜಾನೆಯಿಂದ ಸಂಜೆಯುತನಕ ಇರತಾವೇನು? ಪೂಜೆಯು ಹೊತ್ತಿಗೆ ಬಂದರಾಯಿತು. ಕಬ್ಬಿನ ಹಾಲಿನ ಪೂಜೆ. ಮಧ್ಯಾಹ್ನದ ಹನ್ನೆರಡು ಗಂಟೆಗೆ ಆದೀತು...."

ಬಾಳಪ್ಪ ಹೆಂಡತಿಯು ಬಾಯನ್ನು ಮುಚ್ಚಿಸಿದ

"ನಾವೂ ಇಷ್ಟು ಕಬ್ಬಿನ ಹಾಲು ತರಿಸಬೇಕು." ಪದ್ಮಪ್ಪ ನಡುವೆಯೇ ಬಾಯಿ ಹಾಕಿ ಶ್ರೇಯಾಂಸನ ಕಡೆಗೆ ಹೊರಳಿ ಹೇಳಿದ: "ನಾಳಿನ ಹಬ್ಬ ನಿನ್ನದೇ ಶ್ರೇಯಾಂಸ....ಹಿಂದಿನ ಕಾಲಕ್ಕೆ ಶ್ರೇಯಾಂಸ ಮಹಾರಾಜ ಆದಿನಾಥ ತೀರ್ಥಂಕರರಿಗೆ ಇಕ್ಷುರಸದ ಆಹಾರ ದಾನ ಕೊಟ್ಟು, ಒಳ್ಳೆಯ ಗತಿಯನ್ನು ಪಡೆದ ದಿನವಿದು.... ನಾಳಿನ ಅಕ್ಷಯ ತೃತೀಯ ದಿನ ನಿನ್ನ ಕೈಯಿಂದಲೇ ಭಗವಾನರಿಗೆ ಪೂಜೆ ಆಗಲಿ.... ನಾವು ನೋಡಿ ಸಂತೋಷ ಪಡತೇವಿ."

"ಆ ಶ್ರೇಯಾಂಸ ಎಲ್ಲಿ ನಾ ಎಲ್ಲಿ....ಆನೆಯ ಮುಂದೆ ಆಡು ಇದ್ದಂತೆ... "

ಶ್ರೇಯಾಂಸ ತನ್ನ ಅಲ್ಪತೆಯನ್ನು ಪ್ರದರ್ಶಿಸಿದ.

ಇಲ್ಲಿಯವರೆಗೆ ತನ್ನ ಮಾತುಗಳಿಗೆಲ್ಲ ಮೌನವಾಗಿದ್ದ ಮಗನು ಈಗ ಪದ್ಮಪ್ಪನ ಮಾತಿಗೆ ಉತ್ತರ ಹೇಳಿದ್ದನ್ನು ಕೇಳಿ ಬಾಳಪ್ಪನಿಗೆ ಸುಮ್ಮಗಿರಲಿಕ್ಕಾಗಲಿಲ್ಲ. ಹೊಲದ ಕೆಲಸದಲ್ಲಿ ಮಗನ ಮನಸ್ಸಿಲ್ಲ ವೆಂಬುದನ್ನು ಆತ ತಿಳಿದುಕೊಂಡು, ಪದ್ಮಪ್ಪನ ಮಾತಿಗೆ ವಿರೋಧಿಸಿದ :

"ಬಸ್ತಿಯೊಳಗೆ ಪೂಜೆ ಮಾಡಲಿಕ್ಕೆ ಇವನೇನು ಉಪಾಧ್ಯೆ ಏನು?"

"ಉಪಾಧ್ಯೆಯರೇ ಪೂಜೆ ಮಾಡಬೇಕೆಂಬೇನಿಲ್ಲ. ಉತ್ತರ ಹಿಂದೂಸ್ತಾನದಲ್ಲಿ ಶ್ರಾವಕರೆಲ್ಲರೂ ಪೂಜೆ ಮಾಡುವರು....ಸಮ್ಮೇದ ಶಿಖರದ ಯಾತ್ರೆಗೆ ಹೋದಾಗ ನೋಡಿಲ್ಲೇನು ನೀ?"

ಪದ್ಮಪ್ಪ ಆಧಾರಕೊಟ್ಟು ತನ್ನ ಮಾತನ್ನು ಪ್ರತಿಪಾದಿಸಿದ.

"ಇದ್ದೀತು. ಅವರೆಲ್ಲ ಶ್ರೀಮಂತರು. ಹಾಗೆ ಮಾಡಿದರೆ ಚೆಂದ ಕಾಣುವುದು. ನಮ್ಮಂಥ ಹೊಲದಲ್ಲಿ ದುಡಿದುಣ್ಣುವವರಿಗೆ ಅದೆಲ್ಲ ಏತಕ್ಕೆ ಬೇಕು ?"

ಬಾಳಪ್ಪ ನೇರವಾಗಿಯೇ ವಿರೋಧಿಸಿದ.

"ಧರ್ಮ, ಬಡವ ಬಲ್ಲಿದ ಎಂದು ಭೇದ ಮಾಡುವುದಿಲ್ಲ. ತಮ್ಮ ತಮ್ಮ ಆತ್ಮ ಕಲ್ಯಾಣ ಮಾಡಿಕೊಳ್ಳಲಿಕ್ಕೆ ಎಲ್ಲರಿಗೂ ಅವಕಾಶ ವಿದೆ...."

"ಹೊಟ್ಟೆ ತುಂಬಿಕೊಂಡ ಮೇಲೆ ಆತ್ಮ ಕಲ್ಯಾಣದ ವಿಚಾರ...."

"ಹೊಟ್ಟೆ ತುಂಬಿಕೊಳ್ಳುವದಂತೂ ಜನ್ಮಕ್ಕೆ ಹತ್ತಿದ್ದೇ ಇದೆ. ಅದು ಎಂದೂ ಮುಗಿಯುವುದಿಲ್ಲ. ಬರೇ ಹೊಟ್ಟೆಯ ವಿಚಾರ ಮಾಡಿದ್ದರೆ ಮಹಾವೀರರು ತೀರ್ಥಂಕರರೇ ಆಗುತ್ತಿರಲಿಲ್ಲ."

"ನೀ ಅನ್ನೋದು ನನಗೇನೂ ತಿಳಿಯುವುದಿಲ್ಲ !"

ಎಂದು ಬಾಳಪ್ಪ ಹೆಚ್ಚಿಗೆ ವಾದವನ್ನು ಬೆಳೆಸದೆ ಸುಮ್ಮನಾದ.

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಕುಳಿತರು. ನಡುವೆ ದೀಪ ಹಾಗೇ ಉರಿಯುತ್ತಿತ್ತು. ಶ್ರೇಯಾಂಸ ಮೆಲ್ಲನೆ ಎದ್ದು ಹೊರಗೆ ನಡೆದ.

"ಎಲ್ಲಿ ಮಾಸ್ತರರ ಮನೆಗೆ ನಡದೆ ಏನು ?"

ಸರಸವ್ವ ಕೇಳಿದಳು, ಮೌನವನ್ನು ಮುರಿದು.

"ಹೂಂ !"

ಎಂದ ಶ್ರೇಯಾಂಸ.

"ಇಷ್ಟು ಅವಸರದಿಂದ ಹೋಗಲಿಕ್ಕೇನು ? ಅಲ್ಲೇನು ಈಗ ಅಭ್ಯಾಸ ಇಲ್ಲ, ಏನಿಲ್ಲ. ಈಗ ಎಮ್ಮೆ ಹಿಂಡಿಕೊಂಡ ಮೇಲೆ ಹಾಲ ಕುಡಿದು ಹೋದೀ ಅಂತ ಅಲ್ಲ....!"

ಸುಂದರವ್ವ ಶ್ರೇಯಾಂಸನನ್ನು ತಡೆದಳು. ಅಳಿಯನ ಸಾಯಂಕಾಲದ ಊಟ ಸರಿಯಾಗಿ ಆಗಿಲ್ಲ ಎಂಬುದು ಅವಳಿಗೆ ಗೊತ್ತಿತ್ತು.

"ಹೊಟ್ಟೆ ತುಂಬಿದೆ. ಇನ್ನೇನು ಹಾಲುಗೀಲು ಬೇಡ...."

ಎಂದು ಮೆಟ್ಟುಗಲ್ಲನ್ನಿಳಿಯುತ್ತ ಶ್ರೇಯಾಂಸ ಹೇಳಿ ಹೋದ.

"ಅವನಿಗೆ ಇಲ್ಲಿ ಚಿತ್ತ ಇದ್ದರಲ್ಲೇನು ? ಪ್ರಪಂಚದ ವಿಷಯದಲ್ಲಿ ಅವನಿಗೆ ಏನೂ ಲಕ್ಷ್ಯ ಇಲ್ಲ...."

ಬಾಳಪ್ಪ ಮಗನ ಕಿವಿಗೆ ಬೀಳುವಂತೆ ಜೋರಾಗಿ ಮಾತನಾಡಿದ.

"ಇನ್ನೂ ತುಟಿ ಹಾಲ ಆರಿಲ್ಲ....ಈಗೇನ ಅವನಿಗೆ ತಿಳಿಯ ಬೇಕು ಪ್ರಪಂಚದ ವಿಷಯ ಪಾಪ !"

ಸುಂದರವ್ವ ಅಳಿಯನ ಪಕ್ಷ ವಹಿಸಿ ನುಡಿದಳು.

"ಇನ್ನೂ ಸಣ್ಣಾವ ಏನು ಅಕ್ಕಾ ಶ್ರೇಯಾಂಸ....? ನಾಳಿನ ಶ್ರುತ ಪಂಚಮಿಗೆ ಅಂದರೆ ಹದಿನೆಂಟು ವರ್ಷ ತುಂಬಿದುವು....ಮದುವೆಗೆ ಬಂದ...."

ಎಂದು ತಾಯಿ ಸರಸವ್ವ ಮಾತನ್ನು ಮೆಲ್ಲನೆ ಮಗನ ಮದು ವೆಯ ವಿಷಯಕ್ಕೆ ತಿರುಗಿಸಿದಳು.

ಮದುವೆಯ ಮಾತು ಬಂದೊಡನೆಯೇ ಪದ್ಮಪ್ಪ ಮೌನವನ್ನು ತಾಳಿದ. ಇಂಥ ಸಂಸಾರದ ಯಾವ ಕಾರ್ಯಕ್ಕೂ ಸಲಹೆ ಕೊಡುವ ದಿಲ್ಲವೆಂದು ಇದೇ-ಕಳೆದ ಚಾತುರ್ಮಾಸದಲ್ಲಿ ಮುನಿಗಳ ಹತ್ತರ ನಿಯಮ ತಕ್ಕೊಂಡಿದ್ದ ಅವನು. ಈ ವಿಷಯದಲ್ಲಿ ಚರ್ಚಿಸುವಂತಿರ ಲಿಲ್ಲ. ಇಷ್ಟೇ ಅಲ್ಲ, ಇಂಥ ಸಂದರ್ಭದಲ್ಲಿ ಅಲ್ಲಿರುವುದೂ ಧರ್ಮಕ್ಕೆ ಸಮ್ಮತವಾಗಿರಲಿಲ್ಲ. ಅದರಿಂದ ಅವನೂ ಎದ್ದು ಸಾಯಂಕಾಲದ ಜಿನ ದರ್ಶನಕ್ಕೆಂದು ಬಸ್ತಿಯ ಕಡೆಗೆ ಹೋದನು.

ಪದ್ಮಪ್ಪ ಹೊರಡುವಷ್ಟರಲ್ಲಿಯೇ ಅವನ ಕಿವಿಯ ಮೇಲೆಯೂ ಮಾತು ಬೀಳಲೆಂದು ಬಾಳಪ್ಪನು ನುಡಿದ :

"ಈ ವರ್ಷ ಅಂತೂ ಹೋಯಿತು. ಮುಂದಿನ ಬೇಸಿಗೆಗೆ ಶ್ರೇಯಾಂಸನ ಮದುವೆ ಮಾಡೇ ಬಿಡೋಣಲ್ಲ. ಎಲ್ಲರ ಕಣ್ಣೆದುರಿಗೆ ಒಮ್ಮೆ ಆಗಿ ಹೋಗಲಿ. ಈಗಿನ ದಿನಮಾನ ಕೆಟ್ಟ. ಹೀಗೇ ಇದ್ದೇವು

ಅಂತ ಹೇಳಲಿಕ್ಕೆ ಬರುವದಿಲ್ಲ...."

ಎಂದು ಅಕ್ಕನ ಮುಖದ ಕಡೆಗೆ ಒಪ್ಪಿಗೆಯನ್ನು ಕೇಳುವ ಭಾವ ದಿಂದ ನೋಡಿದ ಬಾಳಪ್ಪ.

"ನನ್ನದೇನು ಇದರೊಳಗ ಅದ....ಮಾಡುವವರು ಬಿಡುವವರು ನೀವು....ನಾನೊಂದು ಹೋಳಿಗೆ ಪ್ರೀತಿಗೆ ಸಂಹುವಳು...."

ಎಂದಳು ಸುಂದರವ್ವ.

"ಹೀಗಂದರೆ ಹೇಗಾದೀತವ್ವ....ನಿನ್ನ ಮೇಲೇ ನಾನು ಕೈಯೂರಿ ಕೂತೇನಿ. ಪದ್ಮಣ್ಣ ಅಣ್ಣ ಅಂತೂ ಸ್ವಾಮಿ ಅಂಥಾ ಮನುಷ್ಯ.... ಏನು ಮಾಡೋದು ನೀನss ಮಾಡುವಾಕೆ...."

ಅತ್ತಿಗೆಯ ಮೇಲೆ ಮಾತನ್ನಿಟ್ಟಳು ಸರಸವ್ವ....

"ಇನ್ನೂ ಮುಂದಿನ ವರ್ಷ ಆದರೂ ಬರಲಿ, ನೋಡೋಣ. ಅಲ್ಲಿಯವರೆಗೆ ಯಾರು ಬದುಕಿದ್ದಾರೋ ಯಾರು ಇಲ್ಲೋ....!"

ಸುಂದರವ್ವ ಭವಿಷ್ಯದ ಕೈಯಲ್ಲಿ ಮಾತನ್ನು ಕೊಟ್ಟು ಸುಮ್ಮ ನಾದಳು.

ಮಗನ ಮದುವೆಯ ವಿಷಯಕ್ಕೆ ಸರಸವ್ವನಿಗಂತೂ ತುಂಬ ಆತುರವಿದ್ದಿತು. ಅದನ್ನು ಎಷ್ಟು ಒತ್ತಿಟ್ಟುಕೊಂಡರೂ ಅದು ಹೊರ ಹೊಮ್ಮಿತು :

"ಮುಂದಿನ ತಿಂಗಳಲ್ಲಿ ಜಿನಗೌಡರ ಮಗಳ ಮದುವೆ ಅದ ಅಲ್ಲ....? ಇನ್ನು ಒಂದೆರಡು ಮುಹೂರ್ತ ಅವ ಏನೋ ?"

"ಆದೇನು ಗೊಂಬೆಯ ಮದುವೆ ಮಾಡೋದ ಅದ ಏನು ?"

ಎಂದು ಬಾಳಪ್ಪ ತುಸು ರಬಸಿನಿಂದ ಮಾತಾಡಿ ಹೆಂಡತಿಯ ಭಾವವನ್ನು ಪ್ರತಿಭಟಿಸಿದನು.

ಸಂಸಾರದ ಜಂಜಡ ಬೇಡವೆಂದು ಪದ್ಮಪ್ಪ ಮನೆಯೊಳಗಿಂದ ಎದ್ದು ಬಸದಿಗೆ ಬಂದರೆ ಅಲ್ಲಿಯೂ ಅದೇ ಮಾತು ಬಂತು. ಇವನು ಬಸದಿಯ ಕಟ್ಟೆಗಳನ್ನು ಏರಲಿಕ್ಕೂ ಒಳಗಿನಿಂದ ಗೌಡರು ದೇವರ

ದರ್ಶನ ಮಾಡಿಕೊಂಡು ಬರಲಿಕ್ಕೂ ಗಂಟು ಬಿತ್ತು. ಈಗ ದರ್ಶನಕ್ಕೆ ಹೊರಟಿದ್ದಾನೆ ಪದ್ಮಪ್ಪ, ಜಿನಾಲಯದ ಬಾಗಿಲಲ್ಲಿ ಮೊದಲೇ ಮಾತಾಡಿಸುವುದು ಒಳಿತಲ್ಲವೆಂದು ಗೌಡರು ಸುಮ್ಮನೆ ಬದಿಗೆ ಸರಿದು, ಪದ್ಮಪ್ಪನಿಗೆ ದಾರಿಯನ್ನು ಬಿಟ್ಟರು. ಆದರೆ ಅವನ ಹತ್ತಿರ ಒಂದು ಅಗತ್ಯದ ಕೆಲಸವಿದ್ದುದರಿಂದ ಮಾನಸ್ತಂಭದ ಕಟ್ಟೆಯ ಮೇಲೆ ಅವನು ದರ್ಶನ ಮಾಡಿಕೊಂಡು ಬರುವವರೆಗೆ ಪಂಡಿತರೊಡನೆ ಹರಟೆ ಹೊಡೆಯುತ್ತ ಕುಳಿತರು, ಗೌಡರು. ದಿನಾಲು ಮಂದಿರಕ್ಕೆ ದರ್ಶನಕ್ಕೆಂದು ಬಂದಾಗ ಅಲ್ಲಿ ಸ್ವಲ್ಪ ಹೊತ್ತು ಕುಳಿತು ಹೋಗುವ ಪರಿಪಾಠ ಗೌಡರಿಗಿದ್ದಿತೇನೋ ನಿಜ. ಆದರೆ ಇತ್ತೀಚಿಗೆ ಮಗಳ ಮದುವೆಯ ಗಡಬಡಿಯಲ್ಲಿ ಇದ್ದುದರಿಂದ ಅವಸರದಲ್ಲಿ ದರ್ಶನ ತಕ್ಕೊಂಡು ಹೋಗುತ್ತಿದ್ದರು. ಅದನ್ನು ಬಲ್ಲ ಪಂಡಿತನು ಕೇಳಿದನು :

"ಇಂದೇನು ಸ್ವಲ್ಪ ಸವಡು ಇದ್ದಂತೆ ಕಾಣತದ ಗೌಡರಿಗೆ ?"

ಪಂಡಿತನ ಈ ಸಲಿಗೆಯ ಮಾತು ಗೌಡರಿಗೆ ಸರಿಬೀಳಲಿಲ್ಲವೇನೋ ! ಅವನ ಮಾತನ್ನು ಪ್ರತಿಭಟಿಸುವ ರೀತಿಯಲ್ಲಿ ಮಾತನಾಡಿದರವರು :

"ಬಸ್ತಿಯೊಳಗೆ ಬಂದಾಗಲೂ ಆತುರವೇಕೆ? ಇದ್ದೇ ಇದೆಯಲ್ಲ ಸಂಸಾರ ನಮ್ಮ ಹಣೆ ಬರಹಕ್ಕ. ಇಲ್ಲಿ ಬಂದಾಗ ಆದರೂ ನಿಶ್ಚಿಂತೆಯಿಂದ ಇರೋದು ಅಂತ ದೇವದರ್ಶನಕ್ಕ ಬರೋದು....ಅದರೊಳಗೇನು ಸವಡದ ಪ್ರಶ್ನೆ...."

ಗೌಡರ ಯೋಗ್ಯತೆಗೆ ತಕ್ಕ ಮಾತುಗಳಿದ್ದುವು....ಧ್ವನಿಯಲ್ಲಿ ತುಂಬ ಆಢ್ಯತೆಯೂ ಇತ್ತು. ಹಾಗೇ ಹೆಗಲ ಮೇಲೆ ಹೊತ್ತುಕೊಂಡ ಧೋತರದಿಂದ ಕಟ್ಟೆಯನ್ನು ಜಾಡಿಸಿ ಕುಳಿತುಕೊಂಡರು.

ಪಂಡಿತ ತುಸು ಹೊತ್ತು ಸುಮ್ಮನೆ ಉಳಿದ. ಗೌಡರ ಒಲವನ್ನು ಅರಿತು ಇನ್ನು ಹೇಗೆ ಮಾತಿಗೆ ಆರಂಭಿಸಬೇಕೆಂದು ಯೋಚಿಸಿದ. ಕೊನೆಗೆ ಒಂದು ನಿರ್ಧಾರಕ್ಕೆ ಬಂದು,

"ನಾಳಿನ ಶ್ರುತಪಂಚಮಿಗೆ ಆರಂಭಿಸಲಿಕ್ಕೆ ಹೊಸ ಶಾಸ್ತ್ರ ಯಾವದಾವರೂ ಬಂದದೇನು ?"

ಸಹಜ ಸ್ವರದಲ್ಲಿ ಪಂಡಿತ ಗೌಡರಿಗೆ ಪ್ರಶ್ನೆ ಮಾಡಿದ.

ಗೌಡರ ಹೃದಯ ಅರಳಿತು. ಆನಂದದಿಂದ ಹೇಳಲಿಕ್ಕೆ ಹತ್ತಿದರು :

"ಈಸಲ ಶ್ರುತ ಪಂಚಮಿಗೆ ಒಳ್ಳೇ ಯೋಗಾಯೋಗ ಕೂಡಿ ಬಂದದ ಪಂಡಿತರ...."

"ಏನದು ?"

ಗೌಡರ ಮಾತನ್ನು ನಡುವೆಯೇ ತಡೆಯುವಂತೆ ಪಂಡಿತ ಕುತೂಹಲ ಸ್ವರವನ್ನು ತಂದು ಕೇಳಿದ.

ಇದರಿಂದ ಗೌಡರಿಗೆ ಸ್ಫೂರ್ತಿ ಬಂತು :

"ಇಂಥಾ ಸಂದರ್ಭ ನಮ್ಮ ಆಯುಷ್ಯದೊಳಗ ಎಂದೂ ಬರಲಾರದು....ಅಂಥಾ ಸುವರ್ಣ ಸಂಧಿ ನೋಡ್ರೀಸಲ. ಶ್ರುತ ಪಂಚಮಿ ಬಹಳ ವೈಭವದಿಂದ ಆಗಬೇಕು ನೋಡು ! ಅಂದು ಎರಡು ಸಾವಿರ ವರ್ಷದ ಹಿಂದೆ ಭಗವಂತ ಭೂತಬಲಿ ಆಚಾರ್ಯರು ಜೈನ ಸಿದ್ಧಾಂತ ಗ್ರಂಥವನ್ನು ಮೊದಲನೆಯ ಸಲ ಬರೆದು ಮುಗಿಸಿದರು. ವೈಭವ ದಿಂದ ಶ್ರಾವಕರಿಗೆ ಓದಿ ಹೇಳಿದರು....ಅಂದಿನಿಂದ ಶ್ರುತ ಪಂಚಮಿ ಆರಂಭ ಆಗಿದೆ. ಇದೇ ಜ್ಯೇಷ್ಠ ಶುದ್ಧ ಪಂಚಮಿಯೊಳಗಾಗಿ ಅವರು ಬರೆದ 'ಷಟ್ ಖಂಡಾಗಮ' ಮುದ್ರಣ ಆಗಿ ಬರತದ....ಧವಲ ಟೀಕಾ ಸಹಿತ....ಅದನ್ನೇ ಪೂಜಿಸೋದು ನಾವು"

"ಆಂ !"

ಈಗಾಗಲೇ ಕಟ್ಟೆಯ ಮೇಲೆ ಬಂದು ಕುಳಿತ ಪದ್ಮಪ್ಪನ ಮುಖ ದಿಂದ ಈ ಬೆರಗು ಸ್ವರ ಹೊರಟಿತು.

ಗೌಡರು ಪದ್ಮಪ್ಪನ ಕಡೆಗೆ ಹೊರಳಿ ಕೇಳಿದರು :

"ಯಾವಾಗ ದರ್ಶನ ಮುಗಿಸಿಕೊಂಡು ಹೊರಗೆ ಬಂದಿದೀರಲ್ಲ?"

"ಈಗ ಬಂದೆ!" ಸ್ವಲ್ಪ ತಡೆದು.... "ಧವಲ ಸಿದ್ಧ ಆಯ್ತು ಹಾಗಾದರೆ....?"

ಪದ್ಮಪ್ಪ ಗೌಡರಿಗೆ ಕೇಳಿದ.

"ಈಗ ಒಂದು ಭಾಗ ಆಗಿದೆ. ಹಿಂದಕ್ಕ ವಂಶೀಧರ ಶಾಸ್ತ್ರಿಗಳು ನಮ್ಮಲ್ಲಿ ಬಂದಿರಲಿಲ್ಲ? ಆಗ ೨೫ ರೂಪಾಯಿ ಒಯ್ದಿದ್ದರು. ಊರೊಳಗ ಒಂದು ಪ್ರತಿ ಇರಲಿ ಅಂತ ನಾನೇ ಒಟ್ಟ ರೂಪಾಯಿ ಕೊಟ್ಟಿದ್ದೆ. ಅದೇ ಬರುವುದು ಅದ...."

"ಬರಲಿರಿ! ನಿಮ್ಮ ಪುಣ್ಯದಿಂದ ನಾವೂ ಒಮ್ಮೆ ಕಣ್ಣಿನಿಂದ ನೋಡತೇವಿ" ಕೃತಜ್ಞತೆಯನ್ನು ವ್ಯಕ್ತಪಡಿಸುತ್ತ ಪದ್ಮಪ್ಪ ನುಡಿದ. ಆಮೇಲೆ "ಹೌದರಿ ಗೌಡರ, ಜಯಧವಲ ಅಮೇರಿಕಾದವರು ಒಯ್ದಾರಂತ ಹೌದೇನರಿ?" ಎಂದು ಪ್ರಶ್ನೆಯೊಂದನ್ನು ಹಾಕಿದ.

"ನಮ್ಮ ಧರ್ಮದ ಒಳ್ಳೇ ಗ್ರಂಥ ಇಲ್ಲಿ ಯಾವ ಇಟ್ಟಾರ? ಜಯಧವಲ, ಮಹಾಧವಲಗಳನ್ನು ಓದಿಯೇ ಅವರು ವಿಮಾನ, ಹಡಗ ಎಲ್ಲ ಮಾಡಲಿಕ್ಕೆ ಕಲಿತರಲ್ಲ...."

ಪಂಡಿತರು ತಮ್ಮ ತಿಳುವಳಿಕೆಯನ್ನು ಪ್ರದರ್ಶಿಸಿದರು.

"ಅಮೇರಿಕೆಯವರು ಒಯ್ದಿಲ್ಲ; ಜರ್ಮನಿಯವರು ಒಯ್ದಿದ್ದಾರೆ! ಅದರಿಂದಲೇ ಹದಿನೆಂಟನೆಯ ಇಸ್ವಿಯೊಳಗೆ ಎಂಥೆಂಥ ಅಸ್ತ್ರಗಳನ್ನು ಮಾಡಿ, ನಮ್ಮ ಇಂಗ್ಲೀಷ ಸರಕಾರದ ಕೂಡ ಯುದ್ಧ ಮಾಡಿದರಲ್ಲ!"

ಹೀಗೆ ಗೌಡರು ತಮ್ಮ ಹೆಚ್ಚಿನ ಬುದ್ಧಿವಂತಿಕೆಯನ್ನು ತೋರಿಸಿದರು. ಪಂಡಿತರ ಮಾತನ್ನು ಅಲ್ಲಗಳೆದರು. ಆಮೇಲೆ ಗೌಡರು ತಮ್ಮ ಕೆಲಸದ ವಿಷಯಕ್ಕೆ ಮಾತನ್ನು ತಿರುಗಿಸಿದರು:

"ಏನು, ಬಾಳಪ್ಪ ಎಲ್ಲಿ ಹೋಗತಾನ ಪದ್ಮಣ್ಣಾ ಈಗ?"

"ಹೊಲಕ್ಕೇ ಹೋಗತಾನಲ್ಲ!"

"ಇನ್ನು ನಾಲ್ಕೆಂಟು ದಿನ ಮದುವೆ ಆಗುವವರೆಗೆ ನಮ್ಮ

ಮನೆಯ ಕಡೆಗೇನೇ ಬರಲಿಕ್ಕೆ ಹೇಳಲ್ಲ! ಅಲ್ಲಿಯತನಕ ಹೊಲದ ಕೆಲಸ ಬೊಗಸೆ ನಿಲ್ಲಲಿ...."

ಮನೆತನದ ಹಿರಿತನವೆಲ್ಲ ಪದ್ಮಪ್ಪನ ಕಡೆಗೇ ಇದೆಯೆಂದು ಭಾವಿಸಿ ಗೌಡರು ನುಡಿದರು.

ಪದ್ಮಪ್ಪ, ಗೌಡರ ಮಾತಿಗೆ ಏನೂ ಹೇಳದೆ ಸುಮ್ಮನೆ ಕುಳಿತ ಗೌಡರೇ ಮತ್ತೆ ಮಾತನ್ನು ಮುಂದರಿಸಿದರು.

"ನಿಮ್ಮ ಸೋದರಳಿಯ ಪಾಸಾದ ಮೇಲೆ ಏನು ನಡೆಸಿದ್ದಾನೆ?"

"ಏನು ನಡೆಯಿಸುವುದು ?"

ಅನ್ಯಮನಸ್ಕನಾಗಿ ಪದ್ಮಪ್ಪ ನುಡಿದ.

"ಮದುವೆಯ ಮಂಟಪವನ್ನು ಸಿಂಗರಿಸಲಿಕ್ಕೆ ಅವನ ನೆರವು ನಮಗೆ ಬಹಳ ಬೇಕು....! ಇಷ್ಟು ಸಣ್ಣ ವಯಸ್ಸಿನೊಳಗೆ ಈ ಕಲೆ ಎಲ್ಲಿ ಕಲಿತ ಅನ್ನುವೆ ನಾನು....ಮೊನ್ನೆ ಅಕ್ಕಾಸಾನಿ ಮಗಳ ಜುಲುಪೆಯ ಕಾಲಕ್ಕ ನಿಮ್ಮ ಶ್ರೇಯಾಂಸನೇ ಅವರ ಮನೆಯಲ್ಲಿ ಕಾಗದದ ಮಲ್ಲಿಗೆಯ ಬಳ್ಳಿ ತಯಾರಿಸಿದ್ದನಂತೆ. ಬಹಳ ಚಂದ ಆಗಿತ್ತು ಪದ್ಮಪ್ಪ. ಆ ಚಂಡೂರಗೌಡ, ಸಾನಿ ಮಗಳನ್ನ ನೋಡುವವಕ್ಕಿಂತ ಆ ಮಲ್ಲಿಗೆ ಬಳ್ಳಿಯನ್ನೇ ನೋಡತಿದ್ದ...."

"ಇಲ್ಲದ್ದೊಂದ ಹೇಳುವವರು ಗೌಡರು!"

ಪಂಡಿತ ನಡುವೆ ಮಾತನ್ನು ಸೇರಿಸಿದ.

"ಸುಳ್ಳಲ್ಲ ಪಂಡಿತರೆ, ಅಷ್ಟು ಚಂದ ಆಗಿತ್ತು ಮಲ್ಲಿಗೆಯ ಬಳ್ಳಿ! ಅಕ್ಕಾಸಾನಿ ಹತ್ತು ಸಲ ಹೇಳಿದಳು ಶ್ರೇಯಾಂಸನ ಹೆಸರನ್ನು ಆ ಚಂಡೂರ ಗೌಡನ ಹತ್ತಾರ...."

ಜಿನಗೌಡರೂ ಶ್ರೇಯಾಂಸನ ಗುಣಕಥನ ಮಾಡಿದರು.

ಪದ್ಮಪ್ಪನಿಗೆ ಈ ಎಲ್ಲ ವಿಷಯಗಳು ಹೊಸವು. ಮನೆಯಿಂದ ಸಂಸಾರದ ಜಂಜಡ ಬೇಡವೆಂದು ಹೊರಬಿದ್ದರೆ ಬಸದಿಯಲ್ಲಿಯೂ

ಇದೇ ಮಾತು ಬರಬೇಕೆ?-ಎಂದು ಚಿಂತಿಸ ತೊಡಗಿದ. ಪ್ರಪಂಚ ದಲ್ಲಿದ್ದು ವ್ರತಗಳನ್ನು ನಡೆಯಿಸಿಕೊಂಡು ಹೋಗುವದೆಂದರೆ ಬಲು ಕಷ್ಟ ಎಂದು ಇಂದಿನ ಪ್ರಸಂಗದಿಂದ ಅವನಿಗೆ ಅನಿಸಿರಬೇಕು.... "ಅರಿಹಂತ! ಅರಿಹಂತ!" ಎಂದು ಉಚ್ಚರಿಸುತ್ತ ಮೆಲ್ಲನೆ ಕಟ್ಟೆ ಯಿಂದ ಇಳಿದು ನಡೆದ.

ಪದ್ಮಪ್ಪ ಏನೂ ಹೇಳದೆ ಎದ್ದು ಹೊರಟುದನ್ನು ಕಂಡು ಗೌಡರು,

"ಬಾಳಪ್ಪನಿಗೆ ನಾಳೆ ಹೊಲಕ್ಕೆ ಹೋಗಬೇಡಂತ ಹೇಳು... "

ಎಂದರು. ಧ್ವನಿಯು ಸ್ವಲ್ಪ ಸಿಟ್ಟಿನಿಂದ ಕೂಡಿದ್ದಿತು.

ಪದ್ಮಪ್ಪ, ಗೌಡರ ಮಾತಿಗೆ ಉತ್ತರವನ್ನೇನೂ ಹೇಳಲಿಲ್ಲ. ಅವನ ಮನಸ್ಸು ಭಾರವಾಗಿತ್ತು. ಸಂಸಾರದ ಯಾವ ವಿಷಯದಲ್ಲಿಯೂ ಮನಸ್ಸು ಹಾಕಬಾರದೆಂದಿದ್ದ ಅವನು ಶ್ರೇಯಾಂಸ ಅಕ್ಕಾಸಾನಿಯ ಮಗಳ ಮನರವನ್ನು ಸಿಂಗರಿಸಲಿಕ್ಕೆ ಹೋಗಿದ್ದನಲ್ಲ ಎಂದು ವಿಚಾರಿಸ ತೊಡಗಿದ್ದ.

"ಅಕ್ಕಾಸಾನಿಯ ಮನೆಯಲ್ಲಿ ನಮ್ಮ ಶ್ರೇಯಾಂಸ!"

ಎಂಬ ಉದ್ಗಾರವೊಂದು ಪದ್ಮಪ್ಪನ ಬಾಯಿಂದ ಅವನರಿಯ ದಂತೆಯೇ ಹೊರಬಿತ್ತು!

ಅವನ ಮಾತೇ ಅವನ ಕಿವಿ ಸೇರಿ ತುಂಬ ಹೆದರಿಸಿತು, ಹೃದಯ ವನ್ನು ನಡುಗಿಸಿತು. ಆ ಬೇಸಿಗೆಯ ಸಾಯಂಕಾಲದ ಬಿಸಿ ಗಾಳಿಗೂ ಕೂಡ ಅವನ ಮೈ ತುಂಬ ಮುಳ್ಳುಗಳೆದ್ದುವು. ಒಂದು ಕ್ಷಣ ಗಡಗಡ ನಡುಗಿದ. ಮರುಕ್ಷಣದಲ್ಲಿ,

'ಅವರವರ ಕರ್ಮ ಇದ್ದಂತೆ ಆಗುವುದು.... ಶ್ರೇಯಾಂಸನ ಅಶುಭ ಕರ್ಮವೇ ಉದಯವಾಗಿದ್ದರೆ ನಾನೇನು ಮಾಡ ಬಲ್ಲೆ....' ಎಂದು ಸಮಾಧಾನವನ್ನು ತಂದುಕೊಳ್ಳಲಿಕ್ಕೆ ಯತ್ನಿಸಿದ, ಪದ್ಮಪ್ಪ. ಅದು ಎಷ್ಟರ ಮಟ್ಟಿಗೆ ಸಿದ್ಧಿಸಿತೆಂಬುದು ಅವನಿಗೇ

ಗೊತ್ತು !

ನಿರಭ್ರವಾದ ನೀಲಾಕಾಶದಲ್ಲಿ ಅಲ್ಲೊಂದಿಲ್ಲೊಂದು ನಕ್ಷತ್ರ ಗಳು ಇದೀಗ ಮೂಡಿ, ಆಕಾಶಕ್ಕೇನೆ ಛಿದ್ರಗಳನ್ನು ಕೊರೆದಂತೆ ಕಾಣಿ ಸುತ್ತಿದ್ದುವು. ಅವು ಪ್ರತಿಕ್ಷಣಕ್ಕೂ ಹೆಚ್ಚು ಹೆಚ್ಚಾಗುತ್ತಾ ನಡೆದಿ ದ್ದುವು. ಅವುಗಳನ್ನು ನಿರೀಕ್ಷಿಸುತ್ತ ಪದ್ಮಪ್ಪ ಬಸದಿಯಿಂದ ಮನೆಯ ಕಡೆಗೆ ಸಾಗಿದ್ದ—ಬಸದಿಯಿಂದ ಮನೆಯ ಕಡೆಗೆ ?

೮

ಆತ್ಮಾರಾಮ ಮಾಸ್ತರರಿಗೆ ಶ್ರೇಯಾಂಸ ಇನ್ನೂ ಹೆಚ್ಚಾಗಿ ಓದ ಬೇಕೆಂದು ಆಸೆ. ಅದಕ್ಕೆ ತನ್ನ ಕೈಯಿಂದಾದಷ್ಟು ನೆರವಾಗಬೇಕು. ಶ್ರೇಯಾಂಸನಿಗೆ ಹೇಗೂ ಮನೆಯಲ್ಲಿ ತುಸು ಅನುಕೂಲತೆಯಿದೆ. ಅವರು ಸಿರಿವಂತರಲ್ಲದಿದ್ದರೂ ದುಡಿದರೆ ಹೊಟ್ಟೆ ತುಂಬ ಉಣ್ಣಲಿಕ್ಕೇನೂ ಕೊರತೆ ಬೀಳುವಂತಿರಲಿಲ್ಲ. ಮನೆಯಲ್ಲಿ ಸೋದರತ್ತೆ ಸುಂದರವ್ವ ಇದ್ದಾಳೆ. ನೆರೆಯ ನಗರದಲ್ಲಿ ಶ್ರೇಯಾಂಸ ಇಂಗ್ಲೀಷ ಓದಲಿಕ್ಕೆ ಹೋದರೆ ಅಡಿಗೆ ಮಾಡಲಿಕ್ಕೆ ಹೋಗುವಳು. ಅದರಿಂದ ಸಹಜವಾಗಿ ಮ್ಯಾಟ್ರಿಕ್ಕಿನವರೆಗಾದರೂ ಶ್ರೇಯಾಂಸ ಕಲಿಯಬಹುದು ಎಂದು ಆತ್ಮಾರಾಮರು ತಮ್ಮಲ್ಲಿಯೇ ತಾವು ವಿಚಾರಿಸುತ್ತಿದ್ದರು. ಒಂದು ದಿನ ಶ್ರೇಯಾಂಸನ ಮುಂದೆ ತಮ್ಮ ವಿಚಾರವನ್ನು ಸೂಚಿಸಿದರು.

"ಅದು ಆಗುವಂತಿಲ್ಲ ಗುರುಗಳೆ, ಹೆಚ್ಚಿನ ಶಿಕ್ಷಣ ನನ್ನ ದೈವದಲ್ಲಿ ಬರೆದಂತೆ ತೋರುವದಿಲ್ಲ!"

ಎಂದು ಶ್ರೇಯಾಂಸ ನಿರಾಶೆಯನ್ನೇ ಪ್ರದರ್ಶಿಸಿದ.

"ಇದರ ಬಗ್ಗೆ ಮನೆಯಲ್ಲಿ ಏನಾದರೂ ಮಾತು ನಡೆಯಿತೆ?"

"ಇಲ್ಲ; ಆದರೆ ತಂದೆಯವರು ಹೊಲದ ಕೆಲಸಕ್ಕೆ ಒತ್ತಾಯಿಸುತ್ತಿದ್ದಾರೆ? ಈಸಲದ ಮುಂಗಾರು ಮಳೆ ಆರಂಭವಾಗುವುದರಲ್ಲಿ ಹೊಲದಲ್ಲಿ ಇರುವಷ್ಟು ಸ್ವಲ್ಪ ಕರಿಕೆಯನ್ನು ತೆಗೆದು ಹಾಕಬೇಕಂತೆ ಅದಕ್ಕೆ ದಿನಾಲು ನಟ್ಟು ಕಡಿಯಲಿಕ್ಕೆ ಅವರ ಕೂಡ ಹೋಗಬೇಕಾಗಿದೆ...."

"ಅದಕ್ಕೇ ಮುಂಜಾನೆ ಇತ್ತ ಕಡೆಗೆ ಬರುವದಿಲ್ಲವೆ?"

ಶ್ರೇಯಾಂಸನ ಮಾತನ್ನು ನಡುವೆಯೇ ತಡೆದು ಗುರುಗಳು ಕೇಳಿದರು.

ಶ್ರೇಯಾಂಸ ಸುಮ್ಮನಾದ. ಗುರುಗಳ ಕಡೆಗೊಮ್ಮೆ ನೋಡಿದ. ನಾಲ್ಕು ಕಣ್ಣುಗಳೂ ಒಂದಾದುವು. ಶ್ರೇಯಾಂಸನ ಅಸಹಾಯತೆಯನ್ನು ಕಂಡು ಗುರುಗಳು ನೊಂದರು! ಆದರೂ ಹೇಳಿದರು:

"ಪದ್ಮಪ್ಪನಿಗೆ ನಾನು ಕರೆಯಿಸಿ ಹೇಳುವೆ ನಿಲ್ಲು?"

ಶ್ರೇಯಾಂಸ ತಲೆ ತಗ್ಗಿಸಿ, ಕಂಬಕ್ಕೆ ಒರಗಿ ನಿಂತಿದ್ದ, ಒಂಟಿಗಾಲಿನ ಮೇಲೆ. ಕಣ್ಣುಗಳು ನೀರಿನಿಂದ ತುಂಬಿ ಬಂದಿದ್ದುವು. ತಮ್ಮ ಪ್ರೀತಿಯ ಶಿಷ್ಯನ ಸ್ಥಿತಿಯನ್ನು ಕಂಡು ಆತ್ಮಾರಾಮರು ಅವನ ಹತ್ತಿರ ಹೋಗಿ, ಅಕ್ಕರತೆಯಿಂದ ಸ್ಪೈದಸವಿದರು. ಸ್ಮೈಮೇಲೆ ಕೈಯಾಡಿಸಿದರು. ಸಹಜ ಅವನ ಕೈಯನ್ನು ಹಿಡಿದರು. ಶ್ರೇಯಾಂಸ ಗದಗದ ನಡುಗಿದ.

"ಏನಾಗಿದೆ ಕೈಗೆ?"

ಆತುರದಿಂದ ಅವನ ಅಂಗೈಯನ್ನು ತಕ್ಕೊಂಡು ನೋಡಿದರು. ಕೈತುಂಬ ಗುಳ್ಳೆಗಳೆದ್ದಿದ್ದುವು?

"ಇದೇನು ಶ್ರೇಯಾಂಸ?"

ಎಂದು ಅವರ ನೊಂದ ಹೃದಯದಿಂದ ಉದ್ಗಾರವೊಂದು ಹೊರಟಿತು. ಶ್ರೇಯಾಂಸ ಏನೂ ಹೇಳಲಿಲ್ಲ. ಅವನ ಗಂಟಲು ಶಿರಗಳೂ ಉಬ್ಬಿದ್ದುವು!

ಗುದ್ದಲಿಯ ಕಾವು ಹಿಡಿದು ಕೈಗಳು ಹೀಗಾಗಿವೆಯೆಂದು ತಿಳಿದುಕೊಳ್ಳಲಿಕ್ಕೆ ಆತ್ಮಾರಾಮರಿಗೆ ಬಹಳ ಹೊತ್ತು ಹಿಡಿಯಲಿಲ್ಲ. ಲೆಕ್ಕಣಿಕೆಯನ್ನು ಹಿಡಿಯುವ ಕೈಯು ಗುದ್ದಲಿಯನ್ನು ಹಿಡಿಯಬೇಕಾಯತೆ? ಎಂದು ತಮ್ಮಲ್ಲಿ ತಾವು ಅಂದುಕೊಂಡರು. ಶ್ರೇಯಾಂಸನ ಭವಿಷ್ಯದ ಬಗ್ಗೆ ತುಂಬ ಅಧೀರರಾದರು. ಆ ಕ್ಷಣದಲ್ಲಿ ಅವರ ಕಣ್ಣಿಲ್ಲಿಯೂ ನೀರಾಡಿತು.

ಮುಂದೆ ಒಂದೆರಡು ದಿನಗಳಲ್ಲಿಯೇ ಬಾಳಪ್ಪನನ್ನು ಕಂಡು ಶ್ರೇಯಾಂಸನ ಮುಂದಿನ ಶಿಕ್ಷಣದ ವಿಷಯಕ್ಕೆ ಮಾತನಾಡಿದರು, ಆತ್ಮಾರಾಮರು. ಬಾಳಪ್ಪ ಮುಂದೆ ಮಗನನ್ನು ಕಲಿಸಲು ಒಪ್ಪಲಿಲ್ಲ. ಒಬ್ಬನೇ ಹುಡುಗ, ವ್ಯವಹಾರದ ಪೂರ್ತಿ ಕಲಿತಿದ್ದಾನೆ, ಒಂದೆರಡು ಕೂರಿಗೆ ಹೊಲವಿದೆ, ದುಡಿದುಕೊಂಡು ತಿಂದು ಕಣ್ಣೆದುರಿಗೆ ಇರಲಿ, ಎಂಬುದೇ ಬಾಳಪ್ಪನ ವಿಚಾರವಿದ್ದಿತು. ಅದನ್ನು ಬದಲಿಸಲೆಂದು ಶ್ರೇಯಾಂಸನ ಹಂಬಲ, ಶಿಕ್ಷಣದ ಅವಶ್ಯಕತೆ, ಸುತ್ತಲಿನ ಜಗತ್ತಿನ ಪರಿಸ್ಥಿತಿಗಳನ್ನು ಕುರಿತು ಒಂದು ತಾಸು ಆತ್ಮಾರಾಮ ಮಾಸ್ತರರು ಬಾಳಪ್ಪನ ಮುಂದೆ ಉಪನ್ಯಾಸವಿತ್ತರು. ಅದರ ಫಲವಾಗಿ ಬಾಳಪ್ಪ ಇಷ್ಟು ಮಾತ್ರ ಒಪ್ಪಿದ.

"ಸಂಜೆಗೆ ನಿಮ್ಮ ಕಡೆಗೆ ಕಳಸಿಕೊಡತೇನಿ....ಸ್ವಲ್ಪ ಮರಾಠಿ ಕಲಿಸಿರಿ ಅವನಿಗೆ....ಮನೆಗೆ ಸಾಂಗಲಿ ಮಿರಜಗಳಿಂದ ಕಾಗದ ಬಂದರೆ ನಾವು ಓದಿಸಲಿಕ್ಕೆ ಇನ್ನೊಬ್ಬರ ಮನೆಗೆ ಹೋಗಬೇಕಾಗತದ....ಮನೆ ಯೊಳಗ ಸಾಲೆ ಕಲಿತ ಮಗ ಇದ್ದೂ ಒಂದು ಕಾರ್ಡು ಓದಲಿಕ್ಕೆ ಮತ್ತೊಬ್ಬರ ಹತ್ತರ ಬಾಯಿ ತೆರೆಯಬೇಕಂದರೆ....?"

ಇಷ್ಟು ಹೊತ್ತು ಬಾಳಪ್ಪನ ಎದುರಿಗೆ ತಾವು ಇಷ್ಟೆಲ್ಲ ಮಾತಾ ಡಿದ್ದೇ ತಪ್ಪೆಂದು ಆತ್ಮಾರಾಮರು ಭಾವಿಸಿದರು. ದಿನದ ಬಾಳಿನ ಆಚೆಗೆ ಇವರ ದೃಷ್ಟಿಯೇ ಹರಿಯುದಲ್ಲ ಎಂದು ಕೊರಗಿದರು. ಇನ್ನು ಹೆಚ್ಚಿಗೆ ಮಾತಾಡಿ ಫಲವಿಲ್ಲೆಂದು ತಿಳಿದು,

"ಅಷ್ಟೇ ಆಗಲಿ, ಸವಡು ಇದ್ದಾಗ ಕಳಿಸಿರಿ....?"

ಎಂದು ಮೇಲುಪಚಾರಕ್ಕೆ ಅಂದರು. ಅವರಿಗೆ ಪದ್ಮಪ್ಪನ ಕೂಡ ಮಾತನಾಡಿ ಮುಂದಿನ ವಿಚಾರ ನಿಶ್ಚಯಿಸುವ ಹವಣಿಕೆ ಇದ್ದಿತು. ಪದ್ಮಪ್ಪನ ಮಾತು ಮನೆಯಲ್ಲಿ ನಡೆಯುವದೆಂದೂ ಅವರಿಗೆ ಗೊತ್ತಿದ್ದಿತು. ಆದರೆ ಸಹಜ ಬಾಳಪ್ಪ ಸಿಕ್ಕಿದ್ದನೆಂದು ಹೇಳಿ ನೋಡಿ ದ್ದರವರು.

"ಶ್ರೇಯಾಂಸ ನಮ್ಮ ಕೆಲಸ ಏನು ಮಾಡತಾನರಿ........? ಮುಂಜಾನೆ ಒಂದೆರಡು ತಾಸು ಹೊಲಕ್ಕೆ ಬಂದರೆ....ನಾಲ್ಕು ಮೂರು ನಟ್ಟು ಕಡಿಯುವದಿಲ್ಲ....'ಉಸ್ಸ ಉಸ್ !' ಅಂತ ನಿಲ್ಲತಾನು....ಏನಾ ವರೂ ಸಾಲೆ ಕಲಿಯುವ ಹುಡುಗರಿಗೆ ನಡುವಿನೊಳಗ ಶಕ್ತಿನೇ ಇರು ವುದಿಲ್ಲ ನೋಡರಿ ಮಾಸ್ತರ! ಲಗೂನೆ ನಮಗೆ ಬಂತು ಬುದ್ಧಿ ನೆಟ್ಟ ಗಾತು! ಇಲ್ಲಾವರೆ ಹುಡುಗ ಕೆಟ್ಟs ಹೋಗತಿದ್ದ....ಈಗs ಹಾದಿಗೆ ಹಚ್ಚಿದರೆ....ಅವನು ಒಂದು ಆಳಿನ ಕೆಲಸ ಮಾಡಲಿಕ್ಕೆ ಇನ್ನೂ ಮೂರು ವರ್ಷ ಹೋಗ ಬೇಕರಿ!"

ಬಾಳಪ್ಪನ ಮಾತಿಗೆ ಏನು ಹೇಳಬೇಕೆಂಬುದೂ ಆತ್ಮಾರಾಮರಿಗೆ ಒಂದು ಕ್ಷಣ ಹೊಳೆಯಲಿಲ್ಲ. ಮರುಕ್ಷಣದಲ್ಲಿ,

"ಒಕ್ಕಲತನದ ಹುಡುಗ ಅಲ್ಲ ಅವ!"

ಎಂದಿಷ್ಟೇ ಅವರ ನೊಂದ ಹೃದಯದಿಂದ ಮಾತು ಹೊರಟಿತು. ಆಮೇಲೆ ಅವರು ಪದ್ಮಪ್ಪನ ಕೂಡ ಮಾತನಾಡಿದರೂ ಹೆಚ್ಚಿಗೆ ಉಪಯೋಗವಾಗಲಿಲ್ಲ. ಆದರೂ ಹೊಲದ ಕೆಲಸದಲ್ಲಿ ಶ್ರೇಯಾಂಸನಿಗೆ ಸ್ವಲ್ಪ ಅವಕಾಶ ಸಿಗಹತ್ತಿತು. ಅದರ ಜೊತೆಗೆ ಪದ್ಮಪ್ಪನು ಇಂಗ್ಲೀಷ ಒಂದನ್ನು ಬಿಟ್ಟು ಹೆಚ್ಚಿನ ಅಭ್ಯಾಸ ಮಾಡಿಸಲಿಕ್ಕೆ ಒಪ್ಪಿಗೆಯನ್ನು ಕೊಟ್ಟಿದ್ದ. ಅದಕ್ಕಾಗಿ ಅವಕಾಶವನ್ನು ಕಲ್ಪಿಸಿ ಕೊಡುವದಾಗಿ ಹೇಳಿದ್ದ. ಅಷ್ಟರಿಂದಲೇ ಆತ್ಮಾರಾಮ ಮಾಸ್ತರರು ಸಧ್ಯ ಸಮಾಧಾನ ಹೊಂದಬೇಕಾಯಿತು.

ಮುಂದೆ ತುಸು ದಿನಗಳಲ್ಲಿಯೇ ಶ್ರೇಯಾಂಸ ಆಶ್ರಮದ ಶಾಸ್ತ್ರಿಗಳ ಹತ್ತರ ಸಂಸ್ಕೃತ ಓದುವ ವ್ಯವಸ್ಥೆಯಾಯಿತು. ಅಲ್ಲಿ ಭಾಂಡಾರಕರರ ಸಂಸ್ಕೃತ - ಕನ್ನಡ ಮೊದಲನೆಯ ಪುಸ್ತಕ ಹಿತೋಪ ದೇಶಗಳ ಅಭ್ಯಾಸ ಆರಂಭವಾಯಿತು. ಅದರ ಜೊತೆಗೆ ಸ್ವಾಮಿ ಸಮಂತ ಭದ್ರರ 'ರತ್ನಕರಂಡ ಶ್ರಾವಕಾಚಾರ', ನೇಮಿಚಂದ್ರಾಚಾರ್ಯರ 'ದ್ರವ್ಯಸಂಗ್ರಹ'ಗಳ ಪಠನಕ್ಕೂ ಮೊದಲಾಯಿತು. ಇದನ್ನು ಕೇಳಿ

ಪದ್ಮಪ್ಪನಿಗೆ ಹಿಡಿಸಲಾರದಷ್ಟು ಆನಂದ. ತಮ್ಮ ಶ್ರೇಯಾಂಸ ಧರ್ಮದ ಅಭ್ಯಾಸ ಮಾಡ ಹತ್ತಿದನಲ್ಲ ಎಂಬ ಸಂತಸ.

ಬಾಳಪ್ಪ ನಾಲ್ಕಾರು ದಿನ ಮನೆಯಲ್ಲಿ ಪದ್ಮಪ್ಪನಿಲ್ಲದಾಗ ಒದರಾಡಿದ. ಆದರೂ ಮಗ ಮುರಾರಿ ಅಕ್ಷರ ಕಲಿಯುವದನ್ನು ಕಂಡು ತುಸು ತಾಳಿಕೊಳ್ಳುವಂತಾಯಿತು. ಅದರಲ್ಲೂ ಶ್ರೇಯಾಂಸ ದಿನಾಲು ಸ್ವಲ್ಪಿಲ್ಲ ಸ್ವಲ್ಪ ಹೊಲದ ಕಡೆಗೆ ಬರುತ್ತಿದ್ದುದೂ ಅವನಿಗೆ ಸಮಾಧಾನ ಕೊಟ್ಟಿತ್ತು. ನಾಲ್ಕಾರು ತಿಂಗಳು ಮುರಾರಿ ಬರುವ ವರೆಗೆ ಆಶ್ರಮಕ್ಕೆ ಹೋಗಲಿ ಎಂದುಕೊಂಡು ಸುಮ್ಮನಾದ.

ಸರಸವ್ವನಿಗೆ ತುಸು ಅಸಮಾಧಾನವೇ ಆಗಿತ್ತು, ಮಗ ಮತ್ತು ಧರ್ಮ ಕರ್ಮ ಅಂತ ಇದನ್ನೇನು ಕಲಿಯ ತೊಡಗಿದ. ಇದನ್ನೆಲ್ಲ ಬಿಟ್ಟು ಸುಮ್ಮನೆ ಕೈಯಿಂದಾದಷ್ಟು ಹೊಲದ ಕೆಲಸ ಮಾಡಿಕೊಂಡಿದ್ದರೆ ಆಗಿತ್ತು, ಎಂದು ಮನದಲ್ಲಿಯೇ ಅಂದುಕೊಂಡಿದ್ದಳು. ಸಮಯ ನೋಡಿ ಗಂಡನ ಕಿವಿಗೂ ತನ್ನ ಅಭಿಪ್ರಾಯವನ್ನು ಹಾಕಿದಳು.

"ಶ್ರೇಯಾಂಸ ಈಗ ಕಲಿತದ್ದೇ ಸಾಕಾಗಿರಲಿಲ್ಲವೆ ?"

"ನಾಲ್ಕುದಿನ ಮುರಾರಿ ಕಲಿಯಲಿ ಅಂತ ಸುಮ್ಮನಿದ್ದೇನಿ.. ."

"ಅಭ್ಯಾಸ ಸಣ್ಣ ಮಾಡಿ ಇಡತದ ಹುಡುಗರನ್ನ.... ನೋಡುವದಿಲ್ಲ? ಓದಿಗೆಯವರ ಮಕ್ಕಳು ಜೋಳದ, ಹೇರಿನ ಚೀಲ ಸಹಜ ಬಂಡಿಯಿಂದ ಇಳಿಸತಾರ...."

"ಅದು ನಮ್ಮ ಹುಡುಗನ ಕೈಯಿಂದ ಆಗುವದಿಲ್ಲ !"

"ತಿಂದುಂಡು ಹೊಲದೊಳಗೆ ದುಡಿದರೆ ಹುಡುಗ ಕಣ್ಣು ಕಿತ್ತ ಬಹುದು. ಹೀಗೇ ಅದು ಕಲಿ, ಇದು ಕಲಿ ಅಂತ ಮತ್ತು ನಾಲ್ಕು ವರ್ಷ ಹೋದರೆ ಅವನು ಅಡವಿಯ ಕೆಲಸಕ್ಕೆ ಬರುವದಿಲ್ಲ."

"ಹೀಗೆಲ್ಲಿ ಬಿಡತೇನಿ ನಾ...."

ಪತಿಯ ಆಶ್ವಾಸನದಿಂದ ಸರಸವ್ವ ಸುಮ್ಮನಾದಳು. ಅವಳಿಗೂ ಮಗನು ಸಟ್ಟು ಕಡೆದು ಕೈಗೆ ಗುಳುಳೆ ಎಬ್ಬಿಸಿಕೊಂಡ ಸಂಗತಿ

ಗೊತ್ತಿತ್ತು. ಇಂಥ ಕಠಿಣ ಕೆಲಸ ಮಗನಿಂದ ಆಗದೆಂಬುದನ್ನು ಅವಳು ಬಲ್ಲಳು. ಹೊಲದ ಕಡೆಗೆ ಹೋಗಿ ಹಗರು ಕೆಲಸ ಬೊಗಸೆಗಳನ್ನು ಅವನು ಮಾಡುತ್ತ ಇದ್ದರೂ ಅವಳಿಗೆ ಸಾಕಾಗಿತ್ತು. ಈ ಧರ್ಮದ ಹುಚ್ಚು ಮಾತ್ರ ಬೇಡವಾಗಿತ್ತು. ಅದರಿಂದ ಹಲವು ಸಲ ಸುಂದರಪ್ಪನ ಮುಂದೆಯೂ ಅವಳು ತನ್ನ ಇಚ್ಛೆಯನ್ನು ಪ್ರದರ್ಶಿಸಿದ್ದಳು.

"ಧರ್ಮದ ಅಭ್ಯಾಸ ಮಾಡಿ ಯಾರು ಮುಂದಾಗಿದ್ದಾರೆ ?"

"ಮುಂದ ಆಗೋದು ಯಾರಿಗೆ ಬೇಕಾಗೇದ ಸರಸಾ ? ಸ್ವಾಮಿಗಳು ಬಂದರೆ ಬಲಗೊಂಡು ಆಹಾರಕ್ಕೆ ಕರೆದುಕೊಂಡು ಬರುವದು, ಅನಂತ ನೋಪಿ, ದಶಲಕ್ಷಣ ನೋಪಿಗಳನ್ನು ಮಾಡಲಿಕ್ಕೆ ಬಂದರೆ ಸಾಕಲ್ಲ. ನಾವೊಂದು ಕಲಿಯದೆ ಹೊಲದೊಳಗೇ ದುಡಿದು ಸಣ್ಣಾದೆವು. ಈಗೇನೋ ಸ್ವಲ್ಪ ಧರ್ಮ ಬಸದಿ ಅಂತ ಮಾಡತಿದ್ದೇವೆ....ಇದರಿಂದಲೇ ಮನೆ ಮುಂದೆ ಬರೋದು....ಮನುಷ್ಯ ಮುಂದೆ ಬರೋದು."

"ಆಗೆಲ್ಲ ನೀವು ಅಡವಿಯೊಳಗೆ ಮಣ್ಣು ಕಚ್ಚಿ ದುಡಿದರೆಂದೇ ಈಗ ಕುಳಿತು ತಿನ್ನುವಿರಿ ! ಇಲ್ಲದಿದ್ದರೆ ಎಲ್ಲಿಂದ ಬಂದೀತು ?"

ನಾದಿನಿಯ ಹೊಗಳಿಕೆಯಿಂದ ಸುಂದರಪ್ಪನ ಮುಖ ಅರಳಿತು... ಉಲ್ಲಸಿತ ಸ್ವರದಲ್ಲಿ ನುಡಿದಳು :

"ಶ್ರೇಯಾಂಸನೂ ಮುಂದ ದುಡಿದಾನಲ್ಲ....ಇನ್ನೂ ತುಟಿಯ ಮೇಲಿನ ಹಾಲು ಆರದ ಹುಡುಗ...."

"ಈಗೇನು ಸಣ್ಣವ ಏನು ಶ್ರೇಯಾಂಸ....? ಹದಿನೆಂಟು ವರ್ಷ ಆದುವು... "

"ದಿವಸ ಆದರೆ ಏನಾತು ?"

ಸುಂದರಪ್ಪ ಶ್ರೇಯಾಂಸನನ್ನು ಮೆಚ್ಚಿ ಮಾತನಾಡಲಿಕ್ಕೆ ಹಲವು ಕಾರಣಗಳಿದ್ದುವು ; ಅವನು ದಿನಾಲು ಅವಳಿಗೆ 'ಜಿನ ಸಹಸ್ರನಾಮ'

ವನ್ನು ಬಾಯಿಪಾಠ ಮಾಡಲು ಹೇಳಿಕೊಡುತ್ತಿದ್ದ. ಅಲ್ಲದೆ ಊರ ಗೌಡತಿಯೂ ಬಸದಿಯಲ್ಲಿ ದೊರಕಿದಾಗಲೆಲ್ಲ ಶ್ರೇಯಾಂಸನ ಸರಸ ಸಜ್ಜನಿಕೆಗಳ ಬಗ್ಗೆ ಸುಂದರಮ್ಮನ ಮುಂದೆ ಹೊಗಳದಿರುತ್ತಿರಲಿಲ್ಲ.

ಗೌಡರ ಮಗಳ ಮದುವೆ ಆದಾಗಿನಿಂದಲೂ ಶ್ರೇಯಾಂಸ ಗೌಡರ ಮನೆಗೆ ಹೋಗಿ ಬರುವ ರೂಢಿಯಾಗಿತ್ತು. ತಾವು ಕೊಂಕು ನಡತೆಯವರಾದರೂ ಗೌಡರು ಶ್ರೇಯಾಂಸನ ಸರಳತೆಯನ್ನು ಮೆಚ್ಚಿದ್ದರು. ಕಲಿತ ಹುಡುಗ, ಮನೆಯಲ್ಲಿ ಮಕ್ಕಳಿಗೆ ಪಾಠ ಹೇಳಲಿಕ್ಕೊ ಏನಾದರೂ ಸ್ವಲ್ಪ ಬರೆಯಲಿಕ್ಕೊ ಉಪಯೋಗ ಬೀಳುವನೆಂದು ಅವರು ಒಕ್ಕಲಿಗರ ಹುಡುಗನಾದರೂ ಶ್ರೇಯಾಂಸನಿಗೆ ಸಲಿಗೆ ಕೊಟ್ಟಿದ್ದರು. ಅದರಿಂದ ಗೌಡರ ಮನೆಯವರಿಗೆಲ್ಲ ಶ್ರೇಯಾಂಸ ಅಚ್ಚುಮೆಚ್ಚಿನವನಾಗಿದ್ದ. ಇದರಿಂದ ಶ್ರೇಯಾಂಸನಿಗೂ ಒಂದಿಷ್ಟು ಲಾಭವಾಗದೆ ಇರಲಿಲ್ಲ.

ಗೌಡರ ಮನೆಯಲ್ಲಿ ಅನೇಕ ಧರ್ಮ ಗ್ರಂಥಗಳಿದ್ದುವು. ಅವೆಲ್ಲ ಬರಬರುತ್ತಾ ಶ್ರೇಯಾಂಸನ ಸ್ವಾಧೀನವಾದುವು. ಆಶ್ರಮದೊಳಗಿನ 'ಸರಸ್ವತಿ ಮಂದಿರ'ದ ಗ್ರಂಥಗಳ ಜೊತೆಗೆ ಈ ಪುಸ್ತಕಗಳ ರಾಶಿಯೂ ಅವನ ಅಭ್ಯಾಸಕ್ಕೆ ಅನ್ನವಾಯಿತು. ಈಗ ಅವನ ಅಧ್ಯಯನವು ವಿಸ್ತಾರಗೊಂಡಿತು. ದಿನಾಲು ಆಶ್ರಮಕ್ಕೆ ಶಾಸ್ತ್ರಿಗಳ ಹತ್ತಿರ ಸಂಸ್ಕೃತ ಪಾಠವನ್ನಂತೂ ಹೇಳಿಸಿಕೊಳ್ಳಲಿಕ್ಕೆ ಹೋಗುತ್ತಿದ್ದ. ಆತ್ಮಾರಾಮ ಮಾಸ್ತರರು ಗೊತ್ತುಮಾಡಿಕೊಟ್ಟ ಒಬ್ಬ ಶಿಕ್ಷಕರ ಮನೆಯಲ್ಲಿ ಒಳಗಿಂದೊಳಗೇ ಇಂಗ್ಲೀಷ ಭಾಷಾಂತರ ವ್ಯಾಕರಣಗಳ ಅಭ್ಯಾಸವೂ ನಡೆದಿದ್ದಿತು. ಮೇಲೆ ವಿವಿಧ ಗ್ರಂಥಗಳ ವಾಚನ. ಹೀಗೆ ದಿನಾಲು ನಾಲ್ಕಾರು ತಾಸುಗಳನ್ನಾದರೂ ಅವನು ಅಭ್ಯಾಸದಲ್ಲಿ ಕಳೆಯಬೇಕಾಗುತ್ತಿದ್ದಿತು. ಅದರಲ್ಲಿ ಹೊಲಕ್ಕೆ ಬರಲು ತಂದೆಯ ಒತ್ತಾಯ ಬೇರೆ. ಈ ಒತ್ತಾಯವು ಗೌಡರ ಕೆಲಸಗಳಿಂದಾಗಿ ಸ್ವಲ್ಪ ಕಡಿಮೆಯಾಗುತ್ತಿದ್ದಿತು.

ಶ್ರೇಯಾಂಸನಿಗೆ ಹೊಲಕ್ಕೆ ಹೋಗುವ ಮನಸ್ಸು ಆಗುತ್ತಿರಲಿಲ್ಲ. ಒಮ್ಮೊಮ್ಮೆ ತಂದೆಯ ಆಗ್ರಹಕ್ಕಾಗಿ ಹೊಲಕ್ಕೆ ಹೋದರೂ ಅವನ ಲಕ್ಷ್ಯವೆಲ್ಲ ಪುಸ್ತಕಗಳ ಕಡೆಗೇ ಇರುವುದು. ಇಷ್ಟೇ ಅಲ್ಲ, ಹಲವು ಸಲ ಅವನು ತನ್ನ ಪುಸ್ತಕಗಳನ್ನು ತಕ್ಕೊಂಡೂ ಹೊಲಕ್ಕೆ ಹೋಗುವ. ಇರುಳು ಜಾಗರಣೆ ಮಾಡಿ ಕಣದೊಳಗಿನ ತೆನೆಗಳನ್ನು ಕಾಯಬೇಕಾದಾಗ ಹೊತ್ತು ಕಳೆಯಲಿಕ್ಕೆ ಪುಸ್ತಕಗಳೇ ಅವನಿಗೆ ಸಾಧನ. ಲಾಟಿನು ಇಲ್ಲದಾಗ ಕೆಲವು ಸಲ ಅವನು ಬೆಳದಿಂಗಳಲ್ಲಿಯೇ ಓದುತ್ತ ಕುಳಿತಿರುವ. ಮಗನ ಈ ಓದುವ ಹುಚ್ಚನ್ನು ಕಂಡು ಬಾಳಪ್ಪ ಅನೇಕ ಸಲ ಅನ್ನುವ :

"ಸಾಲೆಯಲ್ಲಿ ಕಲಿತವರೆಲ್ಲ ಹೀಗೇ ಓದತಿರತಾರೇನು ?"

"ಇಲ್ಲ !"

"ಹಾಗಾದರೆ ನೀನೇಕೆ ಓದುವಿ ?"

"ಏನು ಹೇಳಲಿ ?"

"ಓದುವುದರಿಂದೇನು ಹೊಟ್ಟೆ ತುಂಬುವುದೆ ? ನಿನ್ನ ಜೋಡಿಯವರು ಎರಡೆರಡು ಎತ್ತ ಕಟ್ಟಿ ಒಕ್ಕಲತನ ಮಾಡಹತ್ತಿದರು.... ಯಾರು ಅಂಗಡಿ ಹಾಕಿದರು....ಗಳಿಸಲಿಕ್ಕೆ ಹತ್ತಿದರು. ನೀನು ಇನ್ನೂ ಪುಸ್ತಕದೊಳಗೇ ಮೋರೆ ಹಾಕಿಕೊಂಡು ಕೂಡುವಿ. ದೊಡ್ಡವನಾದೆ. ನಿನಗೇನು ಹೇಳುವುದು ನಾವು ?"

ಶ್ರೇಯಾಂಸ ಒಂದು ಕ್ಷಣ ಪುಸ್ತಕವನ್ನು ಮುಚ್ಚಿ ಆಕಾಶದ ಕಡೆಗೆ ನೋಡುತ್ತ ಸುಮ್ಮನೆ ಕೂಡುವ. ಅನೇಕ ಭಾವನಾತರಂಗಗಳು ಅವನ ಹೃದಯದಲ್ಲಿ ಏಳುವವು. 'ನಾನೇಕೆ ಓದುವೆ ?' ಎಂದು ತನ್ನನ್ನು ತಾನೇ ಕೇಳಿಕೊಳ್ಳುವ....ಅದಕ್ಕೂ ಉತ್ತರ ದೊರೆಯದು. ಆದರೆ ಓದುವ ಹಂಬಲ ಮಾತ್ರ ಹಿಂಗದು....'ಉಳಿದವರು ಏಕೆ ಓದುವದಿಲ್ಲ ?' ಎಂಬ ತಂದೆಯ ಪ್ರಶ್ನೆಗೂ ಉತ್ತರ ಹುಡುಕುವ. ಅದಕ್ಕೂ ಸಮಾಧಾನಕಾರಕ ಉತ್ತರ ಸಿಗದು. ಆದರೂ 'ಉಳಿದವರಂತೆ

ನಾನಲ್ಲ'....ಎಂಬ ಭಾವನೆಯೊಂದು ಹೇಗೋ ಅವನ ಮನಸ್ಸನ್ನು ವ್ಯಾಪಿಸಿ ಬಿಡುವುದು.

ಅನೇಕ ಸಲ ತನ್ನ ಪಾಠವನ್ನೆಲ್ಲ ಮುಗಿಸಿಕೊಂಡು ತಂದೆಯೊಡನೆ ಶ್ರೇಯಾಂಸ ಹೊಲಕ್ಕೆ ಹೊರಡಲು ಸಿದ್ಧನಾಗಿರುವ. ಅಷ್ಟರಲ್ಲಿ ಓಲೇಕಾರ ಬಂದು,

"ಗೌಡರು ಕರಿತಾರರೀ !"

ಎಂದು ಹೇಳುವ. ಕೇಳಿ ಬಾಳಪ್ಪನಿಗೆ ಮನದಲ್ಲಿಯೇ ಸಿಟ್ಟು. ಶ್ರೇಯಾಂಸನಿಗೆ ಆನಂದ. ಗೌಡರ ಆಜ್ಞೆ ! ಬಾಳಪ್ಪನಿಗೆ ಅನ್ನಲಿಕ್ಕೆ ಬಾರದು, ಆಡಲಿಕ್ಕೆ ಬಾರದು. ಹೊಲದಲ್ಲಿ ಎಂಥ ಕೆಲಸವನ್ನು ನಿಯಮಿಸಿದ್ದರೂ ಕಳಿಸಿಕೊಡುವ......ತಾನೊಬ್ಬನೇ ಹೊಲಕ್ಕೆ ಹೋಗುವ.

ಗೌಡರ ಮನೆಯಲ್ಲಿ ಒಂದು ಅರ್ಜಿಯನ್ನೋ ಮತ್ತೇನನ್ನೋ ಸ್ವಲ್ಪ ಬರೆಯುವದಿರುವುದು. ಅಷ್ಟನ್ನು ಮಾಡಿದರೆ ಸಂಜೆಯವರೆಗೆ ಶ್ರೇಯಾಂಸನಿಗೆ ಬೇರೆ ಕೆಲಸವೇ ಇರುತ್ತಿರಲಿಲ್ಲ. ಆದರೆ ಅವನು ತಿರುಗಿ ಹೊಲಕ್ಕಾಗಲಿ, ಮನೆಗಾಗಲಿ ಹೋಗುತ್ತಿರಲಿಲ್ಲ. ಗೌಡರ ಮನೆಯೊಳಗಿನ ಯಾವುದಾದರೂ ಪುಸ್ತಕವೊಂದನ್ನು ಕೈಗೆ ತೆಗೆದುಕೊಂಡು, ಅವರ ಅಟ್ಟವನ್ನು ಹತ್ತುವ. ಅಲ್ಲಿ ಕುಳಿತು ಓದುವುದರಲ್ಲಿ ಮೈ ಮರೆತು ಇಡೀ ದಿನವೆಲ್ಲ ಕಳೆಯುವ. ಸಂಜೆಯ ಹಗಲೂಟಕ್ಕೇನೇ ಮನೆಗೆ ಬರುವ. ಉಂಡು ಗುರುಗಳ ಮನೆಗೋ ಮತ್ತೆಲ್ಲಿಯೋ ಹೋಗಿಬಿಡುವ.

ಶ್ರೇಯಾಂಸನಿಗೆ ಶಾಸ್ತ್ರಿಗಳು ಹೇಳುವ ಸಂಸ್ಕೃತ ಕಾವ್ಯಗಳ ಅರ್ಥ ವಿವರಣೆ ಅಷ್ಟು ರುಚಿಸದು. ಅಲ್ಲದೆ ಅವರ ಪಾಠಗಳಲ್ಲಿಯ ಮಂದಗತಿಯೂ ಇವನಿಗೆ ಸಹಿಸದು. ಆದರಿಂದ ಇರುಳು ತನ್ನ ಆತ್ಮಾರಾಮ ಗುರುಗಳ ಹತ್ತರ ಕಾಲಿದಾಸನ ಶಾಕುಂತಲ, ಋತುಸಂಹಾರ ಮೊದಲಾದುವುಗಳನ್ನು ಓದುವ. ಗುರುಗಳೂ ತಮಗೆ ತಿಳಿದಷ್ಟು

ಅರ್ಥ ವಿವರಿಸುವರು. ಅವರು ಟ್ರೇನಿಂಗ ಕಾಲೇಜಿನಲ್ಲಿ ಕಲಿಯು ವಾಗ ಆದ ಶಾಕುಂತಲದ ಕೆಲವು ಭಾಗವನ್ನಂತೂ ಬಹು ಹೃದಯಂ ಗಮವಾಗಿ ಹೇಳುತ್ತಿದ್ದರು. ಇದು ಶ್ರೇಯಾಂಸನ ಮನಸ್ಸನ್ನು ಅರಳಿಸುವುದು. ಕವಿಗುರು ಕಾಲಿದಾಸನ ಕವಿತ್ವಕ್ಕೆ ಅವನ ಮನಸ್ಸು ಮುಗ್ಧವಾಗುವುದು, ಅವನ ಹಿರಿಮೆಗೆ ತಲೆ ಬಾಗುವನು, ಭಕ್ತಿಪರವಶ ನಾಗುವನು ಶ್ರೇಯಾಂಸ.

ಈ ಸಲದ ವರ್ಷಾಯೋಗದಲ್ಲಿ ಬಸ್ತಿಯಲ್ಲಿ ಪುರಾಣವನ್ನು ಓದಿ ಹೇಳುವ ಹೊಣೆಯು ಶ್ರೇಯಾಂಸನ ಮೇಲೆಯೇ ಇತ್ತು. ಹೇಗೋ ಮಾಡಿ ತಮ್ಮ ಹೊರೆಯನ್ನು ಇನ್ನಾರಿಗೋ ಹೊರಿಸಬೇಕಾಗಿತ್ತು ಗೌಡರಿಗೆ. ಅದಕ್ಕೆ ಯೋಗ್ಯ ವ್ಯಕ್ತಿ ಯಾರೂ ದೊರೆಯದ್ದರಿಂದ ಇಷ್ಟು ದಿನ ಸುಮ್ಮನಿದ್ದರು. ಈಗ ಶ್ರೇಯಾಂಸ ಅವರಿಗೆ ಯೋಗ್ಯ ಕಂಡ. ಅದರಿಂದ ಅವನ ಕೊರಳಿಗೆ ಈ ಕೆಲಸವನ್ನು ತೊಡಿಸಿದರು. ಶ್ರಾವಕರೇನೋ ಕೆಲವು ದಿನ ಈ ಚಿಕ್ಕ ಹುಡುಗನ ಎದುರಿಗೆ ಕುಳಿತು ಶಾಸ್ತ್ರ ಕೇಳಲಿಕ್ಕೆ ಸಂಕೋಚಪಟ್ಟರು. ಶಾಸ್ತ್ರವನ್ನು, ಮೊನ್ನೆ ನಮ್ಮ ಮುಂದೆ ಹುಟ್ಟಿದ ಕೂಸು, ಇದೇನು ಓದುವುದು—ಎಂದು ಅವರು ಮೊದ ಮೊದಲು ತಿಳಿದುಕೊಂಡಿದ್ದರು. ಆದರೂ ಗೌಡರ ಮನಸ್ಸು ಮುರಿ ಯದ್ದಕ್ಕಾಗಿ ಅವನನ್ನು ಪೀಠದ ಮೇಲೆ ಕೂಡಗೊಡುತ್ತಿದ್ದರು. ಗೌಡರೂ ಇದನ್ನರಿತು ತಿಂಗಳೊಪ್ಪತ್ತು ಅವನ ಮಗ್ಗುಲಲ್ಲಿ ಕುಳಿತು ಪುರಾಣದ ಅರ್ಥ ವಿವರಿಸುತ್ತಿದ್ದರು. ಇವನು ರತ್ನಾಕರ ವರ್ಣಿಯ 'ಭರತೇಶ ವೈಭವ'ವನ್ನು ಸರಾಗವಾಗಿ ಓದುವ. ಅದರ ಅರ್ಥ ಹೇಳುವ ಅಧಿಕಾರವೆಲ್ಲ ಗೌಡರ ಕಡೆಗೆ. ಅವರು ಹೇಳುವ ಅರ್ಥ ವನ್ನು ಕೇಳಿ ಹಲವು ಸಲ ಶ್ರೇಯಾಂಸನಿಗೆ ಕಿವಿ ಮುಚ್ಚಿಕೊಳ್ಳುವಂ ತಾಗುವುದು. ಕವಿಯ ಕೃತಿಗೆ ಅಪಕಾರವಾಗುವದಲ್ಲ ಎಂದು ಕೊರ ಗುವ. ನಡುನಡುವೆ ಬಾಯಿಹಾಕಿ ಏನನ್ನೋ ವಿವರಿಸಲಿಕ್ಕೆ ಹೋಗುವ. ಗೌಡರ ಅರ್ಥದ ಮುಂದೆ ಇವನ ಪ್ರಭಾವ ಬೀಳದು.

ಆದರೂ ಗೌಡರು ಒಂದೊಂದು ದಿನ ಪುರಾಣಕ್ಕೆ ಬಾರದಿದ್ದಾಗ ಸಂಪೂರ್ಣವಾಗಿ ಶ್ರೇಯಾಂಸನೇ ಅರ್ಥ ವಿವರಿಸಿ ಹೇಳುವ. ಆಗ ಶ್ರೋತೃಗಳಿಗೂ ಸಮಾಧಾನವಾಗುವುದು. ಒಂದು ಕ್ಷಣ ಪುರಾಣಿಕನ ವಯಸ್ಸನ್ನು ಮರೆತು ವಂದಿಸುವರು ಶ್ರಾವಕರು!

ಶ್ರೇಯಾಂಸನ ಪುರಾಣಕ್ಕೆ ಪದ್ಮಪ್ಪ ಸುಂದರಪ್ಪರಂತೂ ಸಿಕ್ಕ ಹೋಗುತ್ತಿದ್ದರು. ಬೆಳಗಿನಲ್ಲಿ ಎದ್ದರೆ ಬೇಗನೆ ಸೂರ್ಯಾಸ್ತವಾಗ ಬೇಕೆಂದು ಅವರು ಹಂಬಲಿಸುವರು. ತಮ್ಮ ಸೋದರಳಿಯನ ಪ್ರಗತಿಯನ್ನು ಕಂಡು ಅವರು ಹೆಮ್ಮೆ ಪಡುವರು. ಬಡವರ ಮನೆ ಯಲ್ಲಿ ಹುಟ್ಟಿದ ಹುಡುಗ ಹೀಗೆ ಶಾಸ್ತ್ರ ಓದುವದನ್ನು ಕೇಳಿ ಹಲವರು ಸಹಿಸದೆ ಹೋಗುವರು. ಒಳಗೊಳಗೇ ಶ್ರೇಯಾಂಸನ ವಾಣಿಗೆ ಮೆಚ್ಚಿದರೂ ಮೇಲೆ ಅನ್ನುವರು:

"ಮೊನ್ನಿನ ಹುಡುಗ! ಗೌಡರಂತೆ ಹೇಗೆ ಹೇಳ್ಲಿಕ್ಕೆ ಬಂದೀತು."

"ಮುಂದೆ ಜೆಲೋ ಆಗ್ತಾನು."

"ಇದೇ ಬುದ್ಧಿ ಉಳಿಯಬೇಕಲ್ಲ ಕಡೆಯ ತನಕ. ಕತ್ತೆಯ ಮರಿಯೂ ಸಣ್ಣದಿರುವಾಗ ಕುದುರೆಯ ಮರಿಯಂತೆಯೇ ಕಾಣು ವುದು...."

"ಇಷ್ಟು ಲಗೂನೆ ಸಂಸ್ಕೃತ ಹೇಗೆ ಬಂತೋ ಇವನಿಗೆ!"

ಭರತೇಶ ವೈಭವ ಸಂಸ್ಕೃತ ಗ್ರಂಥವೆಂದು ಭಾವಿಸಿದವನ ಮಾತಿದು! ಹೀಗೆ ಹಲವು ರೀತಿಯಿಂದ ಶ್ರೇಯಾಂಸನ ಗುಣವನ್ನು ಅಲ್ಲಗಳೆಯುತ್ತಿದ್ದ ಹಿರಿಯರು ಪುರಾಣ ಆರಂಭವಾಗುವ ವೇಳೆಯನ್ನು ಆತುರದಿಂದ ಕಾಯುವರು. ಅಂದರೂ ಅವರಲ್ಲಿ ಕೆಲವರು ಬಾಳಪ್ಪ ನನ್ನು ಕಂಡಾಗ....ಮೊದಲು,

"ನಿನ್ನ ಮಗ ಪುರಾಣ ಬಹಳ ಚೆಂದ ಹೇಳುವನಪ್ಪ!"

ಎಂದು ಮಾತಿಗೆ ಆರಂಭಿಸುವರು. ಬಾಳಪ್ಪ ಸುಮ್ಮನಿರುವು ದನ್ನು ಕಂಡು,

"ಇದೇನು ಹೊಟ್ಟೆಗೆ ಹಾಕುವ ಉದ್ಯೋಗವಲ್ಲ....ಹೊಲದೊಳಗೆ ದುಡಿದರೆ ಏನಾದರೂ ನಾಲ್ಕು ಚೀಲು ಕಾಳು ಹುಟ್ಟಿಯಾವು.... ಈಗೇನೋ ನಾಲ್ಕು ದಿನ ನಿಮಗೂ ಚೆಂದ ಕಂಡೀತು ಮುಂದೇನು ?"

ಎಂದು ಶ್ರೇಯಾಂಸನಿಗೆ ಮನೆಯಲ್ಲಿಯೇ ಹೋರಾಟವನ್ನು ನಿರ್ಮಾಣ ಮಾಡಿ ಬಿಡುವರು. ಅಂಥ ದಿನಗಳಲ್ಲಿ ಮನೆಯಲ್ಲಿ ಒಂದು ದೊಡ್ಡ ಯುದ್ಧವೇ ಆಗಿ ಬಿಡುವುದು. ತಂದೆಯ ಎದುರಿಗೆ ಶ್ರೇಯಾಂಸ ಪಿಟ್ಟೆನ್ನದೆ ಸುಮ್ಮನಿರುವ. ತಂದೆಯ ಕಠೋರತೆಯು ಅವನ ಮನಸ್ಸನ್ನು ಕಲಕಿಬಿಡುವುದು. ಇಂಥ ದಿನಗಳಲ್ಲಿ ಅವನು ಬಸ್ತಿಯೊಳಗಿನ ಪುರಾಣವನ್ನು ಓದಿ ಬಂದಮೇಲೆ ಮನೆಯಲ್ಲಿ ಅಭ್ಯಾಸ ಮಾಡಲಿಕ್ಕೆ ಕಳ್ಳ. ತಂದೆ ತಾಯಿಂದಿರಿಗೆ ಹೆದರಿ ಸುಮ್ಮನೆ ಮಲಗಿ ಬಿಡುವ. ನಸುಕಿನಲ್ಲೆದ್ದು ಅವನು ಓದುತ್ತಿರುವ.

"ಪುಗ್ಗಲ ತಮ್ಮಾದೀಣಂ ಕತ್ತಾ ವವಹಾರದೋದುಣಿಚ್ಚ ಯದೋ । ಚೇದಣ ತಮ್ಮಾಣಾದಾ ಸುದ್ಧಣಯಾ ಸುದ್ಧಭಾವಾಣಂ॥"

'ದ್ರವ್ಯಸಂಗ್ರಹ'ದ ಇಂಥ ಭಾಷೆಯನ್ನು ತಿಳಿಯಲಾರದ ಸರಸಪ್ಪ ಚಿಂತೆಗೊಳಗಾಗುವಳು. ಏನೇನನ್ನೋ ಓದಿ ಹುಡುಗ ಹಾಳಾಗುತ್ತಿದ್ದಾನೆಂದು ಭಾವಿಸುವಳು. ಬೀಸುವ ಕಲ್ಲ ಮುಂದೆ ಕುಳಿತರೂ ಮುಕ್ಕು ಹಾಕಲು ಮರೆಯುವಳು. ಇಂಥದನ್ನೆಲ್ಲ ಕಲಿತು ಮಗನು ಸನ್ಯಾಸಿ ಆದರೆ ಏನು ಗತಿ ಎಂದು ಆಲೋಚಿಸಿ ಹೆದರುವಳು. ಆ ಹೆದರಿಕೆಯೇ ಶ್ರೇಯಾಂಸನ ಲಗ್ನದ ವಿಷಯಕ್ಕೆ ಅವಳ ಮನಸ್ಸನ್ನು ಆಕರ್ಷಿಸುವುದು. ಈಗ ಅವಳಿಗೆ ಉಳಿದುದು ಅದೊಂದೇ ದಾರಿ !

# ೬

ಆತ್ಮಾರಾಮು ಮಾಸ್ತರರು ವ್ಯವಸ್ಥೆ ಮಾಡಿ ಕೊಟ್ಟಂತೆ ಶ್ರೇಯಾಂಸನ ಇಂಗ್ಲೀಷ ಅಭ್ಯಾಸ ಸಾಗಿಯೇ ಇತ್ತು. ಇಂಗ್ಲೀಷ ಕಲಿಸುವ ಮಾಸ್ತರರು ಮುಪ್ಪಿನವರು. ಹಿಂದಕ್ಕೆ ಒಂದು ಖಾಸಗಿ ಹಾಯಸ್ಕೂಲಿನಲ್ಲಿ ಬಹುದಿನ ಕೆಲಸ ಮಾಡಿದವರು. ಅವರು ಶ್ರೇಯಾಂಸನನ್ನು ಆ ಹಾಯಸ್ಕೂಲಿನಲ್ಲಿ ಒಮ್ಮೆಲೇ ಮೂರನೆಯ ಇಯತ್ತೆಯ ಪರೀಕ್ಷೆಗೆ ಕೂಡಿಸಿಕೊಡುವುದಾಗಿಯೂ ಹೇಳಿದ್ದರು. ಇದರಂತೆ ಅನೇಕ ಹುಡುಗರನ್ನು ಅವರು ಕಲಿಸಿ ಹಾಯಸ್ಕೂಲಿಗೆ ಕಳಿಸಿದ್ದರು. ಶ್ರೇಯಾಂಸ ಇಂಗ್ಲೀಷಿನ ಜೊತೆಗೆ ಸಂಸ್ಕೃತವನ್ನು ಅಭ್ಯಾಸ ಮಾಡುತ್ತಿರುವುದರಿಂದ ಅವನಿಗೆ ಹಾಯಸ್ಕೂಲಿನ ನಾಲ್ಕನೆಯ ವರ್ಗದಲ್ಲಿ ಅಭ್ಯಾಸಕ್ಕೆ ಬಹು ಸುಲಭವಾಗುವುದೆಂದು ಅವರು ಆಗಾಗ ಹೇಳುತ್ತಿದ್ದರು. ಅಷ್ಟರ ಮುಂದೆ ಅವರ ಬುದ್ಧಿ ಓಡುತ್ತಿರಲಿಲ್ಲ. ಹಳ್ಳಿಯ ಅಕ್ಕಸಾಲಿಗನ ಕೈಯಲ್ಲಿ ಸಿಕ್ಕ ವಜ್ರದುಂಗುರದಂತೆ ಶ್ರೇಯಾಂಸನ ಸ್ಥಿತಿಯಾಗಿತ್ತು.

ಶ್ರೇಯಾಂಸನಿಗೆ ಸ್ವಲ್ಪ ದಿನಗಳಲ್ಲಿಯೇ ಇಂಗ್ಲೀಷ ಪ್ರಾಯಮರ ರೀಡರಗಳ ವಿಷಯದಲ್ಲಿ ಬೇಸರ ಬಂತು. 'This is a cat, This is a rat' ಎಂದು ಪಾಠ ಮಾಡುತ್ತ ಕೂಡುವದಕ್ಕೆ ಅವನಿಗೆ ತುಂಬ ಬೇಸರ. ಇಂಗ್ಲೀಷು ಭಾಷೆಯ ಅಭ್ಯಾಸಕ್ಕಾಗಿ ಭಾಷಾಂತರ ಪಾಠಗಳನ್ನೂ ಸ್ಪೆಲಿಂಗನ್ನೂ ಪಾಠ ಮಾಡುತ್ತಿದ್ದ. ಆದರೆ ಇಂಗ್ಲೀಷ ಮಾಸ್ತರರಿಂದ ಅವನು ಇಂಗ್ಲೀಷ ಭಾಷೆಯೊಳಗಿನ ಒಳ್ಳೊಳ್ಳೆಯ ಪುಸ್ತಕಗಳನ್ನೂ ಓದಿಸಿ ಕೇಳಬೇಕೆಂದು ಈಗಾಗಲೇ ಹಂಬಲಿಸುತ್ತಿ

ದ್ದನು. ಆದರೆ ಇಂಗ್ಲೀಷ ಮಾಸ್ತರರ ಮನೆಯಲ್ಲಿ ಇರುವ ಪುಸ್ತಕಗಳೆಲ್ಲ ಮಕ್ಕಳಿಗಾಗಿರುವ ಚಿಕ್ಕ ಚಿಕ್ಕ ರೀಡರುಗಳೇ ಆಗಿದ್ದುವು. ಅವುಗಳಿಂದ ಅವನ ಹಸಿವು ತಣಿಯುವಂತಿರಲಿಲ್ಲ. ಆದರಿಂದ ಒಳ್ಳೆಯ ಇಂಗ್ಲೀಷ ಪುಸ್ತಕವೊಂದನ್ನು ಎಲ್ಲಿಂದಾದರೂ ಸಂಪಾದಿಸಲಿಕ್ಕೆ ಹವಣಿಸುತ್ತಿದ್ದ ಶ್ರೇಯಾಂಸ.

ಇಂಥ ಸಂದರ್ಭದಲ್ಲೆಲ್ಲ ಅವನಿಗೆ ತನ್ನ ಆರ್ಥಿಕ ಪಾರತಂತ್ರ್ಯದ ಅರಿವೂ ಬಹಳ ತೀವ್ರತರವಾಗುತ್ತಿದ್ದಿತು. ಮನೆಯಿಂದ ಅವನಿಗೆ ಯಾವುದಕ್ಕೂ ದುಡ್ಡು ಸಿಗುತ್ತಿರಲಿಲ್ಲ. ಮಗನಿಗೆ ಹೊಟ್ಟೆಗೆ ಹಾಕುವೆವು, ಅರಿವೆ ಕೊಂಡು ಕೊಡುವೆವು, ಉದ್ಯೋಗವಿಲ್ಲದೆ ತಿರುಗುತ್ತಿದ್ದಾನೆ....ಎಂದು ಅವನ ಹಿರಿಯರ ಭಾವನೆ. ಹೊಟ್ಟೆ ಬಟ್ಟೆಗಳ ಹೊರತಾಗಿ ಮಾನವನಿಗೆ ಮತ್ತೇನೂ ಬೇಕಾಗದೆಂದೇ ಅವರ ತಿಳುವಳಿಕೆ. ಅಂಥವರ ಹತ್ತಿರ ಶ್ರೇಯಾಂಸ ದುಡ್ಡು ಕೇಳಿ ಫಲವೇನು ? ಈ ವಿಚಾರ ಬಂದಾಗಲೆಲ್ಲ ಶ್ರೇಯಾಂಸನಿಗೆ ತಿಂಗಳಿಗೆ ನಾಲ್ಕಾರು ರೂಪಾಯಿಗಳನ್ನಾದರೂ ಕೊಡುವಂಥ ಕೆಲಸವೊಂದು ಇರಬೇಕು ಎನಿಸುವುದು. ಹಳ್ಳಿಯಲ್ಲಿ ಅದಕ್ಕೆ ಅವಕಾಶವೆಲ್ಲಿ? ಇವನ ವಿದ್ಯಾಬುದ್ಧಿಗಳಿಂದ ಜನರಿಗೆ ಉಪಯೋಗವಿಲ್ಲ. ಆದರಿಂದ ಅದು ದುಡ್ಡು ಸಂಪಾದಿಸಲಿಕ್ಕೆ ನೆರವಾಗದು. ಇನ್ನೇನು ಹೊಲದಲ್ಲಿ ದುಡಿಯಲಿಕ್ಕೆ ಹೋದರೆ ಯಾರಾದರೂ ದಿನಕ್ಕೆ ನಾಲ್ಕಾಣೆ ಕೊಡಬಹುದಿತ್ತು. ಅದು ಇವನ ಮನಸ್ಸಿಗೆ ಒಗ್ಗದು. ಒಂದು ವೇಳೆ ಮನಸ್ಸು ಮಾಡಿದರೂ ತನ್ನ ಹೊಲವನ್ನು ಬಿಟ್ಟು ಅನ್ಯರಲ್ಲಿ ಕೆಲಸಕ್ಕೆ ಹೋಗುವುದ. ಹೇಗೆ ? ಈ ಆರ್ಥಿಕ ಸಮಸ್ಯೆ ಶ್ರೇಯಾಂಸನ ಎದುರಿಗೆ ಬಿಡಿಸಲಾರದ ಸಮಸ್ಯೆಯಾಗಿಯೇ ಉಳಿಯಿತು.

ಇದರಲ್ಲಿಯೂ ಶ್ರೇಯಾಂಸ ಹಾದಿಯನ್ನು ಹುಡುಕಲು ಯತ್ನಿಸಿದ. ಮೂಲ ಧನವಿಲ್ಲದೆ ತಿಂಗಳಿಗೆ ಒಂದೆರಡು ರೂಪಾಯಿಗಳನ್ನು ಸಂಪಾದಿಸುವ ಯುಕ್ತಿಯನ್ನು ಹುಡುಕಿದ. ಎಲ್ಲಿಂದಾದರೂ ಒಂದು

ಹಳೆಯ ರಾಟೆಯನ್ನು ಸಂಪಾದಿಸಿ ನೂಲು ತೆಗೆಯಬೇಕೆಂದು ಯೋಚಿಸಿದ. ದೇಶದಲ್ಲೆಲ್ಲ ಮಹಾತ್ಮರ ಖಾದಿಯ ಚಳುವಳಿಯಂತೂ ಹಬ್ಬಿದ್ದಿತು. ಆ ಚಳುವಳಿಯ ಪರಿಣಾಮವಾಗಿಯೇ ಶ್ರೇಯಾಂಸನಿಗೆ ಈ ಯುಕ್ತಿ ಹೊಳೆದುದು. ಕೂಡಲೆ ಒಂದು ರಾಟೆಯನ್ನು ದೊರಕಿಸಿ, ನೂಲುವುದಕ್ಕೆ ಆರಂಭಿಸಿದ. ಹೊಲದಲ್ಲಿ ಬೆಳೆದ ಹತ್ತಿಯಂತೂ ಪುಕ್ಕಟೆ ಸಿಗುವಂತಿದ್ದಿತು. ಆದರಿಂದ ಅವನ ಉದ್ಯೋಗ ಆರಂಭವಾಗಲಿಕ್ಕೇನೂ ತೊಂದರೆಯಾಗಲಿಲ್ಲ. ಆದರೆ ಈ ನೂಲುವ ಉದ್ಯೋಗವು ಶ್ರೇಯಾಂಸನಿಗೆ ದುಡ್ಡು ತರಲಿಲ್ಲ. ಮನೆಯಲ್ಲಿ ಜಗಳ ತಂದಿತು.

"ಏನು ಹುಚ್ಚು ಇದ್ದಾದೀ ನೀನು? ಅವರು ನೋಡಿದರೆ ಸುಮ್ಮನಿದ್ದಾರೇನು? ಹೊಲಕ್ಕೆ ಹೋಗಿ ಮೈ ಮಣಿಸಿ ದುಡಿದರೆ ಏನಾದರೂ ಆದೀತು....ಹೀಗೆ ನೂತರೆ ಏನಾಗೋದು? ಜಗದ ಹೊರತು ನೀ ಒಬ್ಬ ಮಗ ಹುಟ್ಟಿದಿ ನನಗೆ...."

ಸರಸಮ್ಮ ಸಿಟ್ಟಿನಿಂದ ಮಗನಿಗೆ ನುಡಿದಳು. ತನ್ನ ಅಂಜಿಕೆ ಮಗನಿಗೆ ಉಳಿದಿರಲಿಕ್ಕಿಲ್ಲನೆಂದು ಭಾವಿಸಿ ಪತಿಯ ಹೆದರಿಕೆಯನ್ನು ಹೇಳಿದಳು. ಮನೆಯಲ್ಲಿ ಕೈ ಹಾಕಿದಲ್ಲೆಲ್ಲ ಹಂಜಿ ಅರಳೆಗಳು ಸಿಕ್ಕುತ್ತಿದ್ದುದರಿಂದ ಅವಳು ಬೇಸತ್ತು ಹೋಗಿದ್ದಳು. ಪದ್ಮಪ್ಪನೇನೋ ಶ್ರೇಯಾಂಸನ ಕಾರ್ಯವನ್ನು ನೋಡಿ,

"ಇದರಲ್ಲೇಕೆ ಹೊತ್ತು ಕಳೆಯುವಿ? ಶಾಸ್ತ್ರಿಗಳ ಹತ್ತಿರ ಇನ್ನೆರಡು ಶಾಸ್ತ್ರಗಳನ್ನು ಹೆಚ್ಚಾಗಿ ಓದಿಕೊಳ್ಳಬಾರದೇ? ಆತ್ಮ ಕಲ್ಯಾಣದ ದಾರಿಯಾದರೂ ಸಿಕ್ಕೀತು........ಇದರಿಂದ ಏನಾಗುವುದು? ನೀನೇನೋ ನೂಲಲಿಕ್ಕೆ ಹತ್ತಿರುವಿ. ನನಗೆ ನಾಲ್ಕೆಂಟು ಜನಿವಾರವಾಗುವಷ್ಟು ನೂಲನ್ನಾದರೂ ಕೊಡು....ಗಿರಣೀ ನೂಲಿನ ಜನಿವಾರ ಹಾಕಿಕೊಳ್ಳುವುದಾದರೂ ತಪ್ಪೀತು."

ಎಂದು ಸಮಾಧಾನದಿಂದ ಶ್ರೇಯಾಂಸನನ್ನು ಎಚ್ಚರಿಸುವನು.

ಶ್ರೇಯಾಂಸನಿಗೂ ಈ ನೂಲುವ ವೇಳೆಯನ್ನು ಹೆಚ್ಚಿಗೆ ಒದಿಕೊಳ್ಳುವುದರಲ್ಲಿ ಕಳೆಯುವುದೇ ಹಿತವೆಂದು ಈಗೀಗ ಎನಿಸುತ್ತಿದ್ದಿತು. ಇವನು ನೂತ ನೂಲನ್ನು ಕೊಳ್ಳುವ ಗಿರಾಕಿಗಳಂತೂ ಊರಲ್ಲಿ ಇರಲಿಲ್ಲ. ಜಾಡರ ಹತ್ತರ ಹೋದರೆ ಅವರು ಇದರಿಂದ ನಮಗೆ ಅರಿವೆ ನೇಯಲಿಕ್ಕೆ ಬರುವುದಿಲ್ಲವೆಂದು ಹೇಳಿಬಿಟ್ಟರು. ಗಿರಣಿಯ ನೂಲನ್ನೇ ತಂದು ನೇಯುತ್ತಿದ್ದ ಅವರಿಗೆ ಈ ಕೈನೂಲಿನ ಉಪಯೋಗದಿಂದಾಗುವ ಹೆಚ್ಚಿನ ಶ್ರಮವನ್ನು ವಹಿಸುವುದು ಬೇಕಿರಲಿಲ್ಲ. ಹೀಗಾಗಿ ಶ್ರೇಯಾಂಸನ ನೂಲು ಮೂಲೆಯನ್ನು ಕಂಡಿತು. ಇದರಿಂದ ಅವನ ಕಾರ್ಯ ಫಲಿಸಲಿಲ್ಲ. ಆರ್ಥಿಕ ಸಮಸ್ಯೆ ಬಿಡಲಿಲ್ಲ.

ಮುಂದೇನು ? ಮುಂದೇನು ?

ಎಂದು ಹಗಲಿರುಳೂ ಚಿಂತಿಸಹತ್ತಿದ ಶ್ರೇಯಾಂಸ. ಏನೋ ಒಂದು ವಿಚಾರ ಬಂದು ಹೋಯಿತು. ಹೇಗೂ ಸುಗ್ಗಿ ಸಮೀಪಿಸಿದೆ. ಸುಗ್ಗಿಯಲ್ಲಿ ಹೊಲದೊಳಗೆ ಬೇಕಾದಷ್ಟು ಕಾಳು ಕಡ್ಡಿಗಳು ಇರುವವು. ಎಷ್ಟೋ ಸಲ ತಂದೆಯವರು ನನ್ನನ್ನು ಕಾಯಲಿಕ್ಕಿಟ್ಟು ಬೇರೆ ಹೊಲಗಳಿಗೂ ಹೋಗುವರು. ಅಂಥ ಪ್ರಸಂಗದಲ್ಲಿ ಹತ್ತೆಂಟು ರೂಪಾಯಿಗಳ ಧಾನ್ಯ ಬೇರೆ ತೆಗೆದಿಟ್ಟರಾಯಿತು. ಅದನ್ನು ಮಾರಿಕೊಂಡು ನಾಲ್ಕು ಕಾಸು ಕೈಯೊಳಗೆ ಮಾಡಿಕೊಂಡರಾಯಿತು. ಎಂಬುದೇ ಆ ಯೋಚನೆ. ಆದರೆ ಈ ವಿಚಾರ ಬಂದಾಗಲೆಲ್ಲ ನಾನು ಕಳವು ಮಾಡಲೇ ? ಎಂಬ ಪ್ರಶ್ನೆಯೊಂದು ಅವನಲ್ಲಿಯೇ ಉದ್ಭವಿಸುವುದು. ನನ್ನ ಹೊಲದೊಳಗಿನ ಧಾನ್ಯ ನಾನು ತಕ್ಕೊಂಡರೆ ಇದರಲ್ಲಿ ಕಳವಿನ ಪ್ರಶ್ನೆಯೆಲ್ಲಿ ಎಂದು ಒಂದು ಕ್ಷಣ ಸಮಾಧಾನ ಹೇಳಿಕೊಳ್ಳುವ. ಆದರೆ ತಂದೆಯವರಿಲ್ಲದಾಗ ಏಕೆ ಈ ವ್ಯವಹಾರ ? ಕೇಳಿದರೆ ಕೊಡುವದಿಲ್ಲ ಎಂದೋ ? ಎದುರಿಗೆ ತಕ್ಕೊಳ್ಳುವ ಧೈರ್ಯವಿಲ್ಲೆಂದೋ ? ಕದಿಯುವುದೇ ನನ್ನ ಉದ್ದೇಶವಾಗಿದೆಯೋ ? ಹೀಗೆ ಅನೇಕ ಪ್ರಶ್ನೆಗಳು ಶ್ರೇಯಾಂಸನ ಮನಸ್ಸಿಗೆದುರು ಬಂದು ಕುಣಿಯುತ್ತಿದ್ದುವು.

ಇಂಗ್ಲೀಷ ಪುಸ್ತಕವೊಂದನ್ನು ಕೊಳ್ಳಲಿಕ್ಕೆಂದು ಶ್ರೇಯಾಂಸನಿಗೆ ಸ್ವಲ್ಪ ದುಡ್ಡು ಬೇಕಾಗಿದ್ದಿತು. ಆದರಿಂದ ಅವನ ಆರ್ಥಿಕ ಪ್ರಶ್ನೆ ಒಂದು ಸಮಸ್ಯೆಯಾಗಿ ಇತ್ತೀಂದು ಅವನ ಎದುರಿಗೆ ನಿಂತಿತು.

ಒಂದು ದಿನ ಶ್ರೇಯಾಂಸ ಇಂಗ್ಲೀಷ ಹೇಳಿಸಿಕೊಳ್ಳಲಿಕ್ಕೆಂದು ಮಾಸ್ತರರ ಮನೆಗೆ ಹೋಗಿದ್ದ. ಅಲ್ಲಿ ಮಾಸ್ತರರ ಹಳೆಯ ಶಿಷ್ಯರೊಬ್ಬರು ಬಂದಿದ್ದರು. ಅವರ ಹೆಸರು ದತ್ತಮೂರ್ತಿ. ದತ್ತಮೂರ್ತಿಯೂ ಶ್ರೇಯಾಂಸನೂ ಚಿಕ್ಕಂದಿನಲ್ಲಿ ಕನ್ನಡ ಸಾಲೆಯಲ್ಲಿ ಕೂಡಿ ಕಲಿತವರು. ದತ್ತಮೂರ್ತಿ ಕನ್ನಡ ನಾಲ್ಕನೆಯ ತರಗತಿಯಲ್ಲಿಯೇ ಕನ್ನಡ ಸಾಲೆಯನ್ನು ಬಿಟ್ಟು, ಹಾಯಸ್ಕೂಲಿಗೆ ಹೋದ. ಈಗ ಮ್ಯಾಟ್ರಿಕ್ಕಿನ ವರ್ಗದಲ್ಲಿ ಓದುತ್ತಿದ್ದ. ಆದರೂ ಹಳೆಯ ಗೆಳೆಯನನ್ನು ಆತ ಮರೆತಿರಲಿಲ್ಲ. ಶ್ರೇಯಾಂಸನನ್ನು ಕಂಡೊಡನೆಯೇ ಸಲಿಗೆಯಿಂದ ಮಾತನಾಡಿದ; ಸ್ವಾಗತಿಸಿದ.

"ಮುಂದಿನ ವರ್ಷ ನಮ್ಮ ಸ್ಕೂಲಿಗೇ ಬಂದು ಬಿಡು ಶ್ರೇಯಾಂಸ!"

"ನೋಡಬೇಕು. ಮನೆಯವರು ಕಳಿಸುತ್ತಾರೋ ಇಲ್ಲವೋ."

"ಕಳಿಸದೇನು! ಅಂದೇ ನೀನು ಬಂದಿದ್ದರೆ ಈಗ ನನ್ನ ಜೊತೆಯಲ್ಲಿರುತ್ತಿದ್ದೆ...."

"ಅದೆಲ್ಲ ನಿಜ. ಪರಿಸ್ಥಿತಿಯೊಂದು ಅನುಕೂಲ ಬೇಕಲ್ಲ."

"ಪರಿಸ್ಥಿತಿ ಪರಿಸ್ಥಿತಿ ಎಂದು ಅನ್ನುತ್ತ ಕುಳಿತರೆ ಆಗದು. ಮನುಷ್ಯನು ಬಂದುದನ್ನು ಎದುರಿಸಿ ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳಲಿಕ್ಕೆ ಬೇಕು...."

ಶ್ರೇಯಾಂಸ ಸುಮ್ಮನಾದ. ದತ್ತಮೂರ್ತಿಯ ಮಾತಿನೊಳಗಿನ ಕೆಚ್ಚು, ಉಲ್ಲಾಸಗಳು ಅವನಿಗೊಂದು ಹೊಸ ಬೆಳಕನ್ನಿತ್ತವು.... ತಮ್ಮಿಬ್ಬರ ಹಳೆಯ ಸ್ನೇಹವೆಲ್ಲ ನೆನಪಾಯಿತು. ಹೊಲಕ್ಕೆ ಕೂಡಿ ಊಟಕ್ಕೆ ಹೋಗುತ್ತಿದ್ದುದು. ಪ್ರತಿವರ್ಷ ಭೂ ಪೂಜೆಯ ದಿನ

ದತ್ತಮೂರ್ತಿಯೂ ತನ್ಮಲ್ಲಿಯೇ ಊಟಕ್ಕೆ ಬರುತ್ತಿದ್ದುದು. ಕೂಡಿ ಬಾವಿಗೆ ಸ್ನಾನಕ್ಕೆ ಹೋಗುತ್ತಿದ್ದುದು....ಎಲ್ಲವೂ ಅವನ ದೃಷ್ಟಿಪಥದಲ್ಲಿ ಸುಳಿದು ಹೋಯಿತು. ಅಂದಿನ ದತ್ತನಿಗೂ ಇಂದಿನ ದತ್ತಮೂರ್ತಿಗೂ ಇರುವ ಅಂತರದ ಅರಿವಾಯಿತು. ಅವನ ಜಗತ್ತಿನ ಅನುಭವ, ಮಾತಿನ ವೈಖರಿಗಳು ಶ್ರೇಯಾಂಸನ ಮನಸ್ಸನ್ನು ಸೆರೆ ಹಿಡಿದವು. ಮುಂದೆ ದೀಪಾವಳಿಯ ಬಿಡುವು ಮುಗಿಯುವವರೆಗೂ ಇಬ್ಬರೂ ಕೂಡಿಯೇ ಕಳೆದರು.

ನಾಲ್ಕಾರು ಸಲ ದತ್ತಮೂರ್ತಿಯ ಮನೆಗೂ ಶ್ರೇಯಾಂಸ ಹೋದ. ಚಹ ಪಾನವಾಯಿತು, ತಿಂಡಿ ತಿನಿಸುಗಳಾದುವು. ಹಬ್ಬದ ನಿಮಿತ್ತ ಕೂಡಿ ದತ್ತನನ್ನೂ ಶ್ರೇಯಾಂಸ ತನ್ನ ಮನೆಗೆ ಫಲಹಾರಕ್ಕೆ ಕರೆದ. ಪದ್ಮಪ್ಪ ಇಲ್ಲದ ವೇಳೆಯಲ್ಲಿ ತಾಯಿಯಿಂದ ಚಹ ಮಾಡಿಸಿ ಕೊಂಡು ಇಬ್ಬರೂ ಕುಡಿದರು. ನಾಲ್ಕಾರು ಸಲ ದತ್ತನಲ್ಲಿ ಚಹ ಕುಡಿದುದಕ್ಕೆ ಅವನಿಗೆ ಒಮ್ಮೆಯಾದರೂ ಕರೆದೆನಲ್ಲ ಎಂದು ಶ್ರೇಯಾಂಸ ಮನದಲ್ಲಿಯೇ ಸಮಾಧಾನ ಹೊಂದಿದ. ಇಂಥ ಬರು ಹೋಗುವ ಬಳಿಕೆ ತನ್ಮ ಮನೆಯವರಿಗೆ ಸೇರದಲ್ಲ ಎಂದು ನೊಂದುಕೊಂಡ. ಅದರಲ್ಲೂ ಬ್ರಾಹ್ಮಣನಾದ ದತ್ತಮೂರ್ತಿಯ ಮನೆಯಲ್ಲಿ ತಾನು ಚಹ ಕುಡಿಯುತ್ತಿರುವ ಸಂಗತಿ ಮನೆಯವರಿಗೆ ತಿಳಿದರಂತೂ ತೀರೇ ಹೋಯಿತು. ಆಕಾಶವೇ ಕಳಚಿ ಬಿದ್ದಂತಾಗುವುದು. ಅದರಿಂದ ದತ್ತ ಮನೆಗೆ ಬಂದರೂ ಶ್ರೇಯಾಂಸ ಹೆಚ್ಚಾಗಿ ಸಲಿಗೆ ತೋರಿಸು ತ್ತಿರಲಿಲ್ಲ. ತಾನೇ ಅವನ ಮನೆಗೆ ಆಗಾಗ ಹೋಗುತ್ತಿದ್ದ.

ದತ್ತಮೂರ್ತಿಯ ತಾಯಿ ಅಕ್ಕ ತಂದೆ ಎಲ್ಲರೂ ಶ್ರೇಯಾಂಸ ನನ್ನು ಅಕ್ಕರೆಯಿಂದ ಕಾಣುತ್ತಿದ್ದರು. ಅವರ ಮುಂದೆ ದತ್ತ ಉತ್ಸಾಹದಿಂದ ಹೇಳುವ,

"ಶ್ರೇಯಾಂಸನೂ ಮುಂದಿನ ವರ್ಷ ನಮ್ಮ ಸ್ಕೂಲಿಗೇ ಬರುವನಲ್ಲ !"

“ನೀನಿರಬೇಕಲ್ಲ ಅಲ್ಲಿ!”

“ಈ ವರ್ಷ ನಾನೂ ಪರೀಕ್ಷೆಗೆ ಕೂಡುವದಿಲ್ಲ. ಡ್ರಾಯಿಂಗದ ಮೂರು ಗ್ರೇಡುಗಳನ್ನು ಮಾಡಿಕೊಳ್ಳುವುದರಲ್ಲಿ ಅಭ್ಯಾಸವೇ ಆಗಿಲ್ಲ....”

ದತ್ತಮೂರ್ತಿಯ ಈ ಮಾತನ್ನು ಕೇಳಿ ಶ್ರೇಯಾಂಸನಿಗೆ ಆನಂದವಾಯಿತು. ತಾನೂ ಒಂದು ಕ್ಷಣ ಹಾಯಸ್ಕೂಲಿಕೆ ಹೋಗುವವನೆಂದೇ ಭಾವಿಸಿದ್ದನಾತ. ಆದರೆ ಮಗನ ಮಾತನ್ನು ಕೇಳಿ ದತ್ತನ ತಂದೆ ತಾಯಿಂದಿರಿಗೆ ಚಿಂತೆಯಾಯಿತು. ಇದೊಂದು ವರ್ಷ ಹೇಗಾದರೂ ಪಟ್ಟಣದಲ್ಲಿಟ್ಟು ಮಗನನ್ನು ಓದಿಸಿದರೆ ತೀರಿತು. ಮ್ಯಾಟ್ರಿಕ್ ಆದೊಡನೆಯೇ ಎಲ್ಲಿಯಾದರೂ ಕೆಲಸವೊಂದನ್ನು ಹಿಡಿದು, ದುಡ್ಡು ಸಂಪಾದಿಸಿ ಮನೆಯ ಆರ್ಥಿಕ ಸ್ಥಿತಿಯನ್ನು ಸುಧಾರಿಸುವನೆಂದು ನಂಬಿದ್ದರವರು. ಅವರ ವಿಚಾರ ಮಗನ ಮಾತಿನಿಂದ ತಲೆಕೆಳಗಾಯಿತು. ಆದರೂ ಮಗನ ಶಿಕ್ಷಣದಲ್ಲಿ ಅವರು ವಹಿಸುತ್ತಿದ್ದ ಆಸ್ಥೆಯನ್ನು ಕಂಡು ಶ್ರೇಯಾಂಸನಿಗೆ ಆಶ್ಚರ್ಯವಾಗದಿರಲಿಲ್ಲ. ನಿಜವಾಗಿ ನೋಡಿದರೆ ದತ್ತನ ಮನೆತನವು ತೀರ ಬಡತನ ಸ್ಥಿತಿಯಲ್ಲಿತ್ತು. ಮನೆಯಲ್ಲಿ ದುಡಿಯುವವರು ಯಾರೂ ಇಲ್ಲ. ಇದ್ದ ಅಲ್ಪ ಸ್ವಲ್ಪ ಜಮೀನುಗಳು ಸಾಹುಕಾರರ ಸ್ವಾಧೀನವಾಗಿದ್ದುವು. ದತ್ತಮೂರ್ತಿಯ ತಂದೆ ಕರಣಿಕನ ಕೆಲಸ ಮಾಡುವವರೆಗೆ ಮನೆಯ ಆರ್ಥಿಕ ಸ್ಥಿತಿ ಚೆನ್ನಾಗಿತ್ತು. ಆ ಊರಿಗೆ ದತ್ತನ ಮನೆತನವು ಹಕ್ಕುದಾರ ಕುಲಕರ್ಣಿಯದು ಅಲ್ಲದುದರಿಂದ ಈಗ ಕರ್ಣಿಕರ ಕೆಲಸ ಇಲ್ಲದಾಯಿತು. ಇದ್ದಾಗ ವೈಭವದಿಂದ ಬಾಳಿದರು. ಇಲ್ಲದಾಗ ಬಡತನದಿಂದ ಬಾಳಬೇಕಾದರೆ ಬಿಗಿಯಾಗಿದ್ದಿತು. ವಿಧವೆಯಾದ ಮಗಳೊಬ್ಬಳು ಮನೆಯಲ್ಲಿ ಬಂದು ಕುಳಿತಿದ್ದಳು. ಅವಳ ಹೊಟ್ಟೆಗಾಗಿ ಗಂಡನ ಮನೆಯವರು ಕೆಲವೊಂದು ಹಣವನ್ನು ಕಳಿಸುತ್ತಿದ್ದರು. ಅದರಲ್ಲಿ ದತ್ತಮೂರ್ತಿಯ ಮನೆತನ ಸಾಗಬೇಕು.

ಆಸನ ಅಕ್ಕ ತಾಯಂದಿರು ಮನೆಯಲ್ಲಿ ಕುಳಿತು ಸ್ವಲ್ಪ ನೂಲುತ್ತಿದ್ದರು. ಅದರಿಂದ ಅವರ ಮನೆತನಕ್ಕೆ ಅರಿವೆಯಾಗಬೇಕು. ಇಂಥ ಸ್ಥಿತಿಯಲ್ಲೂ ಅವರು ದತ್ತಮೂರ್ತಿಯನ್ನು ಮ್ಯಾಟ್ರಿಕ್ಕಿನವರೆಗೆ ಓದಿಸಿದ್ದರು !

ದತ್ತಮೂರ್ತಿಯು ಬಿಡುವಿನ ದಿನಗಳಲ್ಲಿ ಊರಿಗೆ ಬಂದರೆ ಮನೆತನದ ಯಾವ ತೊಂದರೆಗಳನ್ನೂ ಹಿರಿಯರು ಅವನ ಮುಂದೆ ಹೇಳುತ್ತಿರಲಿಲ್ಲ. ಅಲ್ಲದೆ ನಾಲ್ಕು ದಿನ ಸವಿಯಾದ ತಿಂಡಿ ತೀರ್ಥಗಳನ್ನು ಮಾಡಿ ತಿನ್ನಿಸುತ್ತಿದ್ದರು, ನಗುತ್ತ ಕಳೆಯುತ್ತಿದ್ದರು. ಮಗನಿಗೆ ಬಡತನದ ಬವಣೆಯು ಅರಿವಾಗಬಾರದೆಂದು ಎಚ್ಚರ ತಕ್ಕೊಳ್ಳುತ್ತಿದ್ದ ಹಿರಿಯರು ಶ್ರೇಯಾಂಸನಿಗೆ ಹೇಗೆ ತಮ್ಮ ಮನೆತನದ ಸ್ಥಿತಿಗತಿಗಳ ಕಲ್ಪನೆ ಬರುವಂತೆ ವರ್ತಿಸಿಯಾರು? ಆದರೂ ಶ್ರೇಯಾಂಸನ ಸೂಕ್ಷ್ಮ ನೋಟಕ್ಕೆ ಅವರ ಸ್ಥಿತಿಯು ಅರಿವಾಗದೆ ಇರುತ್ತಿರಲಿಲ್ಲ. ಆದರೆ ಕೊರಗುವುದನ್ನುಳಿದು ಇನ್ನೇನು ಮಾಡಲು ಸ್ವಾತಂತ್ರ್ಯವಿದೆ ಶ್ರೇಯಾಂಸನಿಗೆ? ಹೀಗಿದ್ದರೂ ಸಂಜೆಗೆ ದತ್ತಮೂರ್ತಿ ಶ್ರೇಯಾಂಸ ಕೂಡಿ ಅಡ್ಡಾಡುತ್ತ ಹೋದಾಗ ಹೊಲದ ಕಡೆಗೆ ಹೋಗಿ ಶ್ರೇಯಾಂಸ ಆಯಿಸಿದ್ದ ಹಸಿಯ ನೆಲಗಡಲೆಗಳನ್ನು ತಕ್ಕೊಂಡು ಹೋಗಿ ದತ್ತನ ಮನೆಯಲ್ಲಿ ಕೊಡುವ........ಹೀಗೆ ಶ್ರೇಯಾಂಸ ಬರಬರುತ್ತ ದತ್ತನ ಮನೆಯವರಲ್ಲಿಯೇ ಒಬ್ಬನೆನಿಸಿದ.

ದತ್ತಮೂರ್ತಿಯ ತಂದೆಯವರು ಮೊದಮೊದಲು ಸಾಹಿತ್ಯ, ಸಂಸ್ಕೃತಿಗಳ ವಿಷಯಕ್ಕೆ ಊರಲ್ಲಿ ಚಟುವಟಿಕೆಯನ್ನು ಆರಂಭಿಸಿದವರು. ಊರಲ್ಲಿ 'ಸಮರ್ಥ ಸಂಘ'ವೊಂದನ್ನು ಕಟ್ಟಿ, ಅದರ ಕಾರ್ಯದರ್ಶಿಗಳಾಗಿ ತಾವು ನಿಂತು ಕರ್ನಾಟಕದ ವಿದ್ವಾಂಸರನ್ನು ಕರೆಯಿಸಿಕೊಂಡು, ಉಪನ್ಯಾಸಗಳನ್ನು ಮಾಡಿಸಿ ಊರಲ್ಲಿ ಸಾಂಸ್ಕೃತಿಕ ಜಾಗೃತಿಯನ್ನು ಉಂಟುಮಾಡಿದ್ದರು. ಒಂದು ವಾಚನಾಲಯವನ್ನು ತೆರೆದಿದ್ದರು. ಆದರೆ ಕರಣಿಕರ ಆರ್ಥಿಕ ಸ್ಥಿತಿಯು ಕೆಟ್ಟ ಮೇಲೆ

ಆ ಸಂಘವೂ ಉಳಿದಿರಲಿಲ್ಲ. ವಾಚನಾಲಯವೂ ಬದುಕಿರಲಿಲ್ಲ. ಈಗ ಅಂಥ ಕೆಲಸ ಕೈಕೊಳ್ಳುವ ಶಕ್ತಿಯೂ ಅವರಲ್ಲಿ ಇರಲಿಲ್ಲ. ಇಳಿ ವಯಸ್ಸಿನವರಾದರೂ ಉತ್ಸಾಹ ಮಾತ್ರ ತುಂಬಿ ತುಳುಕುತ್ತಿತ್ತು. ಆಗಾಗ ತಮ್ಮ ಸಂಘದ ವಿಷಯಕ್ಕೂ ಅದರ ಕಾರ್ಯ ಕಲಾಪಗಳ ವಿಷಯಕ್ಕೂ ಮಾತು ಬಂದರೆ ಒಳ್ಳೇ ಹುರುಪಿನಿಂದ ಹೇಳುತ್ತಿದ್ದರು. ಇಂದು ಪರದೇಶಕ್ಕೆ ಹೋಗಿ ಇಂಗ್ಲೀಷ ಅಭ್ಯಾಸಮಾಡಿ ಕರ್ಣಾಟಕಕ್ಕೆ ಕೀರ್ತಿಯನ್ನು ತಂದ ಪ್ರಿನ್ಸಿಪಾಲ್ ವಿನಾಯಕಕೃಷ್ಣ ಗೋಕಾಕರು ನಮ್ಮಲ್ಲಿ ಉಪನ್ಯಾಸವಿತ್ತಿದ್ದಾರೆ; ಆಗ ಅವರಿನ್ನು ಫಾರೆನ್ನಕ್ಕೆ ಹೋಗಿರಲಿಲ್ಲ-ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು! ಅವರ ಮಾತನ್ನು ಕೇಳಿದಾಗ ತಾವು ಚಿಕ್ಕಂದಿನಲ್ಲಿ ವಿನಾಯಕರ ಭಾಷಣವನ್ನು ಕೇಳಿದ ನೆನಪು ಶ್ರೇಯಾಂಸ ದತ್ತರಲ್ಲಿ ಸುಳಿದು ಹೋಗುವುದು. ಎತ್ತರವಾದ ನಿಲುವು, ಗಂಭೀರವಾದ ಮುಖ, ತೇಜಃಪುಂಜವಾದ ಆ ಕಣ್ಣುಗಳು ಒಮ್ಮೆ ಶ್ರೇಯಾಂಸನ ಬಗೆಗಣ್ಣಿನೆದುರಿಗೆ ಬಂದು ನಿಲ್ಲುವವು. ವಿನಾಯಕರ ಆಕೃತಿಯೊಂದು ಸುಳಿದು ಹೋಗುವುದು. ಅವರ ಮಾತುಗಳು ಕಿವಿಯಲ್ಲಿ ಗುಣುಗುಣಿಸಿದಂತೆ ಆಗುವವು.... ಶ್ರೇಯಾಂಸ ಕುತೂಹಲದಿಂದ ಕೇಳುವ :

"ಈಗ ವಿನಾಯಕರೆಲ್ಲಿದ್ದಾರೆ?"

"ಎಲ್ಲಿದ್ದಾರೋ ಏನೋ! ಫಾರೆನ್ನದಿಂದ ಬಂದ ಮೇಲೆ ಒಮ್ಮೆ ಕರೆದು ಗೌರವಿಸಬೇಕೆಂದು ಮಾಡಿದ್ದೆವು. ಆದರೆ ನಮ್ಮ ಸಂಘವೇ ಉಳಿಯಲಿಲ್ಲ. ಊರಲ್ಲಿ ಇದ್ದ ಒಂದಿಬ್ಬರು ವಕೀಲರೂ ಪಟ್ಟಣವನ್ನು ಸೇರಿದರು. ವಾಚನಾಲಯದ ಪುಸ್ತಕಗಳು ಓದಲು ಒಯ್ದವರಲ್ಲಿಯೇ ಉಳಿದವು....ಕೆಲವು ನಮ್ಮ ಮನೆಯಲ್ಲಿ ಬಿದ್ದು ಮೂಲೆ ಪಾಲಾದುವು! ಒಲವಿನ ಜನವಿಲ್ಲದಿದ್ದರೆ ಏನೂ ಆಗುವದಿಲ್ಲ...." ಎಂದು ನಿರಾಶೆಯ ದೃಷ್ಟಿಯೊಂದನ್ನು ಬೀರುವರು. ಶೂನ್ಯ ಮನಸ್ಕರಾಗಿ ಹಾಗೇ ಸ್ವಲ್ಪ ಹೊತ್ತು ಕೂಡುವರು. ಆಮೇಲೆ ಅದೇಕೋ ಸ್ವಲ್ಪ ಉತ್ಸಾಹಿತರಾಗಿ

ಎದ್ದು ಒಳಗೆ ಹೋಗಿ ಒಂದು ಪುಸ್ತಕದ ಗಂಟನ್ನೇ ತಂದು ತರುಣ ರಿಬ್ಬರ ಮುಂದೆ ಒಟ್ಟಿದರು. "ಇವು ನೋಡಿ! ಸಮರ್ಥ ಸಂಘದ ಪುಸ್ತಕಗಳು! ನೀವೇನಾದರೂ ಉಪಯೋಗ ಮಾಡಿಕೊಳ್ಳುವದಿದ್ದರೆ ಒಯ್ದು ಬಿಡಿರಿ!" ಎಂದರು.

ಶ್ರೇಯಾಂಸ ಒಳ್ಳೇ ಲವಲವಿಕೆಯಿಂದ ಆ ಗಂಟನ್ನು ಬಿಚ್ಚಿದ ಪುಸ್ತಕದ ಮೇಲಿನ ಧೂಳನ್ನು ತೊಡೆದ ಒಂದೊಂದನ್ನಾಗಿಯೇ ತೆಗೆದು ನೋಡತೊಡಗಿದ. ಅದರಲ್ಲಿ ಮಹಾತ್ಮರ 'ಸತ್ಯಶೋಧನೆ' ಲೋಕಮಾನ್ಯರ 'ಗೇಲೀ ಆಠವರ್ಷೆ' (ಕಳೆದ ಎಂಟುವರ್ಷಗಳು) ವಿವೇಕಾನಂದರ ಕೆಲವು ಪುಸ್ತಕಗಳು ಇದ್ದುವು! ಅಲ್ಲದೆ ಮಹಾತ್ಮರು ಹೊರಡಿಸುತ್ತಿದ್ದ 'ಯಂಗ ಇಂಡಿಯಾ' ಪತ್ರಿಕೆಯ ಫೈಲೂ ಇನ್ನೂ ಕೆಲವು ಇಂಗ್ಲೀಷ ಪುಸ್ತಕಗಳೂ ಇದ್ದುವು. ಶ್ರೇಯಾಂಸನಿಗೆ ಒಂದು ನಿಧಿ ದೊರೆತಂತಾಯಿತು. ಆಸೆಯ ದೃಷ್ಟಿಯಿಂದ ದತ್ತಮೂರ್ತಿಯ ಮುಖದ ಕಡೆಗೊಮ್ಮೆ ನೋಡಿದ. ಶ್ರೇಯಾಂಸನ ಭಾವವನ್ನು ಗ್ರಹಿಸಿ, ದತ್ತ ಕೂಡಲೆ ನುಡಿದ:

"ಎಲ್ಲ ಪುಸ್ತಕಗಳನ್ನೂ ನೀನೇ ತಕ್ಕೊಂಡುಬಿಡು ಶ್ರೇಯಾಂಸ!"

ಶ್ರೇಯಾಂಸ ಕೃತಜ್ಞತೆಯಿಂದ ದತ್ತನನ್ನು ಅಪ್ಪಿಕೊಂಡ. ಆನಂದದಿಂದ ಅವನ ಮೈಯಲ್ಲಿ ಒಂದು ತರದ ನಡುಕ ಹುಟ್ಟಿ ದಂತಾಗಿತ್ತು.

"ನನಗೆ ಹಾಯಸ್ಕೂಲ ಲಾಯಬ್ರರಿಯಲ್ಲಿ ಬೇಕಷ್ಟು ಪುಸ್ತಕ ಗಳು ಓದಲಿಕ್ಕೆ ಸಿಕ್ಕುವವು. ನಿನಗೂ ಬೇಕಾದರೆ ಕಳುಹಿಸಿ ಕೊಡುವೆ...."

ದತ್ತಮೂರ್ತಿ ಗೆಳೆಯನ ವಾಚನಾಭಿರುಚಿಯನ್ನು ಅರಿತು ನುಡಿದ.

"ಹೇಗೆ ಸಾಧ್ಯ?"

"ಪ್ರತಿ ರವಿವಾರವೂ ವಕೀಲರು ಊರಿಗೆ ಬರುವರಲ್ಲ. ಅವರ

ಕೈಯಲ್ಲಿ ಕೊಟ್ಟು ಕಳಿಸುವೆ. ಆಯಿತಿಲ್ಲೊ ?"

"ನನ್ನ ಸಲುವಾಗಿ ಅಷ್ಟು ಮಾಡುವೆಯಾ ?"

ಅಂಗಲಾಚಿದ ಶ್ರೇಯಾಂಸ.

"ನೀನೂ ಹೀಗೆ ಕೇಳಬೇಕೇ ಶ್ರೇಯಾಂಸ ?"

ಶ್ರೇಯಾಂಸನಿಗೆ ಸ್ವಲ್ಪ ನಾಚಿಕೆಯೆನಿಸಿತು. ದತ್ತಮೂರ್ತಿಯ ಹೃದಯದ ಪರಿಚಯ ತನಗಿನ್ನೂ ಆಗದೆ ಹೋಯಿತಲ್ಲ. ಎಂದು ಮರುಗಿದ. ತನ್ನ ವಿಷಯಕ್ಕೇನೇ ಶ್ರೇಯಾಂಸನಿಗೆ ಬೇಸರವೆನಿಸಿತು ಒಂದು ಕ್ಷಣ. ಇಂಥ ಹಾಲಿನಂಥ ಹೃದಯದ ಗೆಳೆಯನ, ಗೆಳೆತನದ ಸವಿಯನ್ನೇ ಕಾಣದೆ ಹೋದೆನಲ್ಲ ಎಂದುಕೊಂಡ. ಮರುಕ್ಷಣದಲ್ಲಿ ದತ್ತಮೂರ್ತಿಯ ಶಿಕ್ಷಣ, ಅವನ ಸುತ್ತಲೂ ಇರುವ ವಾತಾವರಣಗಳಿಂದ ಅವನ ಹೃದಯ ಅಷ್ಟು ತಿಳಿಯಾಗಿದೆ, ವೈಶಾಲ್ಯದಿಂದ ಕೂಡಿದೆ ಎಂದು ತಿಳಿದುಕೊಂಡ. ತನ್ನ ಮನಸ್ಸನ್ನು ಹಾಗೆ ತಿದ್ದಿಕೊಳ್ಳಬೇಕು ಸಂಕೋಚವನ್ನು ತೊರೆದು ವರ್ತಿಸಬೇಕು ಎಂದು ನಿಶ್ಚಯಿಸಿದ.

ದತ್ತಮೂರ್ತಿಯ ವ್ಯಕ್ತಿತ್ವವು ಶ್ರೇಯಾಂಸನ ಮೇಲೆ ಪರಿಣಾಮ ಮಾಡಿದಂತೆ ಶ್ರೇಯಾಂಸನ ಸಂಸ್ಕೃತ ಜ್ಞಾನವು ದತ್ತಮೂರ್ತಿಯನ್ನು ಬೆರಗುಗೊಳಿಸಿದ್ದಿತು. ತನ್ನ ಸಂಸ್ಕೃತ ಭಾಷೆಯ ಜ್ಞಾನವು ಶ್ರೇಯಾಂಸನ ಮುಂದೆ ಏನೂ ಅಲ್ಲವೆಂದು ತಿಳಿದುಕೊಂಡಿದ್ದನಾತ ಆದಕ್ಕಾಗಿ ಅವನು ತನ್ನಲ್ಲಿಯ ಸಂಸ್ಕೃತ ಪುಸ್ತಕವೊಂದನ್ನು ಶ್ರೇಯಾಂಸನ ಕೂಡ ಓದಲು ಆರಂಭಿಸಿದ್ದ. ಅದರ ಜೊತೆಗೆ ತಾನು ಬರೆಯುತ್ತಿರುವ ಒಂದು ನಾಟಕವನ್ನು ಶ್ರೇಯಾಂಸನ ಮುಂದೆ ಓದಿ ತೋರಿಸಿದ. ಓದುವದಾದ ಮೇಲೆ ಮೆಲ್ಲನೆ ನುಡಿದ.

"ಇದನ್ನು ಹೇಗೆ ಮುಂದರಿಸಬೇಕೆಂಬುದು ತಿಳಿಯದೆ ಹಾಗೇ ಇಟ್ಟಿರುವೆ...."

ದತ್ತಮೂರ್ತಿಯ ಮಾತು ಶ್ರೇಯಾಂಸನ ಕಿವಿಯನ್ನು ಸೇರಿದಂತೆ ತೋರಲಿಲ್ಲ ಅವನು ಯಾವುದೋ ಒಂದು ವಿಚಾರದಲ್ಲಿ

ತಲ್ಲೀನನಾದಂತೆ ಇದ್ದ. ಮುಖದ ಮೇಲೆ ಭಾವನೆಯ ತರಂಗಗಳು ಒಂದೇ ಸಮನೆ ಏಳುತ್ತಿದ್ದುವು. ನಾಟಕದ ಮುಂದಿನ ಭಾಗವೆಲ್ಲ ಅವನ ಕಣ್ಣು ಮುಂದೆ ನಡೆದು ಹೋದಂತಾಯಿತು. ತಟ್ಟನೆ ನುಡಿದ ಶ್ರೇಯಾಂಸ.

"ಹರಿಹರನ ಪಟ್ಟಾಭಿಷೇಕದ ದೃಶ್ಯದಿಂದ ಈ ನಾಟಕ ಮುಗಿಯುವದಲ್ಲವೆ ?"

"ನೋಡು ಹೇಗೆ ಮುಗಿಸಬೇಕು...."

"ನಾಟಕದ ಹೆಸರೇನು ?"

"ಇನ್ನೂ ನಿರ್ಣಯಿಸಿಲ್ಲ"

"ಏನು ಇಡಬೇಕೆಂದಿರುವೆ ?"

"ಏನು ಇಡುವುದು ನೀನೇ ಹೇಳು ನೋಡುವಾ !"

"ವಿಜಯ ಸಾಮ್ರಾಜ್ಯ."

"ವಿಜಯ ಸಾಮ್ರಾಜ್ಯ !"

ದತ್ತಮೂರ್ತಿಯು ಶ್ರೇಯಾಂಸನ ಕೈಯಲ್ಲಿ ಕೈ ಹಾಕಿದ. ಅವನ ಮುಖದ ಕಡೆಗೊಮ್ಮೆ ನೋಡಿದ. ಶ್ರೇಯಾಂಸನ ಕಣ್ಣುಗಳಲ್ಲಿ ಏನನ್ನು ಕಂಡನೋ ಏನೋ !

"ಮುಂದಿನ ನಾಟಕ ನೀನೇ ಬರೆದು ಮುಗಿಸು ಶ್ರೇಯಾಂಸ !"

ಆತ್ಮೀಯತೆಯಿಂದ ನುಡಿದ ದತ್ತಮೂರ್ತಿ.

ನಾಟಕದ ಹಾಳೆಗಳನ್ನು ಮನಃಪೂರ್ವಕವಾಗಿ ಸ್ವೀಕರಿಸಿದ ಶ್ರೇಯಾಂಸ.

ಕೃತಾರ್ಥನಾದೆನೆಂದುಕೊಂಡ ದತ್ತಮೂರ್ತಿ !

೧೦

ಮನೆಯಲ್ಲಿ ತಾವಿಲ್ಲದಾಗ ದತ್ತಮೂರ್ತಿಯನ್ನು ಕರೆದುತಂದು ಚಹ ಮಾಡಿಸಿ ಕುಡಿದುದನ್ನು ಕೇಳಿ ಸುಂದರವ್ವ ತುಂಬ ಸಿಟ್ಟು ಗೊಂಡಿದ್ದಳು. ಅನ್ಯಜಾತಿಯ ಹುಡುಗರ ಜೊತೆಗೆ ಸೇರಿ ಚಹ ಫಲ ಹಾರ ತಕ್ಕೊಳ್ಳುವದೆಂದರೆ ಅವಳಿಗೆ ಸಹನವಾಗಲಿಲ್ಲ. ಶ್ರೇಯಾಂಸ ನನ್ನು ಅವಳೆಷ್ಟು ಅಕ್ಕರೆಯಿಂದ ಕಾಣುತ್ತಿದ್ದರೂ ಅವನ ಈ ನಡತೆ ಆವಳಿಗೆ ಸೇರಲಿಲ್ಲ. ಆದರಿಂದಲೇ ಅವಳು ಅವನ ಮುಂದಿನ ಶಿಕ್ಷಣಕ್ಕೆ ಅಡ್ಡಿಯನ್ನು ಒಡ್ಡ ತೊಡಗಿದಳು. ತನ್ನ ಸೋದರಳಿಯನು ಮುಂಜಾನೆ ಎದ್ದು ಸ್ನಾನ ದೇವದರ್ಶನಗಳನ್ನು ತೀರಿಸಿಕೊಂಡು ನೆಟ್ಟಗೆ ಹೊಲಕ್ಕೆ ಹೋಗುವುದೇ ವಿಹಿತವೆಂದು ಅವಳು ಮನದಲ್ಲಿಯೇ ನಿರ್ಣಯಿಸಿ ದ್ದಳು. ಅದರಂತೆ ಆಗಾಗ ಮನೆಯಲ್ಲಿ ಆಡಿಯೂ ತೋರಿಸುತ್ತಿದ್ದಳು.

ಬಾಳಪ್ಪನಿಗೆ ಮಾತ್ರ ಈಗ ಈ ಹಂಬಲವಿರಲಿಲ್ಲ. ಮಗನು ಇನ್ನು ಹೊಲದಲ್ಲಿ ಬಂದು ದುಡಿಯುವುದು ಅಷ್ಟರಲ್ಲೇ ಇದೆ. ಊರ ಲ್ಲಿಯೇ ಯಾವುದಾದರೊಂದು ಕೆಲಸ ಹಿಡಿದು ತಿಂಗಳಿಗೆ ಹತ್ತೆಂಟು ರೂಪಾಯಿಗಳನ್ನು ಸಂಪಾದಿಸುವಂತಾದರೆ ಸಾಕೆಂದು ಅವನು ಎಣಿ ಸಿದ್ದ. ಅದಕ್ಕಾಗಿ ಇನ್ನಿಷ್ಟು ಶ್ರೇಯಾಂಸ ಚೆನ್ನಾಗಿ ಮರಾಠಿ ಓದಿ ಬರೆಯಲಿಕ್ಕೆ ಕಲಿಯಲೆಂದು ಸುಮ್ಮನಿದ್ದ. ಯಾವುದಾದರೂ ಒಂದು ಅಂಗಡಿಯಲ್ಲಿ ಜಮಾ ಖರ್ಚು ಬರೆಯಲಿಕ್ಕೆ ಇಟ್ಟರಾಯಿತು. ಮಗನು ನಾಲ್ಕೆಂಟು ರೂಪಾಯಿಗಳನ್ನು ಗಳಿಸಿದಂತೆ ಆಗುವುದು, ಕಣ್ಣೆದುರಿಗೆ ಇದ್ದಂತೆಯೂ ಆಯಿತು. ಈ ವಿಚಾರದಿಂದ ತಮ್ಮೂರ ಅಂಗಡಿಕಾರರ ಮುಂದೆ ಆಗಾಗ ಬಾಳಪ್ಪ ಹೇಳುತ್ತಿದ್ದ.

"ನಮ್ಮ ಶ್ರೇಯಾಂಸನಿಗೆ ಉದ್ಯೋಗವೊಂದನ್ನು ಹಚ್ಚಿರಲ್ಲ!" ಎಂದು. ಅದಕ್ಕೆ ಹಲವರು ಹೇಳುತ್ತಿದ್ದರು:

"ಹುಡುಗನನ್ನು ಹಾಗೇ ಬಿಡಬೇಡ. ನಾಳೆ ಯಾವುದಕ್ಕೂ ಬಾಗದು ಅವನ ಮೈ. ಈಗಲೇ ಯಾವುದಾದರೊಂದು ಕೆಲಸಕ್ಕೆ ಸೇರಿಸು. ಹೊಲಕ್ಕೆ ಒಯ್ಯು!"

ಸರಿಕದವರ ಈ ಮಾತನ್ನು ಕೇಳಿದಾಗಂತೂ ಬಾಳಪ್ಪ ಮಗನ ಭವಿಷ್ಯದ ಸಲುವಾಗಿ ಅಧೀರನಾಗುವನು. ಏನು ಮಾಡಬೇಕೆಂದು ಒಂದೇ ಸವನೆ ವಿಚಾರಿಸಹತ್ತುವನು. ಈ ವಿಷಯದಲ್ಲಿ ಪದ್ಮಪ್ಪನ ಸಲಹೆ ತನಗೆ ಒಪ್ಪಿಗೆಯಾಗದುದೆಂದು ತಿಳಿದಿದ್ದರೂ-ದಿಕ್ಕು ಗಾಣದವನಂತೆ-ಕೇಳುವನು.

"ಶ್ರೇಯಾಂಸ ಹೀಗೆ ತಿರುಗಲಿಕ್ಕೆ ಹತ್ತಿದನಲ್ಲ!"

"ಆಶ್ರಮಕ್ಕೆ ಹೋಗುವದಿಲ್ಲ?"

"ಹೋಗುವನಲ್ಲ; ಅಲ್ಲಿ ಕಲಿಯುವದರಿಂದ ಏನಾಗುವುದು?"

"ಯಾವುದಾದರೂ ವಿಷಯದ ಅಭ್ಯಾಸ ಮುಗಿಸಬೇಕು ಅಂದರೆ ಹನ್ನೆರಡು ವರ್ಷ ಆದರೂ ಓದಬೇಕು...."

"ಅಷ್ಟು ಆಗಬೇಕಾದರೆ ಇವನ ಅರ್ಧ ಜನ್ಮ ಆಗತದಲ್ಲ....!"

"ಈಗ ಮತ್ತೇನು ಮಾಡುವವನಿದ್ದಾನ ಶ್ರೇಯಾಂಸ?"

"ಹಾಗಾದರೆ ಇದೇ ಮಾಡನ್ನುವಿ?"

"ನಾ ಅನ್ನಲಿಕ್ಕೇನು? ಅವನ ಪೂರ್ವ ಜನ್ಮದ ಕರ್ಮ ಇದ್ದಂತೆ ಆಗತದ....ನಾವೇನು ಮಾಡುವುದು ಅದಕ್ಕ?"

"ಹೀಗೇ ಕಣ್ಣು ಮುಚ್ಚಿ ಕೂಡೋದು? ಅಡ್ಡದಾರಿಗೆ ಹೋಗಲಿಕ್ಕೆ ಹಚ್ಚಿ ಅವನ ಕರ್ಮ ಅಂದರೆ ಏನು ಬಂತು?"

"ಅಡ್ಡದಾರಿಯೋ ಸರಳದಾರಿಯೋ ಯಾರು ಹೇಳಬಲ್ಲರು?"

ತಾನು ಪದ್ಮಪ್ಪನ ಮುಂದೆ ಮಾತನಾಡಿದ್ದೇ ತಪ್ಪು ಎಂದು ಸಿಟ್ಟಿನಿಂದ ಬಾಳಪ್ಪ ಎದ್ದು ಒಳಗೆ ಹೋದ. ಚಿಲುಮೆಯು ಮೇಲೆ

ಬೆಂಕಿಯನ್ನು ಹೇರುತ್ತ,

"ಹೆಗಲ ಜೋತಾಡಿಸಿಕೊಂಡು ಹೊಲದಲ್ಲಿ ನಾವು ಗಂಡ ಹೆಂಡತಿ ದುಡಿಯುತ್ತೇವಂತ ಇವರೆಲ್ಲ ನಾಲ್ಕು ತುತ್ತ ಕೂಳು ಕಾಣ್ತಾರ. ಕೂತ ಹೇಳಲಿಕ್ಕೆ ಎಲ್ಲರಿಗೂ ಬರತದ...."

ಎಂದು ಚಿತಿಯ ಮುಂದೆ ಹೆಂಡತಿಯ ಹತ್ತಿರ ಗೊಣಗುಟ್ಟಿದ,

"ಏನಾಯಿತೀಗ ?"

ವಿವರವನ್ನು ತಿಳಿದುಕೊಳ್ಳಲಿಕ್ಕೆಂದು ಸರಸವ್ವ ಪ್ರಶ್ನಿಸಿದಳು.

"ಏನಿಲ್ಲ !"

ಎಂದು ಬಿಗುಮಿನಲ್ಲಿಯೇ ಹೇಳಿ ಮತ್ತೆ ಪಡಸಾಲೆಗೆ ಬಂದ ಬಾಳಪ್ಪ. ಏನೂ ಮಾಡಲಿಕ್ಕೆ ತಿಳಿಯದಾದ. ಪದ್ಮಪ್ಪನಂತೂ ಹೆಗಲ ಮೇಲಿ ದೋತರ ಹಾಕಿಕೊಂಡು, ಏನೂ ಆಗದವರಂತೆ ನಿಶ್ಚಿಂತೆಯಿಂದ ಹೊರಗೆ ಹೋಗಿಬಿಟ್ಟ. ತನ್ನ ಸಿಡಕಿನ ನಡತೆಯನ್ನು ಗಮನಿಸಿ ಪದ್ಮಪ್ಪ ಏನಾದರೂ ವಿಚಾರವನ್ನು ತನ್ನ ಮುಂದೆ ಇಡಬಹುದೆಂದು ನಿರೀಕ್ಷಿಸಿದ ಬಾಳಪ್ಪನಿಗೆ ತಿರುಗಿ ಏಟು ಬಿದ್ದಂತಾಯಿತು. ಕೆಣಕಿದ ಕೇಸರಿಯಂತೆ ಅಡುಗೆಯ ಮನೆಯ ಕಡೆಗೆ ಹೊರಳಿ, ಕೆರಳಿ ನುಡಿದ :

"ಮನೆಯೊಳಗೆ ಯಾರಿಗೇನು ಚಿಂತೆ ಅದೆ ಏನು? ನಾಳಿನದು ಹೇಗಾದೀತೆಂದು...."

ಒಲೆಯ ಮುಂದೆ ಕುಳಿತಲ್ಲಿಯೇ ಸರಸವ್ವ ನುಡಿದಳು. ಗಂಡನ ಗರ್ಜನೆಯ ಅರ್ಥ ಅವಳಿಗೆ ಆಗಲಿಲ್ಲ. ಹೊರಗೆ ಶ್ರೇಯಾಂಸನು ಬಂದನೇನೋ ಎಂದುಕೊಂಡು ಕೇಳಿದಳು.

"ಯಾರಿಗೆ-ಶ್ರೇಯಾಂಸನಿಗೆ ಅಂದಿರಿ ?"

"ಎಲ್ಲರಿಗೂ....!"

ಕುಳಿತಲ್ಲಿಯೇ ತಣ್ಣಗಾದಳು ಸರಸವ್ವ. ಈ ನುಡಿಯನ್ನು ಸುಂದರವ್ವ ಕೇಳಿದರೆ ಮನೆಯಲ್ಲೊಂದು ವಾಗ್ಯುದ್ಧವೇ ನಡೆಯುವದೆಂದು ಬಲ್ಲಳವಳು. ಹಂಚಿನೊಳಗಿನ ರೊಟ್ಟಿಗೆ ನೀರನ್ನು ಸವರುತ್ತ,

"ಸುಂದರಕ್ಕ ಕೇಳಿದರೆ ಏನೆಂದಾಳು? ಅವರು ಮನೆಯಲ್ಲಿ ಇಷ್ಟಂತ ನೆಟ್ಟಗಾಗೇದ....ಈಗ ಬಸದಿಯಿಂದ ಬರುವ ಹೊತ್ತಾಗೇದ ಸುಮ್ಮನಿರಿ!"

ಗಂಡನಿಡೆ ವಿವೇಕವನ್ನು ಬೋಧಿಸುತ್ತ ನುಡಿದಳು ಸರಸವ್ವ.

"ಅವರಿಗೇನು ಅಂದೆ ನಾನು?"

"ಇಲ್ಲ ಆದರೆ ಒಳ್ಳೆಯದ್ದೇ ಆಯಿತಲ್ಲ...!" ಸ್ವಲ್ಪ ತಡೆದು ಸರಸವ್ವ ಮುಂದೆ ಮಾತನಾಡಿದಳು "ಸುಮ್ಮನೆ ಮನೆಯೊಳಗೆ ಸಿಡಿಪಿಡಿ ಮಾಡಿದರೆ ಏನಾಗೋದು? ಸಮಾಧಾನದಿಂದ ಏನಾದರೂ ಒಂದು ವಿಚಾರಿಸಿ, ದಂಡೆಗೆ ಹಚ್ಚಬೇಕು....ನಾಳಿನ ಜೀವನಕ್ಕೆ ಹುಡುಗನ ಮನ ನೆಲೆಗಾಣಿ ಅಂದರೆ ಎಲ್ಲ ನಿಮ್ಮ ಮನಸಿನ ತಕ್ಕ ಆಗತದ. ಮನೆಯೊಳಗ ಹೆಂಡತಿ ಬಂದ ಮೇಲೇನು ಹಾಗೆ ನಾಲೆ ಕಲಿಯುತ್ತ ತಿರುಗತಾನ ಶ್ರೇಯಾಂಸ?"

ಹೆಂಡತಿಯ ಈ ಸಂಭಾಷಣೆ ಬಾಳಪ್ಪನಿಗೂ ಸಮ್ಮತವೆನಿಸಿತು. ಮನೆಯಲ್ಲಿ ತಾನು ತನ್ನ ಹೆಂಡತಿಯನ್ನುಳಿದರೆ ಪ್ರಪಂಚದ ಬಗ್ಗೆ ವಿಚಾರ ಮಾಡುವವರು ಇನ್ನಾರೂ ಇಲ್ಲವೆಂದು ಅನಿಸಿತವನಿಗೆ. ಏನದಕ್ಕಂತಲೋ ಇಂದು ಸರಸವ್ವ ತನಗೆ ಬಹಳ ಹತ್ತಿರದವಳೆಂದು ಬಾಳಪ್ಪನಿಗೆ ತೋರಿತು. ಒಲೆಯ ಮುಂದೆ ಹೋಗಿ ಕುಳಿತು ಹೃದಯ ಬಿಚ್ಚಿ ಹೇಳತೊಡಗಿದ.

"ಹುಡುಗನಿಗೆ ಬಡವಿಯ ಕೆಲಸ ಆಗದು....ಎಲ್ಲಿಯಾದರೂ ಬೇರೆ ಕೆಲಸವನ್ನೇ ನೋಡಬೇಕು....ಅವನ ಮನಸ್ಸಿನೊಳಗೆ ಏನಿದೆ ಯಾದರೂ ಕೇಳಿ ತಿಳಿದುಕೊಳ್ಳಬೇಕು....ನಾವು ನೂರು ಮಾತನಾಡಿ ಅವನು ಒಂದು ಮಾತನ್ನು ಆಡುವ....ಏನು ಮಾಡುವುದು ತಿಳಿಯದಂತಾಗಿದೆ...."

ಬಾಳಪ್ಪನ ಮಾತು ಹೀಗೆ ಎಷ್ಟು ಹೊತ್ತು ನಾಗುತ್ತಿದ್ದಿತೋ ಏನೋ! ಆದರೆ ಹೊರಗಿನಿಂದ ಸುಂದರವ್ವ ಬಂದು ಅದಕ್ಕೆ ತಡೆ

ಯೊಡ್ಡಿದಳು. ಸ್ವಲ್ಪ ಸಂಕೋಚದಿಂದಲೇ ಬಾಳಪ್ಪ ಎದ್ದು ಹೊರಗೆ ನಡೆದ. ಆದರೂ ಸುಂದರವ್ವ ಗುಡುಗದೆ ಬಿಡಲಿಲ್ಲ.

"ಅಂಗೀ ಹಾಕಿಕೊಂಡೇ ಒಲೆಯೊಳಗಿನ ಬೆಂಕಿ ತಗೋಲಿಕ್ಕೆ ಹೋಗಿದ್ದೆ ಏನು ? ಮಡಿ ಇಲ್ಲ, ಮೈಲಿಗೆ ಇಲ್ಲ....ಸುಟ್ಟ ಬರಲಿ ? ಈ ಶಂಬಾಕ ಸೇದೋದಕ್ಕ...."

"ಇಲ್ಲ ಅಕ್ಕ, ನಾನೇ ತೆಗೆದು ಕೊಟ್ಟೆ...."

"ಚೆಲೋ ! ಒತ್ತಿ ಕಾಟಕ್ಕೆ ಬೇಲೀ ಸಾಕ್ಷಿ....!"

ಸರಸವ್ವ ಅಷ್ಟಕ್ಕೆ ಸುಮ್ಮನಾದಳು. ಮಗ ಮದುವೆಗೆ ಬಂದರೂ ಅತ್ತಿಗೆಯ ಬಾಯಿಂದ ಇಂಥ ಮಾತುಗಳನ್ನು ಒಮ್ಮೊಮ್ಮೆ ಕೇಳ ಬೇಕಾಗುವದಲ್ಲ ಎಂದು ಮನದಲ್ಲಿಯೇ ನೊಂದುಕೊಂಡಳು. ನಾಳೆ ಮನೆಯಲ್ಲಿ ಸೊಸೆ ಬಂದರೆ ಇವರೊಡನೆ ಹೊಂದುವುದು ಹೇಗವ್ವ, ಈಗಿನವರು ಹೊಸ ಹುಡಿಗೆಯರು ! ಹಸಿಯ ಬಟ್ಟೆಯನ್ನು ಉಟ್ಟು ಒಲೆಯ ಮುಂದೆ ನಮ್ಮಂತೆ ಅಡಿಗೆಗೆ ಹೇಗೆ ಕುಳಿತಾರು....ಏನು ಕತೆ.... ಎಲ್ಲ ಬಿಡಲಾರದ ಒಗಟವೇ. ಈ ವಿಚಾರ ಅವಳ ತಲೆಯಲ್ಲಿ ನಡೆದಿರು ವಾಗಲೇ ಅವಳ ಮುಖದಿಂದ ನಿಟ್ಟುಸುರೊಂದು ಹೊರಗೆ ಹೋಯಿತು, ಒಲೆಯಲ್ಲಿ ಬೆಂಕಿ ಪ್ರಜ್ವಲಿಸಿತು.

ಇದನ್ನೆಲ್ಲ ನೆನೆದಾಗ ಸರಸವ್ವಗೆ ಮಗನ ಮದುವೆ ಇನ್ನೂ ಕೆಲವು ದಿನ ಮುಂದೆ ಹೋದರೂ ನೆಟ್ಟಗೆ ಎಂದೆನಿಸುತ್ತಿತ್ತು !

* * * *

ಮನೆಯಲ್ಲಿ ಇಷ್ಟೆಲ್ಲ ತಾಕಲಾಟ ತಿಕ್ಕಾಟಗಳು ನಡೆದಿದ್ದರೂ ಶ್ರೇಯಾಂಸನ ಮನಸ್ಸೇನೂ ಕಲಕಿರಲಿಲ್ಲ. ಅವನು 'ವಿಜಯ ಸಾಮ್ರಾಜ್ಯ' ನಾಟಕವನ್ನು ಬರೆದು ಮುಗಿಸುವ ವಿಚಾರದಲ್ಲಿಯೇ ಇದ್ದ. ಆದಕ್ಕಾಗಿ ಆ ಕಾಲದ ಸಂಸ್ಕೃತಿ ಸಾಹಿತ್ಯಗಳನ್ನು ಅಭ್ಯಾಸಿಸ ತೊಡಗಿದ್ದ. ಇಂಥ ಸಂದರ್ಭದಲ್ಲಿ ಹಳ್ಳಿಯಲ್ಲಿದ್ದ ಅವನಿಗೆ ತೊಂದರೆ ಬಹಳ. ಆದರೂ ಕೈಗೆ ಸಿಕ್ಕನ್ಟು ಸಾಧನೆಗಳನ್ನೇ ಚೆನ್ನಾಗಿ ಉಪ

ಯೋಗಿಸಿಕೊಂಡರೆ ಯಾವ ಕೆಲಸವೂ ಒಳ್ಳೆಯದಾಗುವದೆಂದು ನಂಬಿದ್ದನಾತ. ಅದಕ್ಕಾಗಿ 'ವಿದ್ಯಾರಣ್ಯ ಚರಿತ್ರ', ಗಳಗನಾಥರು ಬರೆದ ವಿಜಯನಗರ ರಾಜ್ಯಕ್ಕೆ ಸಂಬಂಧಿಸಿದ ಕಾದಂಬರಿಗಳನ್ನೆಲ್ಲ ಮತ್ತೊಮ್ಮೆ ಓದಿದ. ಅದೇ ಕಾಲಕ್ಕೆ ಅವನಿಗೆ ಆತ್ಮಾರಾಮ ಮಾಸ್ತರರು ಬರೆದ 'ವಿದ್ಯಾರಣ್ಯ' ನಾಟಕವನ್ನು ಓದಬೇಕೆಂದೆನಿಸಿತು. ಅದಕ್ಕಾಗಿ ಅವರ ಹತ್ತಿರ ಹೋಗಿ ಕೇಳಿದ :

"ನಿಮ್ಮ ನಾಟಕಗಳ ಹಸ್ತಪ್ರತಿ ಎಲ್ಲಿವೆ ?"

"ಏಕೆ ? ಅದರೊಳಗಿಂದ ಈಗೇನು ಬೇಕಾಯಿತು ?"

" 'ವಿದ್ಯಾರಣ್ಯ' ನಾಟಕ ನನಗೆ ಓದಬೇಕಾಗಿದೆ...."

ಸ್ವಲ್ಪ ಹೊತ್ತು ಆತ್ಮಾರಾಮ ಮಾಸ್ತರರು ಸುಮ್ಮನೆ ಕುಳಿತರು. ಅವರ ಮುಖವನ್ನು ಚಿಂತೆಯು ಆವರಿಸಿತ್ತು. ಕಳೆದುಕೊಂಡ ಮಕ್ಕಳ ನೆನಪು ಆದಾಗ ತಂದೆಯ ಮುಖ ಹೇಗಾಗುವದೋ ಹಾಗೆ ಆತ್ಮಾರಾಮರ ಮುಖಚರ್ಯೆಯಾಗಿತ್ತು.

"ಯಾಕೆ, ಎಲ್ಲಿ ಹೋದುವು ?"

ಶ್ರೇಯಾಂಸ ಆತುರದಿಂದ ಕೇಳಿದ.

"ನೀರಲಕಟ್ಟಿ ಮಾಸ್ತರರು ಹಿಂದಕ್ಕೆ ಒಯ್ದವರು ಕೊಡಲಿಲ್ಲ ವಲ್ಲ !"

"ಆಂ !"

"ಹೌದು ; ಆಗ ನನಗೂ ನಾಟಕದ ಹುಚ್ಚು ಸೇರಿತ್ತಲ್ಲ ! ಅದೇ ಕಾಲಕ್ಕೆ ಅವರು ನನ್ನ ನಾಟಕದ ಪ್ರತಿಗಳ ವಿಷಯಕ್ಕೆ ಮಾತೆತ್ತಿದ್ದರು ನಾನೇ – ಸುಮ್ಮನಾಗಿದ್ದೆ. ಮುಂದೆ ಈ ಊರಿಂದ ಅವರು ವರ್ಗ ಆಗಿ ಹೋಗುವಾಗ ದುಂಬಾಲು ಬಿದ್ದು, ಆ ಗಂಟನ್ನೇ ತಕ್ಕೊಂಡು ಹೋಗಿ ಬಿಟ್ಟರು !"

"ನನಗೊಂದೂ ಗೊತ್ತಿಲ್ಲವಲ್ಲ ಮಾಸ್ತರರೆ ?"

"ಕೇಳಿದವರಿಗೆ ಇಲ್ಲೆನ್ನುವ ಸ್ವಭಾವ ನನ್ನದಲ್ಲ. ಕೊಟ್ಟುಬಿಟ್ಟೆ.

ಮುಂದೆ ಬೇಡಲಿಕ್ಕೆ ಕಳಿಸಿದರೆ ಅಲ್ಲಿಟ್ಟಿರುವೆ ಇಲ್ಲಿಟ್ಟಿರುವೆ ಎಂದು ಹೇಳಿದರು.... ಈಗ ಅದೂ ಮಾತಿಲ್ಲ.... ನಿನಗೂ ಹೇಳಿ ಯಾಕೆ ಮನಸ್ಸನ್ನು ನೋಯಿಸುವುದೆಂದು ಹೇಳಲಿಲ್ಲ...."

"ಈಗ ನಾನು ಹೋಗಿ ಇನ್ನೊಮ್ಮೆ ಅವರನ್ನು ಕೇಳಲೇ ?"

"ಫಲವಿಲ್ಲ ! ಏತಕ್ಕೆ ಬಾಯಿ ತೆರೆಯಬೇಕು ? ಆಗಾಗ ತಮ್ಮ ಶಾಲೆಯಲ್ಲಿ ಒಂದೊಂದು ನಾಟಕ ಆಡಿಸುವರಂತೆ. ಅದೂ ನೋಡಿದವರು ಹೇಳುತ್ತಾರೆ. ಅದನ್ನೇ ಕೇಳಿ ಸಂತೋಷಪಟ್ಟರಾಯಿತು !"

"ಅಂತೂ ನಾಟಕದ ಪ್ರತಿಗಳು ಕಳೆದಿಲ್ಲವಲ್ಲ !"

ಸ್ವಲ್ಪ ಉತ್ಸಾಹಿತನಾಗಿಯೇ ಕೇಳಿದ ಶ್ರೇಯಾಂಸ. ಅವನ ಮನಸ್ಸು ಅವುಗಳನ್ನು ತಿರುಗಿ ಸಂಪಾದಿಸುವ ಹವಣಿಕೆಯಲ್ಲಿತ್ತು.

"ಕಳೆಯುವದಿಲ್ಲ ಅವರು ! ಅವರಿಗೂ ನಾಟಕವೆಂದರೆ ಪ್ರಾಣ. ಆದರೆ ಅಭ್ಯಾಸವೆಂದರೆ ಅವರಿಗಾಗದು. ಏನೋ ಒಂದು ಮೋಜು, ಹಬ್ಬ ಎಂದು ವರ್ಷದಲ್ಲಿ ಮನಬಂದಾಗ ನಾಲ್ಕು ದಿನ ಆಡಿಸಿ ಬಿಡುವವರು. ಕಲೆಗೆ ತಪಸ್ಸು ಬೇಕೆಂಬುದು ಅವರಿಗೆ ಗೊತ್ತೇ ಇಲ್ಲ.... ಕಲೆಯಿಂದ ಬರುವ ಕೀರ್ತಿಗೆ ಮಾತ್ರ ಹಾತೊರೆಯುತ್ತಾರೆ...."

ಇಷ್ಟು ಹೇಳಿ ಆತ್ಮಾರಾಮರು ತಮ್ಮ ನೊಂದ ಹೃದಯವನ್ನು ಹಗುರಗೊಳಿಸಿಕೊಂಡರು !

ಆದರೆ ಈ ಸುದ್ದಿಯನ್ನು ಕೇಳಿ ಶ್ರೇಯಾಂಸನ ಹೃದಯವು ಭಾರವಾಯಿತು. ತನ್ನ ಗುರುಗಳ ನಾಟಕಗಳನ್ನೆಲ್ಲ ಒಳ್ಳೆಯ ಪ್ರತಿ ಮಾಡಿ ಇಡಬೇಕು, ಓದಿ ಹೇಳಬೇಕು. ಸಾಧ್ಯವಾದಂತೆ ಆಡಿ ತೋರಿಸಬೇಕು ಎಂದೇನೇನೋ ಆಲೋಚಿಸಿದ್ದ. ಅವನ ಆಲೋಚನೆಯ ಬುಡಕ್ಕೇನೇ ಕೊಡಲಿಯ ಏಟು ಬಿದ್ದಂತಾಯಿತೀಗ. ಆದರೂ ಅವನಿಗೆ ಸುಮ್ಮನೆ ಕೂಡಲಿಕ್ಕೆ ಆಗಲಿಲ್ಲ. ಒಂದೆರಡು ದಿನಗಳಲ್ಲಿ ಸಮಯ ಸಾಧಿಸಿ ಸೀರಲಕಟ್ಟಿ ಮಾಸ್ತರರು ಕೆಲಸ ಮಾಡುತ್ತಿರುವ ಊರಿಗೆ ಹೋದ.

"ಬಾರೋ ಶ್ರೇಯಾಂಸ, ಈಗ ಯಾವ ಕಡೆಯಿಂದ ಬಂದೆ?" ಎಂದು ನೀರಲಕಟ್ಟಿ ಮಾಸ್ತರರು ಸ್ವಾಗತಿಸಿದರು.

ಶ್ರೇಯಾಂಸನು ಹೋಗುವ ಹೊತ್ತಿಗೆ ನೀರಲಕಟ್ಟಿ ಮಾಸ್ತರರು ಸಾಲೆಯಲ್ಲಿಯೇ ನಾಟಕದ ತಾಲೀಮನ್ನು ಹೂಡಿದ್ದರು. ಊರೊಳಗಿನ ತಬಲಾ ಬಾರಿಸುವವನೊಬ್ಬನನ್ನು ಕರೆಯಿಸಿದ್ದರು. ತಾವೇ ಸ್ವತಃ ಪೇಟಿಗೆ ಕುಳಿತಿದ್ದರು. ಹುಡುಗರನ್ನು ಮುಂದೆ ಕೂಡಿಸಿ ಕೊಂಡು, ರಾಗ ತಾಲಗಳಿಗೆ ಅನುಸರಿಸಿ ಹಾಡಲಿಕ್ಕೆ ಹೇಳುತ್ತಿದ್ದರು. ವಿದ್ಯಾರ್ಥಿಗಳ ತಪ್ಪನ್ನು ತಿದ್ದುತ್ತಿದ್ದರು :

"ಸಾಲೆಯೊಂದು ನಾಟಕ ಮನೆಯೇ ಆಗಿದೆಯಲ್ಲ ಮಾಸ್ತರರೆ!"

ಶ್ರೇಯಾಂಸ ಸಹಜ ಕೇಳಿದ.

ನೀರಲಕಟ್ಟಿ ಮಾಸ್ತರರು ಉತ್ತರವನ್ನೇನೂ ಹೇಳಲಿಲ್ಲ.

"ನಮ್ಮ ಸಾಲೆ ಈಗ ಬಹಳ ಮುಂದೆ ಬಂದಿದೆ. ಈ ಮಾಸ್ತರರು ನಮ್ಮೂರಿಗೆ ಬಂದಂದಿನಿಂದ....ಯಾವುದಕ್ಕೂ ಅನುಮಾನವೇ ಇಲ್ಲ?" ತಲೆಯ ಮೇಲೆ ಹೇಣುದ್ದ ಬೆಳೆದ ಕ್ರಾಪಿನ ಕೂದಲನ್ನು ತೀಡುತ್ತ ತಬಲಾ ಬಡಿಯುವವ ಹೇಳಿದ.

"ನಮ್ಮಲ್ಲಿದ್ದಾಗಲೂ ಹೀಗೇ?"

ಶ್ರೇಯಾಂಸನೂ ಪ್ರಶಂಸೆಯ ದನಿ ಎಳೆದ.

"ಈಗ ಸಹಜ ಬಂದಿದ್ದೆಯೋ?"

ನೀರಲಕಟ್ಟಿಯವರ ಬಾಯಿಂದ ಮತ್ತೆ ಮಾತು ಹೊರಬಿದ್ದಿತು.

"ಇಲ್ಲ; ನಾಟಕದ ಪ್ರತಿಗಳನ್ನು ಕೇಳಲಿಕ್ಕೆ ಬಂದಿದ್ದೆ...."

ಶ್ರೇಯಾಂಸನಿಗೆ ನೀರಲಕಟ್ಟಿಯವರು ಉತ್ತರ ಕೊಡುವಷ್ಟರಲ್ಲಿ ಉಳಿದ ಸಹಾಯಕ ಶಿಕ್ಷಕರೇ ಕೇಳಿದರು.

"ನಿಮ್ಮ ಊರಲ್ಲಿ ಯಾವುದನ್ನು ಆಡಿಸಬೇಕೆಂದಿರುವಿರಿ?"

"ಆಡಿಸಲಿಕ್ಕೆ ಅಲ್ಲ...."

ಶ್ರೇಯಾಂಸನ ಮಾತನ್ನು ನಡುವೆಯೇ ತಡೆದು ನೀರಲಕಟ್ಟಿ

ಯುವಕರು ಅಂದರು :

"ಯಾರು ? ಆತ್ಮಾರಾಮು ಹೇಳಿದ್ದಾನ ಹೌದ ?"

ಶ್ರೇಯಾಂಸ ಏನೂ ಹೇಳಲಿಲ್ಲ.

"ಉದ್ಯೋಗ ಇಲ್ಲ ಅವನಿಗೆ...."

ಆಢ್ಯತೆಯಿಂದ ಮಾತನಾಡಿ, ಸ್ವರಪೆಟ್ಟಿಗೆಗೆ ಕೈ ಹಾಕಿದರು ನೀರಲಕಟ್ಟಿ. ಹುಡುಗನೊಬ್ಬ 'ಬೇಸೂರ'ದಲ್ಲಿ ಕಿರುಚತೊಡಗಿದ. ಅದಕ್ಕೆ। ಹೊಂದಿಸಿಕೊಳ್ಳಲೆಂದು ತಬಲೆಯ ಮೇಲೆ ಏಟು ಕೊಟ್ಟ ಇನ್ನೊಬ್ಬಾತ.

"ಹೀಗೆ ಬರೆದ ನಾಟಕಗಳನ್ನು ಸಿಕ್ಕ ಸಿಕ್ಕವರಿಗೆ ಕೊಡುತ್ತ ಹೋಗಿದ್ದರೆ ನಮ್ಮ ಮಾಸ್ತರರ ಮನೆಯೊಳಗ ಇಷ್ಟು ನಾಟಕಗಳೇ ಉಳಿಯುತ್ತಿರಲಿಲ್ಲ !"

ವಿದ್ಯಾರ್ಥಿಗಳು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು ! ಗೆಲುವಿನ ಕೊಂಕು ದೃಷ್ಟಿಯೊಂದನ್ನು ನಡು ನಡುವೆ ಶ್ರೇಯಾಂಸನ ಕಡೆಗೆ ಬೀರುತ್ತಿದ್ದರು !

ಶ್ರೇಯಾಂಸನಿಗೆ ಹೆಚ್ಚು ಹೊತ್ತು ಅಲ್ಲಿ ಕೂಡಲಿಕ್ಕೆ ಆಗಲಿಲ್ಲ, ಮೆಲ್ಲನೆ,

"ನಾನು ಹೋಗುತ್ತೇನೆ ಮಾಸ್ತರರೆ !"

ಎಂದು ಹೇಳಿ ಎದ್ದ.

"ಈಗ ಚಹ ಬರುವ ಹೊತ್ತಾಗೇದ ತಗೊಂಡು ಹೋಗಲ್ಲ ?"

ನೀರಲಕಟ್ಟಿ ಮಾಸ್ತರರ ಮಾತಿಗೆ ಶ್ರೇಯಾಂಸ ಉತ್ತರವನ್ನೇನೂ ಹೇಳಲಿಲ್ಲ. ಆ ನಾಲ್ಕು ಗೋಡೆಗಳ ಆವಾರದಲ್ಲಿಯ ಹೊಲಸು ಹವೆಯೊಳಗಿಂದೊಮ್ಮೆ ಯಾವಾಗ ಹೊರಗೆ ಹೋಗುವೆನೋ ಎಂದೆನಿಸಿತ್ತವನಿಗೆ. ಭಾರವಾದ ಹೃದಯದಿಂದ ಎದ್ದ. ಅಲ್ಲಿಯ ವಾತಾವರಣ ಅಸಹ್ಯವಾಗಿತ್ತವನಿಗೆ. ಎದುರಿಗಿನ ಗೋಡೆಯ ಕಡೆಗೆ ನೋಡಿದಾಗ ನಗುವ ಮಹಾತ್ಮರ ಮುಖವೊಂದು ಶ್ರೇಯಾಂಸನಿಗೆ

ಕಂಡಿತು. ಇಂದೇಕೋ ಆ ನಗೆಯಲ್ಲಿಯೂ ಶ್ರೇಯಾಂಸನಿಗೆ ಕೊಂಕು ಕಂಡಿತು. ಅಂದರೂ ಆ ಭಾವಚಿತ್ರದಿಂದ ಅವನ ವಿಚಾರದಲ್ಲಿ ಒಂದು ಕ್ರಾಂತಿಯೇ ಉತ್ಪನ್ನವಾಯಿತಾ ಕ್ಷಣ. ಮಹಾತ್ಮರ ಧೀರ ದಾರಿಯನ್ನು ನೆನೆದ. ಕೂಡಲೆ ತಿರುಗಿನಿಂತು ಶ್ರೇಯಾಂಸ ಮಾಸ್ತರರಿಗೆ ಕೇಳಿದ.

"ನಮ್ಮ ಮಾಸ್ತರರು ಬರೆದ ನಾಟಕಗಳನ್ನೆಲ್ಲ ಕೊಡಿರಿ. ಅವುಗಳನ್ನು ಒಯ್ಯಲೆಂದೇ ಬಂದಿರುವೆ...."

ಧ್ವನಿಯು ನಿರ್ಧಾರದಿಂದ ಕೂಡಿದ್ದಿತು.

"ನಿಮ್ಮ ಮಾಸ್ತರರನ್ನೇ ಕಳಿಸು ಹೋಗು!"

ಅಷ್ಟೇ ಗಡಸು ದನಿಯಲ್ಲಿ ನೀರಲಕಟ್ಟಿ ನುಡಿದರು.

"ಇಲ್ಲ; ಈಗ ನಾನು ತಕ್ಕೊಂಡೇ ಹೋಗುವವ...."

ಹಟಕ್ಕೆ ತಿರುಗಿತ್ತು ಶ್ರೇಯಾಂಸನ ದನಿ. ಕಣ್ಣುಗಳು ಕೆಂಪಾಗಿದ್ದವು. ಮುಖ ಬೆವೆತಿದ್ದಿತು. ತುಟಿಗಳು ಅದರುತ್ತಿದ್ದವು.

"ನೀ ಯಾರು?"

ನೀರಲಕಟ್ಟಿ ಮಾಸ್ತರರು ಎದ್ದು ನಿಂತರು.

"ಈಗ ಸುಮ್ಮನೆ ಅವರನ್ನು ಕೆರಳಿಸಬೇಡ ಹೋಗು....! ಈಗ ಅವರ ತಲೆಗೆ ನಾಟಕದ ನಾದ ಏರಿದೆ. ಇನ್ನೆರಡು ದಿನಗಳಲ್ಲಿ ಲೋಕಲ್ ಬೋರ್ಡಿನ ಪ್ರೆಸಿಡೆಂಟ ಸಾಹೇಬರು ಬರುವವರಿದ್ದಾರೆ. ಇನ್ನೊಮ್ಮೆ ನಿಮ್ಮ ಮಾಸ್ತರರ ಪತ್ರ ತಕ್ಕೊಂಡು ಸಮಾಧಾನದೊಳಗೆ ಇದ್ದಾಗ ಬಂದು ಭೆಟ್ಟಿಯಾಗು. ಯಾವುದಾದರೊಂದು ನಾಟಕ ಕೊಟ್ಟಾರು...."

ಎಂದು ಶ್ರೇಯಾಂಸನನ್ನು ಸಮಾಧಾನಗೊಳಿಸುತ್ತ ಉಳಿದ ಶಿಕ್ಷಕರು ಹೊರಗೆ ಹಾಕಿದರು.

"ಎಲ್ಲಿಂದ ಬಂದನೋ ಶಿವಪೂಜೆಯೊಳಗ ಕರಡಿ ಬಿಟ್ಟಂತೆ?"

ಅಪಹಾಸ್ಯದ ಸ್ವರದಲ್ಲಿ ಯಾರೋ ಹಿಂದೆ ನುಡಿದ ಮಾತೊಂದು ಶ್ರೇಯಾಂಸನ ಕಿವಿಗೆ ಬಂದು ಅಪ್ಪಳಿಸಿತು.

೧೧

ಸಂಜೆಗೆ ಶ್ರೇಯಾಂಸ ಮನೆಗೆ ಬರುವಷ್ಟರಲ್ಲಿ ಮನೆಯಲ್ಲಿ ತಂದೆ ತಾಯಂದಿರಿಬ್ಬರೂ ಇರಲಿಲ್ಲ. ಮನೆಯ ಮುಂದೆ ಎತ್ತಿನ ಬಂಡಿಯೂ ಕಾಣಲಿಲ್ಲ. ಮನೆ ಸ್ವಲ್ಪ ಭಣಭಣವಾಗಿ ತೋರಿತು. ಪಡಸಾಲೆಯಲ್ಲಿ ದೀಪವೊಂದನ್ನು ಉರಿಸಿ ಸುಂದರವ್ವ ಒಬ್ಬಳೇ ಕುಳಿತಿದ್ದಳು. ಅವಳೂ ಬಹಿರ್ ದೃಷ್ಟಿ ಶೂನ್ಯಳಾಗಿ ಜಪದಲ್ಲಿ ತೊಡಗಿದ್ದಳು. ನಾಯಿ-ಬೆಕ್ಕುಗಳು ಮನೆಯಲ್ಲಿ ಹೊಕ್ಕರೆ ಸದ್ದಾಗಲೆಂದು ತಲೆಬಾಗಿಲನ್ನು ಅರ್ಧ ಮುಚ್ಚಿದ್ದಳು. ರಭಸದಿಂದ ಬಾಗಿಲವನ್ನು ತೆರೆದುದಕ್ಕಾಗಿ ತನ್ನಲ್ಲಿಯೇ ತಾನು ಹೆದರಿ ಶ್ರೇಯಾಂಸ ಪಡಸಾಲೆಯಲ್ಲಿ ಒತ್ತಟ್ಟಿಗೆ ಸ್ವಲ್ಪ ಹೊತ್ತು ನಿಂತ. ಸೋದರತ್ತೆಯು ಮಿಸುಕಲಿಲ್ಲ. ಅವಳ ಜಪವು ಇದೀಗ ಆರಂಭವಾದಂತೆ ತೋರಿತು. ಮೆಲ್ಲನೆ ಕಳ್ಳ ಹೆಜ್ಜೆಯಿಂದ ಇನ್ನಿಷ್ಟು ಒಳಗೆ ಹೋಗಿ ಇನ್ನೊಂದು ದೀಪ ಹಚ್ಚಿಕೊಳ್ಳಬೇಕೆಂದ. ಆದರೆ ಮರುಕ್ಷಣದಲ್ಲಿ ಮತ್ತೊಂದು ತಪ್ಪನ್ನು ತಾನು ಮಾಡುತ್ತಿದ್ದೆನಲ್ಲ ಎಂದು ನೆನೆದ. ಹಾಗೆಯೇ ತುದಿಗಟ್ಟೆಯ ಕಡೆಗೆ ಸಾಗಿ, ಅಲ್ಲಿಟ್ಟ ತಂಬಿಗೆಯೊಳಗಿನ ನೀರಿನಿಂದ ಮೆಟ್ಟುಗಲ್ಲಿನ ಮೇಲೆ ನಿಂತು, ಕಾಲು ತೊಳೆದುಕೊಂಡು ಪಡಸಾಲೆಗೆ ತಿರುಗಿ ಹೋದ. ಆಮೇಲೆ ಧೈರ್ಯದಿಂದ ದೀಪವೊಂದನ್ನು ಹೊತ್ತಿಸಿಕೊಂಡು ಬಂದು, ಕೈಯಲ್ಲಿಯ ಪುಸ್ತಕವನ್ನು ತೆರೆದು ಓದುತ್ತ ಕುಳಿತ. ಮರುಕ್ಷಣದಲ್ಲಿ ಅವನೂ ವಾಗ್ದೇವಿಯ ಧ್ಯಾನದಲ್ಲಿ ಮಗ್ನನಾಗಿಬಿಟ್ಟ.

ಜಪವನ್ನು ಮುಗಿಸಿಕೊಂಡು ಸುಂದರವ್ವ ಕಣ್ದೆರೆದಾಗ ಇನ್ನೂ ಶ್ರೇಯಾಂಸ ಓದುತ್ತಲೇ ಇದ್ದ. 'ಅರಹಂತ! ಅರಹಂತ!' ಎಂದು

ಹೇಳಿ ಸುಂದರವ್ವ ಸದ್ದು ಮಾಡಿದಳು. ಅದು ಶ್ರೇಯಾಂಸನ ಕಿವಿಯನ್ನು ಸೇರಲಿಲ್ಲ. ಹಾಗೇ ಒಂದರ ತರುವಾಯ ಇನ್ನೊಂದು ಪುಟವನ್ನು ತಿರುವಿ ಹಾಕುತ್ತ ಸಾಗಿದ್ದ ಅವನ ತನ್ಮಯತೆಯನ್ನು ಕಂಡು ಇಂದು ಸುಂದರವ್ವನಿಗೂ ಬೆರಗುಂಟಾಯಿತು. ದೇವರ ಧ್ಯಾನದಲ್ಲಷ್ಟೇ ತನ್ಮಯತೆ-ಶಾಂತಿಗಳಿವೆಯೆಂದು ಭಾವಿಸಿದ್ದ ಅವಳು ಶ್ರೇಯಾಂಸನ ಈ ಏಕಾಗ್ರತೆಯನ್ನು ಕಂಡು ಅಚ್ಚರಿಗೊಂಡಳು. ಹಾಗೆಯೇ ಅವನ ಕಡೆಗೆ ನೋಡುತ್ತ ಕುಳಿತಳು. ತುಂಬಿದ ಮುಖ, ವಿಶಾಲವಾದ ಹಣೆ, ನಸು ಬೆಳೆದು ಹಿಂದೆ ಬಾಗಿದ ತಲೆಗೂದಲು, ನಡುದಲೆಯಲ್ಲಿ ಚಂಡಿಕೆ ಎಲ್ಲವೂ ಸುಂದರವಾಗಿ ಕಂಡವು ಅವಳಿಗೆ ಇಂಥ ಚೆಲುವು! ಸೋದರಳಿಯನ ವಿಷಯದಲ್ಲಿ ಒಂದು ಕ್ಷಣ ಹೆಮ್ಮೆಯುಂಟಾಯಿತವಳಲ್ಲಿ. ಹಾಗೆಯೇ ಹೆಣ್ಣು ಕೂಸೊಂದನ್ನಾದರೂ ತಾನು ಹೆರಬಾರದಿತ್ತೇ?-ಎಂದು ಚಿಂತಿಸಿದಳು. ಈ ಜೀವ ಇನ್ನಾವಳ ಪಾಲಾಗುವುದೋ! ಆ ಮಹಾದೇವಿ ಎಂಥವಳೋ!

"ಎಲ್ಲಿ ಹೋದರಿವರು?"

ಶ್ರೇಯಾಂಸನ ಈ ಮಾತು ಸಂದರವ್ವನ ವಿಚಾರವನ್ನು ತಡೆಯಿತು.

"ನಿನ್ನ ಲಕ್ಷ್ಯ ಮನೆಯ ಕಡೆಗೆಲ್ಲಿ ಇರುತ್ತದೆ? ಮಧ್ಯಾಹ್ನ ಊಟ ಮಾಡಿ ಹೋದವರ ದೀಪ ಹೊತ್ತಿಸಿದ ಮೇಲೆಯೇ ಮನೆಗೆ ಮರಳಿ ಬಂದಿರುವಿ..."

"ಸ್ವಲ್ಪ ಅಭ್ಯಾಸವಿತ್ತು...."

"ಎಂದಿರುವದಿಲ್ಲ....?" ಸ್ವಲ್ಪ ತಡೆದು "ನಡೆ ಮೊದಲು ಏನಾದರೂ ತುಸು ತಿಂದು ನೀರು ಕುಡಿಯು ನಡೆ....ಯಾವಾಗ ಉಂಡಿದಿ: ಎಲ್ಲಿ ನೀರು ಕುಡಿದೀಯೋ ಇಲ್ಲೋ....ನಡೆ. ಇಂದು ಅವರದೂ ಹೊಸ ಇಲ್ಲ....ನನ್ನದೂ ಇಲ್ಲ....ನಿಮ್ಮ ಅವ್ವ ಮುಂಜಾನೆ ಏನಾದರೂ ಮಾಡಿ ಇಟ್ಟಿದ್ದು, ಅದ ಏನು ನೋಡಬೇಕು...." ಎಂದು ಶ್ರೇಯಾಂಸನ

ಮುಂದಿನ ದೀಪವನ್ನು ಎತ್ತಿಕೊಂಡು ಒಳಗಿನ ಮನೆಗೆ ನಡೆದಳು. ಹೋಗ ಹೋಗುತ್ತ

"ಇಂಥಾ ಹೊತ್ತಿನೊಳಗ ನಿನಗೆ ಊಟಕ್ಕೆ ಹಾಕೋದು ಅಂದರೆ ನನಗೂ ಅರ್ಧ ಅಶುಭ ಕರ್ಮ ತಟ್ಟದ ಬಿಡುವದಿಲ್ಲ. ಆದರೆ ಏನು ಮಾಡಲಿ. ಇಂದೊಂದು ದಿನ ಸರಸಾ ಊರೊಳಗ ಇಲ್ಲ. ಹಾಕತೇನಿ.... ನಾಳೆ ನಿನ್ನ ಹೆಂಡತಿಯೋ....ಮತ್ತಾರೋ ಇಕ್ಕುವರು...."

ಎಂದು ಬೇಕೆಂತಲೇ ಹೆಂಡತಿಯ ಮಾತನ್ನು ಎತ್ತಿದಳು ಸುಂದರವ್ವ.

ಹೆಂಡತಿ ಎಂಬ ಶಬ್ದ ಕಿವಿಗೆ ಬಿದ್ದೊಡನೆಯೇ ಶ್ರೇಯಾಂಸ ಚಮಕಿತನಾದ. ಹಸಿವೆಯೂ ಹಾರಿತು. ಮದುವೆಯ ವಿಷಯದಲ್ಲಿ ಈ ಮೊದಲೇ ಮನೆಯಲ್ಲಿ ನಡೆದ ಮಾತುಕತೆಗಳೆಲ್ಲ ಅವನ ಸ್ಮೃತಿ ಪಥದಲ್ಲಿ ಬಂದು ಹೋದವು.

"ಅದಕ್ಕೇ ಹೋಗಿರುವರೇನು ಇಂದು ಮತ್ತೆ !"

ಭಯ ಬೇಸರ ಮಿಶ್ರಿತ ಸ್ವರದಲ್ಲಿ ಶ್ರೇಯಾಂಸ ಆತುರದಿಂದ ಸೋದರತ್ತೆಗೆ ಕೇಳಿದ.

"ಅಹುದು; ಇಂದೇನೋ ನಿಶ್ಚಯ ಮಾಡಲಿಕ್ಕೆ ಬಾ ಎಂದು ಹೇಳಿ ಕಳಿಸಿದ್ದರು....ಅದಕ್ಕೇ ಬಂಡೀ ಹೂಡಿಕೊಂಡು ಹೋಗಿರುವರು !"

"ಯಾರು ಯಾರು ಹೋಗಿದ್ದಾರೆ ?"

"ಹಿಂದಿನ ಮನೆಯ ನೇಮಗೌಡ ಅವನ ಹೆಂಡತಿ ಮರುದೇವಿ, ನಿಮ್ಮ ಅವ್ವ, ಅಪ್ಪ, ಐದು ಜನರು ಆಗಬೇಕೆಂದೂ ಆಯಿತು, ಸಂಗಡ ಪಂಡಿತ ಇದ್ದಂತೂ ಆಯಿತು ಅಂತ ಜಂಬೂಕುಮಾರನನ್ನು ಕರೆದು ಕೊಂಡು ಹೋಗಿದ್ದಾರೆ...."

"ನನಗೆ ಒಂದೂ ಗೊತ್ತಿಲ್ಲವಲ್ಲ !"

"ಏನು ಗೊತ್ತಿರೋದು ?"

"ನನ್ನ ಮದುವೆಯ ವಿಷಯ ನನಗೇ ಗೊತ್ತಿರಬಾರದೆ ಅತ್ತೆ ?"

"ನಿನಗೆ ಏನು ಗೊತ್ತಿಲ್ಲ ? ಹುಡಿಗೆ ಯಾವುದು ಗೊತ್ತಿದೆ. ಈ ವರ್ಷ ಮದುವೆ ಆಗುವದೆಂಬುದೂ ಗೊತ್ತಿದೆ. ಇದಕ್ಕೂ ಹೆಚ್ಚಿನದು ನಿನಗೇನು ಗೊತ್ತಿರುವುದು. ಕೊಡ ಕೊಳ್ಳುವುದರಲ್ಲಿ ಅವರಿದ್ದಾರೆ ನಿನ್ನ ಹಿರಿಯರಿದ್ದಾರೆ....!"

ಶ್ರೇಯಾಂಸ ಸಿಟ್ಟು ಬೆಂಕಿಯಾದ. ಏನು ಮಾತನಾಡಬೇಕೆಂದೂ ತಿಳಿಯದಾಯಿತವನಿಗೆ. ನಿನ್ನೆ ಸಾಯಂಕಾಲ ನೇಮಗೌಡ ತಮ್ಮ ಮನೆಗೆ ಬಂದುದೂ ಇಂದು ಊಟ ತೀರಿಸಿಕೊಂಡು ಹೊರಡುವದೆಂದು ತಂದೆಯೊಡನೆ ಹೇಳಿ ಹೋದುದೂ ಅರ್ಥವಾಯಿತೀಗ. ಮುಂಜಾನೆ ಮನೆಯಲ್ಲಿ ನಡೆದ ಗಡಬಡಿಯ ಗುಟ್ಟೂ ಗೊತ್ತಾಯಿತು. ಇಷ್ಟೆಲ್ಲ ನನ್ನ ಎದುರಿಗೇ ನಡೆಯುತ್ತಿದ್ದೂ, ನಾನು ಸುಮ್ಮನೆ–ನನಗೆ ಒಂದೂ ಸಂಬಂಧವಿಲ್ಲದಂತೆ ಇದ್ದುಬಿಟ್ಟೆನಲ್ಲ. ನನ್ನ ಪುಸ್ತಕವಾಯಿತು ನಾನಾಯಿತು ಎಂದರೆ ಇದೇನು ಗೊಂದಲಕ್ಕಿಟ್ಟುಕೊಂಡಿತು. ಹೋದವರು ಇಂದು ಏನು ಮಾಡಿಕೊಂಡು ಬರುವರೊ....! ಏನಾದರೂ ಆಗಿ ಕೊಡ ಕೊಳ್ಳುವುದರಲ್ಲಿ ಈ ಸಂಬಂಧ ತಪ್ಪಿದರಂತೂ ಚೆನ್ನಾಗಿಯೇ ಹೋಯಿತು. ಇಲ್ಲವಾದರೆ.

"ಮಾಮಾ ಎಲ್ಲಿ ಹೋದ ?"

ತ್ರಾಸಿತ ಸ್ವರದಲ್ಲಿ ಶ್ರೇಯಾಂಸ ಕೇಳಿದ. ನೀರಿನಲ್ಲಿ ಮುಳುಗುವವನ ಕೈಗೆ ಸಿಕ್ಕ ವಸ್ತುವನ್ನು ಹಿಡಿಯಲಿಕ್ಕೆ ಹವಣಿಸುವಂತೆ ಆಗ ಶ್ರೇಯಾಂಸನ ಸ್ಥಿತಿಯಾಗಿತ್ತು.

"ಅವರನ್ನು ತಕ್ಕೊಂಡು ಏನು ಮಾಡುವಿ ? ಬಸ್ತಿಯೊಳಗೆ ಶಾಸ್ತ್ರ ಓದುತ್ತ ಕುಳಿತಿರಬೇಕು. ಇಂದು ಯಾರೋ ನಿರ್ಗ್ರಂಥ ಸ್ವಾಮಿಗಳು ಬೇರೆ ಬಂದಾರ ಕಾಣತದ...." ತುಸು ತಡೆದು ಸುಂದರವ್ವ ಹೇಳತೊಡಗಿದಳು.... "ನನಗೆ ಹೋಗಬೇಕೆಂದು ಮನಸ್ಸು ಇತ್ತು.... ನಾನೇನು ನಿಯಮ ತಕ್ಕೊಂಡಾಕೆ ಅಲ್ಲ ಏನಲ್ಲ. ಆದರೂ 'ಇಂಥ

ಸಂಸಾರದ ವಿಚಾರದಲ್ಲಿ ನೀನು ಮನಸ್ಸು ಹಾಕಬೇಡ' ಅಂತ ಅವರು ಹೇಳಿದರು. ಅದಕ್ಕ ಸುಮ್ಮನಿರಬೇಕಾಯಿತು." ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಅಡುಗೆಯ ಮನೆಯಲ್ಲಿ ಶ್ರೇಯಾಂಸನಿಗೆ ಕೂಡಲಿಕ್ಕೆ ಮಣೆ ಹಾಕಿದಳು ಸುಂದರವ್ವ. ತಾಟು ಇಟ್ಟಳು. ಮನಸ್ಸಿಲ್ಲದ ಮನಸ್ಸಿನಲ್ಲಿ ಶ್ರೇಯಾಂಸನೂ ಬಂದು ಕುಳಿತ. ತಾಟಿನಲ್ಲಿ ದಸವಿಯನ್ನು ಮುರಿದು ಹಾಕುತ್ತ ಮತ್ತೆ ಸುಂದರವ್ವ ಮಾತನ್ನು ಮುಂದರಿಸಿದಳು "ಮದುವೆ ಮಾಡೋದು ಮಾಡಲಿಕ್ಕೇ ಬೇಕು. ಅವಕ್ಕೆ ನನ್ನದೇನೂ ಅಡ್ಡಿಯಿಲ್ಲ. ಆದರೆ ನಿನಗೆ ಒಪ್ಪುವಂಥ ಹುಡುಗಿ ಇರಬೇಕು....ಆ ಲಕ್ಷ್ಮಿಯನ್ನು ತಂದ ನಿನ್ನ ಜೊತೆಗೆ ನಿಲ್ಲಿಸಿದರ ಚಂದ ಕಾಣುವದಿಲ್ಲ. ಅವರು ಖರ್ಚು ಏನೋ ಮಾಡತಾರ. ಆ ದುಡ್ಡು ಏನು ಇಂದು ಬಂದು ನಾಳೆ ಹೋಗುವಂಥವು....ಹೆಣ್ಣು ಉಳಿಯುವಂಥದು....ಧರ್ಮ ಯಾವಾಗಲೂ ಹೇಳತದ 'ಅಳಿಯುವಂಥದನ್ನು ಬಿಟ್ಟು ಉಳಿಯುವಂಥದನ್ನ ಪಡೆಯಿರಿ' ಅಂತ. ಅಂದರೆ ಸಂಸಾರ ಬಿಡಿರಿ. ಮುಕ್ತಿ ಪಡಿರೀ ಅನ್ನೋದು ಆ ಅರ್ಥ. ಪ್ರಪಂಚದಲ್ಲಿ ಇದ್ದವರಿಗೆ ಈ ಅರ್ಥ. ಧರ್ಮ ಎಲ್ಲರನ್ನು ಕಾಪಾಡತದ" ದನಿಯನ್ನು ಸರಿಪಡಿಸಿಕೊಂಡು "ಆದರೆ ನಿನ್ನ ಮಾವನ ಮನೆಯೊಳಗೆಂದರೆ ಏನೂ ಕೇಳಬೇಡ. ಬಸ್ತಿ ಮುಖ ಎಂದು ನೋಡಿರುವರೋ ಏನೋ! ಹೊರಗೆ ತಂಬಿಗೆ ತಕ್ಕೊಂಡು ಹೋದರೆ ಮನೆಯೊಳಗೆ ಬಂದು ತಿಕ್ಕುವದಿಲ್ಲ ಕೂಡ. ಹಾಗೇ ಹಂಡೆಯೊಳಗೆ ಅದ್ದುವರು....ಹುಡಿಗೆ ನೋಂಪಿ ತಗೊಂಡದ್ದೋ ಇಲ್ಲೋ ಏನೋ! ಆಗ್ಗ ಹತ್ತು ವರ್ಷದ ಹೆಣ್ಣು ಮಗಳು ಆಗಿದ್ದಳು. ನಮ್ಮಲ್ಲಿ ದೊಡ್ಡ ಬಸ್ತಿಯೊಳಗಿನ ಪಂಚ ಕಲ್ಯಾಣ ಪೂಜೆಯ ಹೊತ್ತಿಗೆ ಅಂದರೆ....ಆದರೆ ಇನ್ನೂ ಪಂಚ ನಮೋಕಾರ ಮಂತ್ರ, ಇಪ್ಪತ್ತುನಾಲ್ಕು ತೀರ್ಥಂಕರರ ಹೆಸರೂ ದರ್ಶನ ಪಾಠ ಒಂದೂ ಬರತಿರಲಿಲ್ಲ. ಇಂಥಾ ಮಾಯವ್ವನ ತಂದು ಮನೆಯೊಳಗೆ ಹಾಕಿಕೊಂಡ ಏನು ಮಾಡೋದು? ಆದರೆ ನನ್ನದೇನೂ

ನಡೆಯುತದ ? ಮಾಡುವವರು ಅವರು, ಬಿಡುವವರು ಅವರು. ನಿಮ್ಮ ಅಪ್ಪ ಅಂತೂ ಯಾವಾಗ ಮದುವೆ ಮಾಡಿ ನೂಲೊಳಗೆ ಕುಳಿತೇನೆಂದು ಹಂಬಲಿಸುತ್ತಿರುವಳು "

ಸುಂದರಪ್ಪ ತನ್ನ ಹೃದಯವನ್ನೆಲ್ಲ ತೋಡಿಕೊಂಡಳು ತಾಟ ನೊಳಗೆ ರೊಟ್ಟಿಯನ್ನು-ಹಾಲಿನಲ್ಲಿ ನಾಡಿದುವು-ಮುರಿದು ಹಾಕಿದ. ಅವಳಿಗೆ ಕಾಯಿಪಲ್ಲೆಯನ್ನು ಹಾಕಬೇಕೆಂಬ ಅರಿವೂ ಕೂಡ ಇರಲಿಲ್ಲ. ಶ್ರೇಯಾಂಸನ ಸ್ಥಿತಿಯೂ ಕೂಡ ಹಾಗೆಯೇ ಆಗಿತ್ತು. ಇಬ್ಬರೂ ಸುಮ್ಮನೆ ಕುಳಿತರು. ಇಬ್ಬರ ನಡುವೆಯೂ ದೀಪವೊಂದು ಉರಿಯುತ್ತಿದ್ದಿತು. ಅದರ ಕಾಡಿಗೆ ನೇರವಾಗಿ ಮೇಲಕ್ಕೆ ಹೋಗುತ್ತಿದ್ದಿತು, ಮನೆಯನ್ನೆಲ್ಲ ವ್ಯಾಪಿಸುತ್ತಿದ್ದಿತು. ಸದ್ದಿಲ್ಲದೆ ಕಳ್ಳ ಬೆಕ್ಕೊಂದು ಅಡಿಗೆಯ ಮನೆಯಲ್ಲಿ ಸುಳಿಯಿತು. ದೂರದಲ್ಲಿ ನಿಂತು ಮೈ ಮುರಿದುಕೊಂಡಿತು, ಆಕಳಿಸಿತು, ಬಾಲವನ್ನು ನೆಕ್ಕಿಕೊಂಡಿತು. ಮನೆಯವರು ಇದನ್ನೆಲ್ಲ ನೋಡುತ್ತ ಸುಮ್ಮನೆ ಇದ್ದುದನ್ನು ಕಂಡು 'ಮ್ಯಾವ್' ಎಂದು ಸಣ್ಣ ದನಿಯಲ್ಲಿ ಒದರಿ ತನ್ನ ಇರವನ್ನು ಅರುಹಿತು. ಆದರೆ ತಮ್ಮ ತಮ್ಮ ವಿಚಾರದಲ್ಲಿ ಮಗ್ನರಾದ ಯಾರ ಕಿವಿಗೆ ಇಂಥ ಕಿರುದನಿ ಹೋದೀತು ? ತಮ್ಮ ಮುಂದೆ ಇಟ್ಟಿರುವ ಊಟವನ್ನು ಕೂಡ ಕದ್ದು ತಿಂದರೂ ಮಿಸುಕುವಂತಿರಲಿಲ್ಲ ಅವರು !

ಲಕ್ಷ್ಮಿಯು ಸರಸವ್ವನ ಸಂಬಂಧಿತರಲ್ಲಿ ಒಬ್ಬಳು. ಆಗಾಗ ಅವಳ ತಂದೆ ತಾಯಂದಿರು ಬಾಳಪ್ಪನ ಮನೆಗೆ ಬಂದು ಹೋಗುತ್ತಿದ್ದರು. ತಮ್ಮಲ್ಲಿ ಜಾತ್ರೆ ಉತ್ಸವಗಳಾದರೆ ಸರಸವ್ವನನ್ನೂ ಕರೆದೊಯ್ಯುತ್ತಿದ್ದರು. ಶ್ರೇಯಾಂಸನೂ ಒಂದೆರಡು ಸಲ ಅವರಲ್ಲಿ ಹೋಗಿ ಬಂದಿದ್ದ. ಲಕ್ಷ್ಮಿಯೂ ಹತ್ತೆಂಟು ಸಲ ಇವರಲ್ಲಿ ಬಂದು ಹೋಗಿದ್ದಳು. ಈಗ ಅದೇ ಹುಡಿಗೆಯನ್ನು ಶ್ರೇಯಾಂಸನಿಗೆ ನಿಶ್ಚಯಿಸುವುದೆಂದು ಗೊತ್ತಾಗಿ ಬಿಟ್ಟಿತು. ಎರಡೂ ಮನೆತನಗಳು ಪೂರ್ವಪರಿಚಿತವಾದವುಗಳಾದುದರಿಂದ ಇದರಲ್ಲಿ ವಿಶೇಷ ತೊಡಕೂ ಉಂಟಾಗಲಿಲ್ಲ. ಎರಡೂ

ಮನೆತನಗಳ ಹಿರಿಯರು ಕೂಡಿ ಒಮ್ಮೆ ಈಗಾಗಲೇ ಮಾತನಾಡಿದ್ದರು. ಇಂದು ಕೊನೆಯ ನಿಶ್ಚಯವಾಗುವದಿದ್ದಿತು.

ಇದನ್ನೆಲ್ಲ ಶ್ರೇಯಾಂಸ ಇಲ್ಲಿಯ ವರೆಗೆ ಸುಮ್ಮನೆ ನೋಡುತ್ತ ಇದ್ದ. ಇಂಥ ವಿಚಾರಗಳಲ್ಲಿ ತಾನು ಮನಸ್ಸು ಹಾಕುವುದೇ ತಪ್ಪೆಂದು ತಿಳಿದುಕೊಂಡಂತಿದ್ದನಾತ. ತಾನು ಎಲ್ಲದಕ್ಕಿಂತಲೂ ಬೇರೆಯಾಗಿದ್ದೇನೆಂದೇ ಅವನ ತಿಳುವಳಿಕೆ. ತನ್ನ ಜೀವನ ವಿಶಿಷ್ಟತರವಾದುದು, ತಾನು ಬದುಕಿದ್ದುದು ಬೇರೆ ಯಾವುದೋ ಒಂದು ಕೆಲಸ ಮಾಡಲಿಕ್ಕೇ ಎಂದವನ ಧೃಢವಾದ ನಂಬಿಕೆ. ಇಂಥ ಚಿಕ್ಕಪುಟ್ಟ ವಿಚಾರಗಳನ್ನೇ ತಲೆಯಲ್ಲಿ ಹಾಕಿಕೊಳ್ಳಬಾರದೆಂದು ನಿಶ್ಚಯಿಸಿದ್ದ. ತನ್ನ 'ವಿಜಯ ಸಾಮ್ರಾಜ್ಯ' ನಾಟಕದ ಗುಂಗಿನಲ್ಲಿಯೇ ಇದ್ದ. ಅದರಿಂದ ಸುಂದರವ್ವ ಬಹಳ ಹೇಳಿದರೂ ಹೆಚ್ಚಿಗೇನೂ ಉಪಯೋಗವಾಗಲಿಲ್ಲ. ಆ ಕ್ಷಣಕ್ಕಷ್ಟು ವಿಚಾರಕ್ಕೆ ಎಡೆಕೊಟ್ಟಂತೆ ಮಾಡಿ, ತನ್ನ ದಾರಿಯಿಂದ ತಾನು ಸಾಗಿದ.

ಸೋದರಳಿಯನ ಈ ನಿಷ್ಕ್ರಿಯತೆ ಸುಂದರವ್ವನಿಗೆ ಸೇರಲಿಲ್ಲ. ಆ ವಿವಾಹದ ವಿಷಯದಲ್ಲಿ ತನ್ನ ಅಸಮ್ಮತಿಯನ್ನು ಮೊದಲಿನಿಂದಲೂ ತೋರುತ್ತ ಬಂದಿದ್ದಳು. ಆದರೆ ಇಂಥ ವಿಷಯದಲ್ಲಿ ಅವಳು ಗಟ್ಟಿಸಿ ಹೇಳುವಂತೆ ಇರಲಿಲ್ಲ. ಅದರಿಂದ ಲಕ್ಷ್ಮಿಯೊಡನೆ ಶ್ರೇಯಾಂಸನ ವಿವಾಹ ನಿಶ್ಚಯವಾಗಿ ಹೋಯಿತು. ಚಿಕ್ಕಮಕ್ಕಳು ಗೊಂಬೆಯ ಮದುವೆಮಾಡಿ ಆಡುವಂತೆ ಹಿರಿಯರು ಶ್ರೇಯಾಂಸನ ಮದುವೆಯ ಆಟ ಆಡಿದರು. ಮದುವೆಯಲ್ಲಿ ಮಾವನಿಂದ ಬರತಕ್ಕ ಉಡುಗೊರೆ ಉಂಗುರಗಳೂ ಶ್ರೇಯಾಂಸನಿಗೆ ಬಂದುವು. ಅವುಗಳ ಕಡೆಗೆ ಅವನ ಗಮನವೇ ಇರಲಿಲ್ಲ. ಕೊಟ್ಟಷ್ಟು ತಕ್ಕೊಂಡು ಸುಮ್ಮನಿದ್ದ. ಸಿಟ್ಟು ಸೆಡವುಗಳ ಗೊಡವೆಗೂ ಹೋಗಲಿಲ್ಲ. ಅದನ್ನು ಬಾಳಪ್ಪನೇ ಮಾಡಬೇಕಾಯಿತು; ಅಪ್ತರೊಡನೆ ಜಗಳಾಡಿ ಹೆಚ್ಚಿನ ಉಂಗುರವೊಂದನ್ನು ಮಗನಿಗಾಗಿ ದೊರಕಿಸಿದ ಸುಂದರವ್ವನನ್ನು ನೂಲಿನಲ್ಲಿ ಕೂಡಿ

ಸರಸವ್ವ ಮದುವೆಗೆ ಅವಳ ಸಮ್ಮತಿಯನ್ನು ಪಡೆಯುವ ಶಾಸ್ತ್ರ ಮಾಡಿದಳು; ಆಪ್ತರು ಕೊಡುವ ಉಡುಗೊರೆಗಳಿಗೆಲ್ಲ ಸುಂದರವ್ವನನ್ನೇ ತೋರಿಸಿ ಅವಳ ಮನಸ್ಸನ್ನು ಸಮಾಧಾನಗೊಳಿಸಿದಳು. ಸೋದರಳಿಯನ ಲಗ್ನದಲ್ಲಿ ಜರದಂಚಿನ ಸೀರೆಯನ್ನುಟ್ಟುಕೊಂಡು ತಿರುಗಾಡಿ, ಆಪ್ತರ ಮುಂದೆ ತನ್ನ ಹಿರಿಮೆಯನ್ನು ಪ್ರದರ್ಶಿಸಿ ಸುಂದರವ್ವನೂ ಎರಡು ದಿನ ಸಂತಸ ಪಡದೆ ಇರಲಿಲ್ಲ. ತಮಗೆ ಒಳ್ಳೆಯ ಅಳಿಯ ಸಿಕ್ಕನೆಂದು ಹೆಣ್ಣಿನ ಕಡೆಯವರೂ ಹಿರಿಹಿರಿ ಹಿಗ್ಗಿದರು. ತಂದೆಗಿಂತ ಮಗನೇ ಹೆಚ್ಚು ತಿಳುವಳಿಕೆಯುಳ್ಳವನೆಂದು ಅವರು ಆಡಿಕೊಂಡರು.

"ನನ್ನ ಬಂಗಾರದಂಥ ಮಗನಿಗೆ ತಕ್ಕ ಉಡುಗೊರೆ ಆಪ್ತರು ತರಲಿಲ್ಲ. ನನ್ನ ಮಗ ಮುಲ್ಕೀ ಪರೀಕ್ಷೆ ಪಾಸಾಗಿದ್ದಾನೆ. ತಿಳಿದವ ಸಿದ್ದಾನೆ. ಮಂಗನ ಕೈಯಲ್ಲಿ ಮಾಣಿಕ ಕೊಟ್ಟಂತಾಯಿತು. ಶ್ರೇಯಾಂಸನ ಯೋಗ್ಯತೆ ಇವರಿಗೇನು ಗೊತ್ತು ? ಹೆಂಡತಿಯ ಮಾತು ಕೇಳಿ ಅವಸರ ಮಾಡಿ ಈ ಹೆಣ್ಣನ್ನು ಮಾಡಿದೆ. ನನ್ನ ಮಗನಿಗೆ ಬೇಕಾದವರು ಹೆಣ್ಣು ಕೊಡುತ್ತಿದ್ದರು !"

ಎಂದು ಬಾಳಪ್ಪ ಕೊನೆಯವರೆಗೂ ಹಾರಾಡಿದ. ಜಗಳವಿಲ್ಲದ ಮದುವೆ ಚೆಂದವಲ್ಲ ಎನ್ನುವ ನ್ಯಾಯಕ್ಕನುಸರಿಸಿ ಇದೆಲ್ಲ ಸಾಗಿತೆಂದು ತಿಳಿದ ಜನರೇ ಬಹಳ. ಅಂತೂ ಇದ್ದೊಬ್ಬ ಮಗನ ಮದುವೆಯನ್ನು ನಾಲ್ಕು ಜನರು ಹೌದೆನ್ನುವಂತೆ ಮಾಡಿದರೆಂದು ಊರ ಜನರು ಮೆಚ್ಚಿ ಆಡಿದರು.

ಇದನ್ನು ಕೇಳಿ ಪದ್ಮಪ್ಪ ಸಂತಸ ಪಟ್ಟಿರಬೇಕು. ಆದರೆ ಮದುವೆಯ ಗೊಂದಲವೆಲ್ಲ ಮುಗಿಯುವವರೆಗೆ ಆತ ಊರಲ್ಲಿಯೇ ಇರಲಿಲ್ಲ. ಜನರು ಆಡಿಕೊಂಡರೂ ಆತ ಸ್ವವಸಿದ್ಧಿಯ ಯಾತ್ರೆಗೆಂದು ನಾಲ್ಕೆಂಟು ದಿನ ಹೊರಗೇ ಹೋಗಿಬಿಟ್ಟಿದ್ದ. ಮನೆಗೆ ತಿರುಗಿ ಬಂದ ಮೇಲೆಯೂ ಮದುವೆಯ ವಿಷಯ ತಿಳಿದುಕೊಳ್ಳಲಿಕ್ಕೂ ಕುತೂಹಲ ತೋರಿಸಲಿಲ್ಲ. ಆದರೆ ಸರಸವ್ವ ಅವನಿಗಾಗಿ ತೆಗೆದಿಟ್ಟ ಗೋದಿಯ

ಅಕ್ಕಿ, ಒಟ್ಟುಗಳಿಂದ ಸವಿಯಾದ ಅಡಿಗೆಯನ್ನು ಮಾಡಿ ಊಟಕ್ಕೆ ಹಾಕಿದಳು. ಪದ್ಮಪ್ಪನಿಗೆ ನಮಸ್ಕಾರ ಮಾಡಲಿಕ್ಕೆ ಶ್ರೇಯಾಂಸನಿಗೆ ಹೇಳಿದಳು.

ಶ್ರೇಯಾಂಸ ಸಂಕೋಚದಿಂದ ಪದ್ಮಪ್ಪನ ಪಾದಕ್ಕೆರಗಿದ.

"ಧರ್ಮವನ್ನು ಕಾಪಾಡಿಕೊಂಡು ಹೋಗು!"

ಎಂದಿಷ್ಟೇ ಪದ್ಮಪ್ಪ ನುಡಿದು ಸುಮ್ಮನಾದ.

'ನಾಲ್ಕು ಹೆಣ್ಣು ನಾಲ್ಕು ಗಂಡುಮಕ್ಕಳನ್ನು ಹಡೆ ಎಂದು ಆಶೀರ್ವದಿಸುವದನ್ನು ಬಿಟ್ಟು ಇಲ್ಲದ್ದೊಂದು ಮಾತು ಇವರದು. ಅವನ ಅವ್ವ ಅಪ್ಪನ ಮನಸ್ಸಿಗೆ ಬರುವದಿಲ್ಲ. ಧರ್ಮ ಗಿರ್ಮ ಅಂತ ಇವರು ಹೇಳತಾರೆ. ವ್ಯವಹಾರ ಅಂಬುದೂ ಸ್ವಲ್ಪು ಇಲ್ಲ....ನಮ್ಮವರಿಗೆ' ಎಂದು ಮನದಲ್ಲಿಯೇ ಸುಂದರವ್ವ ಅಂದುಕೊಂಡಳು. ಆ ಕ್ಷಣದಲ್ಲಿ ಸೋದರಳಿಯನ ಮಕ್ಕಳನ್ನು ಎತ್ತಿಕೊಳ್ಳುವ ಹಂಬಲ ಆವಳ ಹೃದಯನಲ್ಲಿಯೂ ಹುಟ್ಟದೆ ಇರಲಿಲ್ಲ. ಆಗ ಇನ್ನೂ ಲಕ್ಷ್ಮಿ ಮೈನೆರೆದು ಬರಲಿಕ್ಕೆ ಒಂದು ವರ್ಷವಾದರೂ ಬೇಕು. ಮುಂದೆ ಕೂಸು ಕುನ್ನಿ ಅಂತ ಎರಡು ವರುಷ, ಅಲ್ಲಿಯವರೆಗೆ ಯಾರು ಬದುಕುವರೋ ಯಾರು ಸಾಯುವರೋ!

ಸಂಸಾರದ ಅಸ್ಥಿರತೆಯ ಕಲ್ಪನೆ ಬಂದೊಡನೆಯೇ ತನ್ನ ಪತಿಯ ಮಾತೇ ಸಮರ್ಪಕವೆನಿಸಿತವಳಿಗೆ. ಆತ್ಮಕಲ್ಯಾಣದ ದಾರಿಯನ್ನೇ ಅವರು ಎಂಥ ಪ್ರಸಂಗದಲ್ಲಿಯೂ ನುಡಿಯುವರೆಂದು ಭಾವಿಸಿದಳು. ಆದರದಿಂದ ಗಂಡನ ಕಡೆಗೆ ನೋಡಿದಳು. 'ಯಾವ ಜನ್ಮದಲ್ಲಿ ಪುಣ್ಯ ಮಾಡಿ ಇಂಥವರ ಕೈಹಿಡಿದಿರುವೆನೋ! ನನ್ನ ಭಾಗ್ಯ!'

ಪತಿಯ ಮೇಲಿನ ಭಕ್ತಿ ಮರುಕ್ಷಣದಲ್ಲಿ ಜಿನಪತಿಯ ಮೇಲೆ ತಿರುಗುವುದು. ಮನದಲ್ಲಿಯೇ ಕವಿ ದ್ವಾರಪಾಲನ ಪದನನ್ನು ನುಡಿಯುವಳು. 'ದುಃಖ ಮಾಡತಾಳ ರಾಜಮತಿ ಕೂತ, ವನಕ ಹೊರಟದಾರ ಪತಿ ನೇಮಿನಾಥ; ಆಗಲಿಲ್ಲ ನಮ್ಮ ಗೂಡ ಜನುಮ, ಮುಸುಕ

ಹಾಕಿದೆ ಮಾಯದ ಜಾಲ....' ರಾಜಕುಮಾರಿ ರಾಜಮತಿಯ ವೈರಾಗ್ಯಚಿತ್ರ ಸುಂದರಪ್ಪನ ಕಣ್ಣು ಮುಂದೆ ಸುಳಿದುಹೋಗುವುದು. ಗಿರನಾದ ಗುಡ್ಡ ಬಗೆಗಣ್ಣಿನೆದುರು ಬಂದು ನಿಲ್ಲುವುದು. ಮರುಕ್ಷಣ ದಲ್ಲಿ 'ಅರಹಂತ! ಅರಹಂತ!' ಎಂದು ಉಚ್ಚರಿಸಿ, ಜಪದಲ್ಲಿ ತೊಡ ಗುವಳು, ಕಣ್ಣು ಮುಚ್ಚುವಳು. ಆಗ ಗಳಿಗೆಯೊಂದು ನಿಮಿಷದಂತೆ ಜಾರುವುದು....ಸುಂದರಪ್ಪನಿಗೆ!

೧೨

ಮದುವೆಯಿಂದ ಶ್ರೇಯಾಂಸನ ನಿತ್ಯಜೀವನದಲ್ಲೇನೂ ಬದಲಾಗಲಿಲ್ಲ. ಮೊದಲಿನಂತೆಯೇ ತನ್ನ ಅಭ್ಯಾಸ - ವಾಚನ ಮೊದಲಾದವುಗಳನ್ನು ಸಾಗಿಸಿದ್ದ. ನಾಲ್ಕುದಿನ ಮದುವೆಯ ಕಾರ್ಯಕ್ರಮವು ತನ್ನ ದಿನದ ಕಾರ್ಯಕ್ರಮದಲ್ಲಿ ವ್ಯತ್ಯಯ ತಂದಿತೆಂದಿಷ್ಟೇ ಭಾವಿಸಿಕೊಂಡ. ಅದನ್ನು ತುಂಬಿಕೊಳ್ಳಲಿಕ್ಕೆಂದು ಮೊದಲಿಗಿಂತ ಹೆಚ್ಚಿನ ಆಸಕ್ತಿಯಿಂದ ತನ್ನ ಓದನ್ನು ಸಾಗಿಸಿದ.

ಮಗನಿಗೆ ಇನ್ನು ಹೊಣೆಗಾರಿಕೆಯ ಅರಿವು ಆಗುವುದು. ತಾನೇ ಮನೆ, ಹೊಲ ಎಂದು ಕೆಲಸಕ್ಕೆ ಬರುವ - ಎಂದು ಭಾವಿಸಿದ ಬಾಳಪ್ಪನ ತಿಳುವಳಿಕೆ ತಪ್ಪಾಯಿತು. ಹಗಲಿರುಳೂ ಶ್ರೇಯಾಂಸ ಮನೆಯಿಂದ ಹೊರಗೇ ಇರತೊಡಗಿದ. ಹೊಸದಾಗಿ ಹೆಂಡತಿ ಬಂದುಹೋದಳು. ಆದರ ಕಡೆಗೂ ಅವನ ಗಮನವಿಲ್ಲ. ಬಾಳಪ್ಪನಿಗೆ ಮಗನ ಈ ನಡತೆಯನ್ನು ಕಂಡು ಬಹಳ ಆಶ್ಚರ್ಯವಾಯಿತು. ತಾನು, ಮೊದಲು ಸಲ ಸರಸವ್ವ ಮನೆಗೆ ಬಂದಾಗ ಮೂರು ದಿನ ಮನೆಬಿಟ್ಟು ಹೊರಗೇ ಹೋಗಿರಲಿಲ್ಲ. ಗೆಳೆಯರೆಲ್ಲ ನಗೆಯಾಡಿದ್ದರು....ಆದರೆ ಶ್ರೇಯಾಂಸನಲ್ಲಿ ಅಂಥ ಆತುರವೇನೂ ಕಂಡುಬರಲಿಲ್ಲ ಬಾಳಪ್ಪನಿಗೆ. ಬೆರಗಿನಿಂದಲೇ ಅಕ್ಕನ ಎದುರಿಗೆ ನುಡಿದ,

"ಹೆಂಡತಿ ಬಂದು ಹೋದರೂ ಶ್ರೇಯಾಂಸನ ಲಕ್ಷ್ಯ ಮನೆಯ ಕಡೆಗೆ ಇಲ್ಲ...."

"ಇಲ್ಲದ್ದೊಂದು ಹೇಳುವವ ನೀನು. ಇನ್ನು ಮೊನ್ನಿನ ಹುಡುಗರು....ಪುಸ್ತಕ ಬಿಟ್ಟು ಇನ್ನೊಂದು ಗೊತ್ತಿಲ್ಲ ಅವನಿಗೆ. ಎತ್ತು ಇಲ್ಲ,

ಕೊಡಿಸುವಿಯೇನು? ನೇಗಿಲ ಎಲ್ಲಿ ಹೋದೀತು... ಆದಂತೆ ನಿನ್ನದೂ ಒಂದು ಮಾತೇ!"

ಸುಂದರಪ್ಪನ ಮಾತಿಗೆ ಬಾಳಪ್ಪ ಆಗ ಮತ್ತೆಗೆ ಸುಮ್ಮನಾದರೂ ಶ್ರೇಯಾಂಸನ ಮನಸ್ಸನ್ನು ಸಂಸಾರದ ಕೆಲಸಗಳ ಕಡೆಗೆ ಎಳೆಯದೆ ಬಿಡುತ್ತಿರಲಿಲ್ಲ. ಆದರೆ ಮನೆತನದ ಯಾವ ಕೆಲಸಗಳಲ್ಲಿಯೂ ಶ್ರೇಯಾಂಸನಲ್ಲಿ ಆಸಕ್ತಿ ತೋರದು. ಆದರೂ ತಂದೆ ಮನೆಗೆ ಹತ್ತಿರದ ನೀರನ್ನೆಲ್ಲ ತರುವ ಕೆಲಸ ಶ್ರೇಯಾಂಸನಿಗೆ ಒಪ್ಪಿಸಿಬಿಟ್ಟ. ಅದರಂತೆ ದನಗಳಿಗೆ ಹತ್ತುವನ್ನು ಕಣಿಕೆ ಕಡಿಯುವುದೂ, ನೀರು ಕುಡಿಸುವುದು ಶ್ರೇಯಾಂಸನ ಕೆಲಸಗಳಲ್ಲಿಯೇ ಸೇರ್ಪಡೆಯಾದುವು. ಹೊಲಕ್ಕಂತೂ ಬರುವದಿಲ್ಲ, ಊರೊಳಗೆ ಇದ್ದುಕೊಂಡೇ ಮಗನು ಇಷ್ಟು ಕೆಲಸ ಮಾಡಿದರೆ ಸದ್ಯ ಸಾಕೆಂದು ಬಾಳಪ್ಪನ ವಿಚಾರ. ಹೀಗೆ ಒಂದೊಂದಾಗಿ ಅವನ ಮೇಲೆ ಕೆಲಸದ ಹೊರೆಯನ್ನು ಹೊರಿಸುತ್ತ ಹೋದರೆ ಮುಂದೆ ಎಲ್ಲವೂ ಸುಸೂತ್ರವಾಗಿ ಹೋಗುವುದೆಂದು ಲೆಕ್ಕಹಾಕಿದ್ದ. ಕೊರಳು ಹಿಡಿದುಕೊಳ್ಳುವ ಹೊಸ ಹೋರಿಗಳನ್ನು ಪಳಗಿಸಿ ರೂಢಿಯಿದ್ದ ಬಾಳಪ್ಪನಿಗೆ ಬುದ್ಧಿಯುಳ್ಳ ಮಗನನ್ನು ಹಾದಿಗೆ ಹಚ್ಚುವದೇನೂ ಆಗ ಬಿಗಿಯಾದ ಕೆಲಸವೆನಿಸಲಿಲ್ಲ.

ಶ್ರೇಯಾಂಸನ ಕೆಲಸವನ್ನು ಕಂಡರೆ ನಾಲ್ಕು ದಿನ ರಾಗ ಯಾರಿಗೂ ಎನ್ನಿಸುವಂತಿತ್ತು. ನಿತ್ಯ ಬೆಳಗಿನಲ್ಲಿ ಎರಡು ಕೊಡ ಬಿಸಿನೀರು ತರುವ. ಆಮೇಲೆ ಎಲ್ಲರ ಸ್ನಾನ ತೀರಿದಮೇಲೆ ಬಳಕೆಯ ನೀರನ್ನು ಸಮೀಪದ ಬಾವಿಯಿಂದ ಸೇದಿಹಾಕುವ. ಅಷ್ಟರಲ್ಲಿ ಹೊತ್ತೇರುವುದು. ಸ್ವಲ್ಪ ಊಟ ತೀರಿಸಿಕೊಂಡು ಹೊರಗೆ ಹೋಗುವ. ಅನಂತರ ಅವನು ಮನೆಗೆ ಮರಳಿ ಬರುವುದು ಸಂಜೆಯ ನಾಲ್ಕು ಗಂಟೆಯ ಸುಮಾರಿಗೇನೇ. ಬಂದವನೆ ಹತ್ತೆಂಟು ಸಿವುಡು ಕಣಿಕೆಯನ್ನು ಕಡಿದಿಡುವ. ನಾಲ್ಕಾರು ಕೊಡ ನೀರು ಸೇದಿ ತಂದು ದನಗಳಿಗೆ ಕುಡಿಯಲಿಕ್ಕೆ ಹಾಕುವ. ಇಷ್ಟಾದಮೇಲೆ ಸಂಜೆಯ ಊಟ

ತೀರಿಸಿಕೊಂಡು ಹೊಸ್ತಿಲ ದಾಟಿದನೆಂದರೆ ಮರುದಿನ ಬೆಳಗಿನಲ್ಲಿಯೋ ಮನೆ ಸೇರುವ. ಮನೆಯಲ್ಲಿ ಯಾರೊಡನೆಯೂ ಹೆಚ್ಚಿಗೆ ಮಾತು ಗಳಿಲ್ಲ. ಯಂತ್ರದಂತೆ ಕೆಲಸ ಮಾಡಿಕೊಂಡು ಬಿಡುವ. ಇಷ್ಟು ಮಾಡಿದರೆ ಮನೆಯವರ ಕಾಟ ತಪ್ಪಿತು. ಉಳಿದ ವೇಳೆಯಲ್ಲಿ ತಾನು ಬೇಕಾದುದನ್ನು ಮಾಡಬಹುದು. ಓದಬಹುದು, ಬರೆಯುಬಹುದು, ಎಲ್ಲಿ ಬೇಕಾದಲ್ಲಿಯೂ ಹೋಗಬಹುದು—ಎಂದು ಭಾವಿಸಿದ್ದ.

ಈ ಕೆಲಸಗಳೆಲ್ಲ ಮೇಲು ನೋಟಕ್ಕೆ ಸರಿಯಾಗಿ ನಡೆಯುತ್ತಿದ್ದಂತೆ ಕಂಡರೂ ಸಂಸಾರದ ಅನುಭವವಿದ್ದವರಿಗೆ ಅವುಗಳಲ್ಲಿ ಅನೇಕ ಕೊರತೆಗಳು ಕಾಣುತ್ತಿದ್ದವು. ಅವುಗಳನ್ನು ಬಾಳಪ್ಪ ಮೊದಲಿನ ದಿನವೇ ಕಂಡು ಹಿಡಿದಿದ್ದ. ಆದರೂ ಆರಂಭದ ತುತ್ತಿಗೇನೇ ಹರಳು ಹಚ್ಚುವುದು ಬೇಡ, ನಾಲ್ಕುದಿನ ಹೋಗಲಿ ಎಂದುಕೊಂಡು ಸುಮ್ಮನಿದ್ದ. ಆಮೇಲೆ ಒಂದೊಂದನ್ನೇ ಹೇಳಿ ತಿದ್ದಿಸಬೇಕೆಂದು ಯೋಚಿಸಿದ. ಮೊದಲನೆಯ ಸಲ ಸಹಜ ಮಾತು ಮಾತಿಗೆ ಬಂದಾಗ ಹೇಳಿದ,

"ಕಣಿಕೆ ಕಡಿದಮೇಲೆ ಬೀಳುವ ರವದಿಯನ್ನು ಬುಟ್ಟಿಯಲ್ಲಿ ತುಂಬಿ ದನಗಳ ಮುಂದೆ ಹಾಕಬೇಕು. ಇಲ್ಲದಿದ್ದರೆ ಅದು ಬಣಿವೆಯ ಮುಂದೆಯೇ ಬಿದ್ದು ಹಾಳಾಗಿ ಹೋಗುವುದು."

ಈ ಮಾತಿನಲ್ಲಿ ಬಾಳಪ್ಪ ಸಂಸಾರಿಕನ ತಿಳುವಳಿಕೆಯನ್ನು ಪ್ರದರ್ಶಿಸುವ ರೀವಿಯೂ ಇತ್ತು. ಅದರ ಅರ್ಥ ಶ್ರೇಯಾಂಸನಿಗೆ ಮೊದಲು ಆಯಿತು. ಆಮೇಲೆ ತಿಳಿದುದು ಮಾತಿನ ಅರ್ಥ. ಅದಕ್ಕೆ ಅಂತಲೇ ಆತ ಉತ್ತರಿಸಿದ:

"ಅಷ್ಟೂ ತಿಳಿಯದಿಲ್ಲೇನು ನನಗೆ? ಆದರೆ ಅದರೊಳಗೇನು ಸತ್ವ ಅಂತ್ಯ ಬಿಟ್ಟಿದ್ದೆ...."

"ಹಾಗಂದರೆ ಹೇಗೆ? ಸಂಸಾರ ಮಾಡುವ ಕಾಲಕ್ಕೆ ಒಂದು ಕಡ್ಡಿಯೂ ಹಾಳಾಗಬಾರದು. ಹಾಗಾದರೆ ನಾವು ಜೀವ ಕೊಟ್ಟೇವು...."

ಹೀಗೆ ನಡೆದೆವೆಂದೇ ಮನೆ ಕಟ್ಟಿಸಿದೆವು. ಹೊಲಾ ಕೊಂಡೆವು, ಮೇಲೆ ನಿನ್ನ ಮದಿವೆಯನ್ನೂ ನಾಲ್ಕು ಜನ ಹೌದು ಅನ್ನುವಂತೆ ಮಾಡಿದೆವು.... ಇನ್ನೇನು ಅದ ನಮ್ಮದು? ಎಲ್ಲಾ ನಿನ್ನದೇ ಸಂಸಾರ. ನಾವಿನ್ನು ನಮ್ಮ ಬಸ್ತಿಯೋ, ಸ್ವಾಮಿಗಳ ಭಿಕ್ಷಾನೋ ಅಂತ ಮಾಡುತ್ತ ತಿರುಗುವವರು...."

ಪತಿಯ ಉದ್ದ ಉಪನ್ಯಾಸವನ್ನು ಕೇಳಿ ಸರಸವ್ವ ನಡುವೆ ಬಾಯಿ ಹಾಕಿದಳು.

"ಎಲ್ಲಾ, ಪ್ರಪಂಚ ಕೊರಳಿಗೆ ಬಿದ್ದ ಮೇಲೆ ಬುದ್ಧಿ ಬರತದ. ಈಗ ನಾಲ್ಕು ದಿನ ನಮ್ಮ ಜೀವದ ಮೇಲೆ ತಿಂದು ತಿರಗಾಡತಾನು ತಿರಗಾಡಲಿ, ಬಿಳಿ ಅರಿವೆ ಹಾಕಿಕೊಂಡು. ಈಗೇನು ನೀವು ತಿರುಗಾಡೇನ ಅಂದರೆ ಆಗತದ ?"

ಮಗನ ಮದುವೆ ಮಾಡಿ, ಅವನನ್ನು ಗೊತ್ತಿಗೆ ಹಚ್ಚಿದ ಸರಸವ್ವ ಮಗನ ಪಕ್ಷವನ್ನು ಹಿಡಿದು ವಾದಿಸಿದಳು.

"ನೋಡಲ್ಲಿ ಹಿತ್ತಲೊಳಗೆ ಕಣಕಿಯ ಬಣವಿಯನ್ನ ನೋಡಿದರೆ ನಿನ್ನ ಮಗ ಸಂಸಾರ ಹ್ಯಾಗೆ ಮಾಡತಾನ ಅನ್ನೋದು ತಿಳಿಯುತದ. ಎಲ್ಲಿಂದೋ ಪೆಂಢಾರಿಗಳು ಬಂದು ಬಣಿವೆ ಹಿರಿದು ಒಯ್ದಂತೆ ಆಗಿದೆ. ಸಿಸ್ತಿನಿಂದ ಸಿವುಡು ತಕ್ಕೊಂಡಿಲ್ಲ. ಇಂದು ಮಳಿ ಆದರೆ ಮೇಲಿನ ಮಣ್ಣೆಲ್ಲ ಬಣವಿಗೆ ಇಳಿದು, ಕಣಕಿ ಹಾಳಾಗಿ ಹೋಗತದ. ಮುಂದೆ ಬಿದ್ದ ರವದಿಗಂತೂ ದಿಕ್ಕೇ ಇಲ್ಲ...."

"ಹೀಗೆ ಹೇಳಲಿಕ್ಕೆ ಎಲ್ಲಾರಿಗೂ ಬರತದ. ನೀವೇನು ಹಿತ್ತಲ ಕಡೆಗೆ ಹೋಗುವದಿಲ್ಲೇನು ? ಹೋದಾಗ ಬಣವಿ ನೆಟ್ಟಗ ಮಾಡಬೇಕು. ನಾಲ್ಕು ದಿನಕ್ಕೊಮ್ಮೆ ರವದಿ ಒಯ್ದು ದನಗಳ ಮುಂದೆ ಹಾಕಬೇಕು. ಎಲ್ಲಾನೂ ಅವನ ಮೇಲೆ ಬಿಟ್ಟರೆ ಹೇಗಾದೀತು ? ಇನ್ನೂ ಅವನಿಗೆ ಅನುಭವ ಅದನs ಹ್ಯಾಗ ?"

ಮಗನಿಗೆ ಕೆಲಸದ ಶಿಕ್ಷಣ ಕೊಡುವ ಬಗೆಯನ್ನು ಸೂಚಿಸಿದಳು

ಸರಸಾ.

"ಇವನ್ನು ಮಾರಾತ ಹೋಗತೇನೆ ನಾ. ಅವನು ಕೆಡಿಸುತ್ತ ಹೋಗಲಿ. ನಾನು ಬಿಡಿಸುತ್ತ ಹೋಗತೇನೆ. ಅದಕ್ಕಿಂತ ನಾನೇ ಮಾಡುವುದು ನೆಟ್ಟಗಿಲ್ಲ....!"

ಸ್ವಲ್ಪ ಉಪಹಾಸ್ಯದ ಸ್ವರದಲ್ಲಿಯೇ ಬಾಳಪ್ಪ ನುಡಿದ. ಇದು ಶ್ರೇಯಾಂಸನಿಗೆ ಸಹನವಾಗಲಿಲ್ಲ.

"ನೀನು ಕಟ್ಟುವ ಉಪ್ಪಾರನನ್ನು ಎಂದು ಹಲ್ಲು ಕಿತ್ತ ಲೆಕ್ಕ ಹಚ್ಚುವವರು ಇದಾರು. ಇದು ನನ್ನ ಕೆಲಸವೇ ಅಲ್ಲ, ನನ್ನ ಕೆಲಸ ಬೇರೆಯೇ ಇದೆ. ಈ ಕೆಲಸಗಳಲ್ಲಿ ನನಗೆ ಆನಂದವಿಲ್ಲ, ಮನಸ್ಸಿಲ್ಲ, ಗತಿಯಿಲ್ಲ. ಏನು ಮಾಡಲಿ ?"

ಅಂದಿನಿಂದ ಕಣಕೆ ಒಡೆಯುವ ಕೆಲಸವೊಂದು ತಿರುಗಿ ಬಾಳಪ್ಪನ ಮೇಲೆಯೇ ಬಿತ್ತು. ಅದರಂತೆ ದನಗಳಿಗೆ ನೀರು ಕುಡಿಸುವುದರಲ್ಲಿಯೂ ಶ್ರೇಯಾಂಸನಿಗೆ ತೀಳಿ ಕೈ ಸಾಲದು. ಯಾವ ಎತ್ತು ನೀರು ಕುಡಿಯಿತು. ಯಾವ ಎತ್ತು ಇಂದು ನೀರು ಕುಡಿಯಲಿಲ್ಲ. ಇದಾವುದನ್ನೂ ಅವ ವಿಚಾರಿಸುತ್ತಿರಲಿಲ್ಲ. ಎತ್ತಿನ ಮುಂದೆ ಇಟ್ಟ ನೀರನ್ನು ಅವು ಕುಡಿಯುತ್ತಿರಲಿಲ್ಲ. ಬಕೆಟ್ಟನ್ನು ಕಾಲಿನಿಂದ ಒದೆಯುತ್ತಿದ್ದುವು. ಇದರ ಅರ್ಥ ಬಹು ದಿನಗಳವರೆಗೂ ಶ್ರೇಯಾಂಸನಿಗೆ ತಿಳಿಯಲಿಲ್ಲ. ಹಾಗೇ ಅವನ ಕಾರ್ಯಕ್ರಮ ಸಾಗಿತ್ತು. ಒಂದು ದಿನ ಅವನು ಹಿಂಡಿ ಕಲಸಲಿಕ್ಕೆಂದು ಸರಸವ್ವ ಕೊಟ್ಟಿಗೆಗೆ ಹೋದಾಗ ಎತ್ತು ಅವಳ ಕೈಯೊಳಗಿನ ತಂಬಿಗೆಯನ್ನು ನೋಡಿ ನೀರಿಗೆ ಬಾಯ್ತೆರೆಯಹತ್ತಿತು. ಏಕೆ, ನೀರನ್ನು ಚನ್ನಾಗಿ ಕುಡಿಸಿಲ್ಲವೇನೋ ಎಂದುಕೊಂಡು, ಅಲ್ಲಿಯೇ ಇದ್ದ ಮಣ್ಣಿನ ಕೊಡದೊಳಗಿನ ನೀರನ್ನು ಬಕೆಟ್ಟಿಗೆ ಸುರುವಿ ಎತ್ತಿನ ಮುಂದಿಟ್ಟಳು. ಒಂದೇಟಿಗೆ ಆ ನೀರನ್ನೆಲ್ಲ ಎತ್ತು ಹೀರಿಬಿಟ್ಟಿತು. ಕರುಣಾ ದೃಷ್ಟಿಯಿಂದ ಅವಳ ಕಡೆಗೊಮ್ಮೆ ನೋಡಿತು. ಸರಸವ್ವ ಮನೆಗೆ ಮತ್ತೆ ಹೋಗಿ ಇನ್ನೊಂದು ಕೊಡ ನೀರನ್ನು ತಂದು ಅದಕ್ಕೆ ಹಾಕಿದಳು.

ಅಷ್ಟನ್ನೂ ಕುಡಿದು. ಅದು ‘ಡರೆ’ ಹೊಡೆದು. ಮುಂದೆ ಹಾಕಿದ ಹೊಟ್ಟೆಗೆ ಬಾಯಿ ಹಾಕಿತು. ಸರಸಮ್ಮ ಅದರ ಹಣೆಯ ಮೇಲೆ ಕೈಯಾಡಿಸುತ್ತ ಮುಂದೆ ಹೋಗಿ ಹೊಟ್ಟನ್ನು ಬೆರಸಿಕೊಟ್ಟಳು, ಬಾಯಿಗೆ ಬರುವಂತೆ ರಾಶಿ ಮಾಡಿದಳು. ಆನಂದದ, ಮುಖದಿಂದ ಆ ರಾಶಿಯನ್ನು ತಿವಿಯುತ್ತ ಎತ್ತು ತಿನ್ನತೊಡಗಿತು. ಅದನ್ನು ನೋಡಿ ಸರಸಮ್ಮನ ಕಣ್ಣು ಕುಣಿಕೆಯಲ್ಲಿ ನೀರೂರಿತು. ‘ಪಾಪ! ಮೂಕ ಜಾನುವಾರ, ಅದಕ್ಕೇನು ಬಾಯಿ ಇದೆಯೆ? ನೀರು ಕುಡಿಯಲಿಕ್ಕೆ ಹಾಕಿಲ್ಲ. ನೀರಡಿಸಿ ಹಾಗೇ ನಿಂತಿದೆ. ಹೊಟ್ಟು ಹೇಗೆ ತಿಂದೀತು?’ ಎಂದು ತನ್ನಲ್ಲಿಯೇ ಎಂದುಕೊಂಡಳು. ‘ಇತ್ತೀಚೆಗೆ, ಎತ್ತು ಹೊಟ್ಟನ್ನೇ ತಿನ್ನದು, ಯಾವಾಗಲೂ ಹೊಟ್ಟೆ ಒಳಗೆ ಹೊಕ್ಕಿರುತ್ತದೆ....’ ಎಂದು ತನ್ನ ಗಂಡ ಆಗಾಗ ಹೇಳುತ್ತಿದ್ದುದು ನೆನಪಾಗಿ. ಶ್ರೇಯಾಂಸನ ಮೇಲೆ ಅವಳಿಗೆ ತುಂಬ ಸಿಟ್ಟು ಬಂತು. ಒಂದೂ ಕೆಲಸ ಅವನು ಮನಸ್ಸುಗೊಟ್ಟು ಮಾಡುವದಿಲ್ಲೆಂದು ಕೆರಳಿದಳು. ಆ ಸಿಟ್ಟಿನ ಭರದಲ್ಲಿ ಆಕಳ ಕರುವಿಗೆ ಹಾಲನ್ನು ಬಿಡುವುದಕ್ಕೂ ಕೂಡ ಲಕ್ಷ್ಯವಿಲ್ಲದೆ ಎಲ್ಲ ಹಾಲನ್ನು ಹಿಂಡಿಕೊಂಡು ಮನೆಗೆ ಬಂದಳು.

ಶ್ರೇಯಾಂಸನನ್ನು ಅವಳು ಎಚ್ಚರಿಸಬೇಕಾಗಿದ್ದಿತು. ಸಿಟ್ಟು ಮಾಡಬೇಕಾಗಿದ್ದಿತು. ಆದರೆ ಬಾಳಪ್ಪನ ಎದುರಿಗೆ ಮಗನನ್ನು ಹಳಿಯುವುದು ಅವಳ ಮನಸ್ಸಿಗೆ ಬರಲಿಲ್ಲ. ಹಾಗೆ ಮಾಡಿದರೆ ಮನೆಯಲ್ಲಿ ಇನ್ನಿಷ್ಟು ಅಶಾಂತಿ ಹಬ್ಬುವದೆಂಬುದು ಗೊತ್ತಿತ್ತು. ಅಲ್ಲದೆ ಶ್ರೇಯಾಂಸನೂ ದೊಡ್ಡವನಾಗಿದ್ದನು. ಅವನ ಮನಸ್ಸು ನೋಯುವಂತೆ ಮಾತನಾಡುವುದು ಬೇಕಿಲ್ಲ. ಗೌರವವನ್ನು ಬಿಟ್ಟು ನಡೆಯಬಾರದು ಎಂದು ಯೋಚಿಸಿದ್ದಳು. ಅದರಿಂದ ಇಂದು ಊಟಕ್ಕೆ ಮಗನೊಬ್ಬನೇ ಇದ್ದುದನ್ನು ಕಂಡು ಮಾತು ತೆಗೆದಳು:

“ಇಂದು ದನಗಳೆಲ್ಲ ಚೆನ್ನಾಗಿ ನೀರು ಕುಡಿದುವೇ?”

“ಕುಡಿಸಿವೆನಲ್ಲ!”

ಸರಸಾ.

"ಇವನ್ನು ಮಾಡುತ ಹೋಗತೇನೆ ನಾ. ಅವನು ಕೇಳಿಸುತ್ತ ಹೋಗಲಿ, ನಾನು ಬಿಡುತ್ತ ಹೋಗತೇನೆ. ಅದಕ್ಕಿಂತ ನಾನೇ ಮಾಡುವುದು ನೆಟ್ಟಗಲ್ಲ....!"

ಸ್ವಲ್ಪ ಉಪಹಾಸ್ಯದ ಸ್ವರದಲ್ಲಿಯೇ ಬಾಳಪ್ಪ ನುಡಿದ. ಇದು ಶ್ರೇಯಾಂಸನಿಗೆ ಸಹನವಾಗಲಿಲ್ಲ.

"ಮನೆ ಕಟ್ಟುವ ಉಪಕರಣಗಳನ್ನು ತಂದು ಹಲ್ಲು ಕಿತ್ತಲಿಕ್ಕೆ ಹಚ್ಚುವವರು ಇವರು. ಇದು ನನ್ನ ಕೆಲಸವೇ ಅಲ್ಲ, ನನ್ನ ಕೆಲಸ ಬೇರೆಯೇ ಇದೆ. ಈ ಕೆಲಸಗಳಲ್ಲಿ ನನಗೆ ಆನಂದವಿಲ್ಲ, ಮನಸ್ಸಿಲ್ಲ, ಗತಿಯಿಲ್ಲ. ಏನುಮಾಡಲಿ ?"

ಅಂದಿನಿಂದ ಕಣಕೆ ಕಡಿಯುವ ಕೆಲಸವೊಂದು ತಿರುಗಿ ಬಾಳಪ್ಪನ ಮೇಲೆಯೇ ಬತ್ತು. ಅದರಂತೆ ದನಗಳಿಗೆ ನೀರು ಕುಡಿಸುವುದರಲ್ಲಿಯೂ ಶ್ರೇಯಾಂಸನಿಗೆ ತಿಳುವಳಿಕೆ ಸಾಲಲಿಲ್ಲ. ಯಾಕ ಎತ್ತು ನೀರು ಕುಡಿಯಿತು. ಯಾವ ಆಕಳ ಇಂದು ನೀರು ಕುಡಿಯಲಿಲ್ಲ. ಇದಾವುದನ್ನೂ ಅವ ವಿಚಾರಿಸುತ್ತಿರಲಿಲ್ಲ. ಆಕಳ ಮುಂದೆ ಇಟ್ಟ ನೀರನ್ನು ಎತ್ತು ಕುಡಿಯುತ್ತಿರಲಿಲ್ಲ. ಬಕೆಟ್ಟನ್ನು ಮೂಸಿನೋಡಿ ಬಿಡುತ್ತಿದ್ದಿತು. ಇದರ ಅರ್ಥ ಬಹು ದಿನಗಳವರೆಗೂ ಶ್ರೇಯಾಂಸನಿಗೆ ಹೊಳೆಯಲಿಲ್ಲ. ಹಾಗೇ ಅವನ ಕಾರ್ಯಕ್ರಮ ಸಾಗಿತ್ತು. ಒಂದು ದಿನ ಆಕಳನ್ನು ಹಿಂಡಿಕೊಳ್ಳಲಿಕ್ಕೆಂದು ಸರಸವ್ವ ಕೊಟ್ಟಿಗೆಗೆ ಹೋದಾಗ ಎತ್ತು ಅವಳ ಕೈಯೊಳಗಿನ ತಂಬಿಗೆಯನ್ನು ನೋಡಿ ನೀರಿಗೆ ಹಾತೊರೆಯಹತ್ತಿತು. ಏಕೆ, ನೀರನ್ನು ಚನ್ನಾಗಿ ಕುಡಿಸಿಲ್ಲವೇನೋ ಎಂದುಕೊಂಡು, ಅಲ್ಲಿಯೇ ಇದ್ದ ಮಣ್ಣಿನ ಕೊಡದೊಳಗಿನ ನೀರನ್ನು ಬಕೆಟ್ಟಿಗೆ ಸುರುವಿ ಎತ್ತಿನ ಮುಂದಿಟ್ಟಳು. ಒಂದೇಟಿಗೆ ಆ ನೀರನ್ನೆಲ್ಲ ಎತ್ತು ಹೀರಿಬಿಟ್ಟಿತು. ಕರುಣಾ ದೃಷ್ಟಿಯಿಂದ ಅವಳ ಕಡೆಗೊಮ್ಮೆ ನೋಡಿತು. ಸರಸವ್ವ ಮನೆಗೆ ಮತ್ತೆ ಹೋಗಿ ಇನ್ನೊಂದು ಕೊಡ ನೀರನ್ನು ತಂದು ಅದಕ್ಕೆ ಹಾಕಿದಳು.

ಅಷ್ಟನ್ನೂ ಕುಡಿದು. ಅದು 'ಡರಿ' ಹೊಡೆದು, ಮುಂದೆ ಹಾಕಿದ ಹೊಟ್ಟೆಗೆ ಬಾಯಿ ಹಾಕಿತು. ಸರಸಮ್ಮ ಅದರ ಹಣೆಯ ಮೇಲೆ ಕೈಯಾಡಿಸುತ್ತ ಮುಂದೆ ಹೋಗಿ ಹೊಟ್ಟನ್ನು ಬೆರಸಿಕೊಟ್ಟಳು, ಬಾಯಿಗೆ ಬರುವಂತೆ ರಾಶಿಮಾಡಿದಳು. ಆನಂದದ, ಸುಖದಿಂದ ಆ ರಾಶಿಯನ್ನು ತಿವಿಯುತ್ತ ಎತ್ತು ತಿನ್ನತೊಡಗಿತು. ಅದನ್ನು ನೋಡಿ ಸರಸಮ್ಮನ ಕಣ್ಣು ಕುಣಿಕೆಯಲ್ಲಿ ನೀರೂರಿತು. 'ಪಾಪ! ಮೂಕ ಜಾನುವಾರ, ಅದಕ್ಕೇನು ಬಾಯಿ ಇದೆಯೆ? ನೀರು ಕುಡಿಯಲಿಕ್ಕೆ ಹಾಕಿಲ್ಲ. ನೀರಡಿಸಿ ಹಾಗೇ ನಿಂತಿದೆ. ಹೊಟ್ಟು ಹೇಗೆ ತಿಂದೀತು?' ಎಂದು ತನ್ನಲ್ಲಿಯೇ ಎಂದುಕೊಂಡಳು. 'ಇತ್ತೀಚಿಗೆ, ಎತ್ತು ಹೊಟ್ಟನ್ನೇ ತಿನ್ನದು, ಯಾವಾಗಲೂ ಹೊಟ್ಟೆ ಒಳಗೆ ಹೊಕ್ಕಿರುತ್ತದೆ....' ಎಂದು ತನ್ನ ಗಂಡ ಆಗಾಗ ಹೇಳುತ್ತಿದ್ದುದು ನೆನಪಾಗಿ, ಶ್ರೀಯಾಂಸನ ಮೇಲೆ ಅವಳಿಗೆ ತುಂಬ ಸಿಟ್ಟು ಬಂತು. ಒಂದೂ ಕೆಲಸ ಅವನು ಮನಸ್ಸುಗೊಟ್ಟು ಮಾಡುವದಿಲ್ಲವೆಂದು ಕೆರಳಿದಳು. ಆ ಸಿಟ್ಟಿನ ಭರದಲ್ಲಿ ಆಕಳ ಕರುವಿಗೆ ಹಾಲನ್ನು ಬಿಡುವುದಕ್ಕೂ ಕೂಡ ಲಕ್ಷ್ಯವಿಲ್ಲದೆ ಎಲ್ಲ ಹಾಲನ್ನೂ ಹಿಂಡಿಕೊಂಡು ಮನೆಗೆ ಬಂದಳು.

ಶ್ರೀಯಾಂಸನನ್ನು ಅವಳು ಎಚ್ಚರಿಸಬೇಕಾಗಿದ್ದಿತು, ಸಿಟ್ಟು ಮಾಡಬೇಕಾಗಿದ್ದಿತು. ಆದರೆ ಬಾಳಪ್ಪನ ಎದುರಿಗೆ ಮಗನನ್ನು ಹಳಿಯುವುದು ಅವಳ ಮನಸ್ಸಿಗೆ ಬರಲಿಲ್ಲ. ಹಾಗೆ ಮಾಡಿದರೆ ಮನೆಯಲ್ಲಿ ಇನ್ನಿಷ್ಟು ಅಶಾಂತಿ ಹಬ್ಬುವದೆಂಬುದು ಗೊತ್ತಿತ್ತು. ಅಲ್ಲದೆ ಶ್ರೀಯಾಂಸನೂ ದೊಡ್ಡವನಾಗಿದ್ದನು. ಅವನ ಮನಸ್ಸು ನೋಯುವಂತೆ ಮಾತನಾಡುವುದು ಚೆನ್ನಲ್ಲ. ಗೌರವವನ್ನು ಬಿಟ್ಟು ನಡೆಯಬಾರದು ಎಂದು ಯೋಚಿಸಿದ್ದಳು. ಆದರಿಂದ ಇಂದು ಊಟಕ್ಕೆ ಮಗನೊಬ್ಬನೇ ಇದ್ದುದನ್ನು ಕಂಡು ಮಾತು ತೆಗೆದಳು :

"ಇಂದು ದನಗಳೆಲ್ಲ ಚೆನ್ನಾಗಿ ನೀರು ಕುಡಿದುವೇ ?"

"ಕುಡಿಸಿದೆನಲ್ಲ !"

"ಹೇಗೆ ಕುಡಿಸಿದ್ದೆಯೋ ? ಎತ್ತು ಮತ್ತೆ ಎರಡು ಕೊಡ ನೀರು ಕುಡಿಯಿತಲ್ಲ. ನಾನು ಮನೆಯೊಳಗಿಂದ ಒಯ್ದು ಹಾಕಿದೆ...."

"ಇದ್ದಿರಬೇಕು...."

ಮಗನ ಈ ಮಾತನ್ನು ಕೇಳಿ ಸರಸವ್ವನಿಗೂ ಸಿಟ್ಟು ಬಂತು.

"ಹಾಕಿರಬೇಕು, ಇದ್ದಿರಬೇಕು ಅಂದರೆ ಆಗಲಿಲ್ಲ ? ಆ ಎತ್ತು ಯಾರದು ? ಆಕಳ ಯಾರದು ? ಅವೆಲ್ಲ ದುಡಿಯದೆ ಆಗಿವೆಯೋ ? ಹಾಲು ತಿನ್ನಲಿಕ್ಕೆ ಬೇಕು, ಸವಿಸವಿ ಊಟ ಬೇಕು, ಕೆಲಸ ಬೇಡೆಂದರೆ ಹೇಗೆ ? ದೊಡ್ಡವನಾದೆ. ಇನ್ನೇನು ನಾವು ಹೇಳೋದು ! ನಿನ್ನ ಷ್ಟಕ್ಕೆ ನೀನೇ ತಿಳಿದುಕೊಂಡು ಕೆಲಸಮಾಡಬೇಕಪ್ಪ...."

ಎಂದು ಸ್ವಲ್ಪ ಬಿರುಸಾಗಿಯೇ ಮಾತನಾಡಿದಳು ಸರಸವ್ವ. ಶ್ರೇಯಾಂಸ ಸ್ವಲ್ಪಹೊತ್ತು ಸುಮ್ಮನೆ ಕುಳಿತು ಕೇಳಿದ. ಬಾಯಲ್ಲಿಯ ತುತ್ತು ಜಿಗುಟಾಯಿತು. ಕಣ್ಣಲ್ಲಿ ನೀರಾಡಿತು. ಊಟವನ್ನು ಅಷ್ಟಕ್ಕೇ ಬಿಟ್ಟು ಎದ್ದ. ಕೈತೊಳೆದುಕೊಂಡು ಪಡಸಾಲೆಗೆ ಬಂದ.

ಒಳಗೆ ಬರುತ್ತಿರುವ ಬಾಳಪ್ಪ ಮಗನ ಮುಖವನ್ನು ಕಂಡು, ಹೆಂಡತಿಗೆ ಕೇಳಿದ ಒಳಗೆ ಹೋಗಿ,

"ಯಾಕೆ. ಶ್ರೇಯಾಂಸ ಊಟ ಬಿಟ್ಟು ಎದ್ದಂತೆ ಕಾಣತದ....?"

"ಏಳತಾನ ಅವನ. ! ಅವನದೇನು ಹೋಗತದ ಕೂತ ತಿನ್ನ ಲಿಕ್ಕೆ? ನಾವು ಇದ್ದೇವಲ್ಲ ದುಡಿದು ಹಾಕಲಿಕ್ಕೆ...."

ಸಿಟ್ಟಿನಲ್ಲಿಯೇ ಸರಸವ್ವ ಆಡಿದಳು.

"ಈಗೇಕೆ ಬಂದಿತ್ತಾ ಮಾತು ?"

"ಯಾವಾಗಲೂ ನಡೆದೇ ಇದೆ...."

"ಆಯಿತು ; ಊಟದ ಹೊತ್ತು, ಈಗ ಇಂಥದೇನೂ ತೆಗೆಯ ಬಾರದು ಅನ್ನೋದೂ ತಿಳಿಯುವದಿಲ್ಲೇನು ? ಹೇಗೆ ನಲವತ್ತು ವರ್ಷ ದಾಕೆ ಆದೆ ಅನ್ನುವೆ ನಾ...."

ಎಂದು ಮಗನನ್ನು ತನ್ನ ಜೊತೆಯಲ್ಲಿ ಊಟಕ್ಕೆ ಕೂಡಿಸಿಕೊಳ್ಳ

ಲಿಕ್ಕೆಂದು ಪಡಸಾಲೆಗೆ ಹೋದ. ಮಗನು ಅರ್ಧಕ್ಕೆ ಬಿಟ್ಟಿದ್ದ ತಾಟನ್ನು ಕಂಡು ಅವನಿಗೆ ಸುಮ್ಮನಿರಲಿಕ್ಕೆ ಆಗಲಿಲ್ಲ. ಆದರೆ ಅಷ್ಟರಲ್ಲಿ ಶ್ರೇಯಾಂಸ ಮನೆಯಿಂದ ಹೊರಗೆ ಹೋಗಿಬಿಟ್ಟಿದ್ದ.

ಆ ದಿನ ಬಾಳಪ್ಪನಿಗೆ ಊಟ ಸಿಹಿ ಹತ್ತಲಿಲ್ಲ. ಇದ್ದೊಬ್ಬ ಮಗ ಹೀಗೇಕೆ ಆಗುತ್ತಿರುವನೆಂದು ಚಿಂತಿಸತೊಡಗಿದ. ಆ ದಿನ ಇರುಳು ಅವನಿಗೆ ಚೆನ್ನಾಗಿ ನಿದ್ರೆಯೂ ಕೂಡ ಹತ್ತಲಿಲ್ಲ. ಇರುಳೆಲ್ಲ ಕನಸುಗಳೇ !

........ತಲೆಯ ಮೇಲೆ ಗೇಣುದ್ದ ಕೂದಲುಗಳು ! ಚೆನ್ನಾಗಿ ಎಣ್ಣೆ ಹಚ್ಚಿಕೊಂಡು ಹಿಕ್ಕಿದ್ದಾನೆ. ಓರೆ ಬೈತಲ ತಲೆಯಲ್ಲಿ.... ವಿಶಾಲವಾದ ಹಣೆಯು ಬೋಳು ಬೋಳಾಗಿದೆ... ಅದರ ಮೇಲೆ ಶ್ರೀಗಂಧದ ಬೊಟ್ಟಿಲ್ಲ .... ನ್ಲೇಂಛನಾಗಿ ಬಿಟ್ಟಿದ್ದಾನೆ .... ಯಾರ ಹುಡುಗನಿವ !

ಮುಖದ ಮೇಲೆ ಮೀಸೆಗಳೇ ಇಲ್ಲ....ನಾನಿರುವಾಗಲೇ ಮೀಸೆಗಳನ್ನು ತೆಗೆದನೆ? ಎಂಥ ಅಪಚಾರವಿದು ! ಮೀಸೆಯಿಲ್ಲದ ಮುಖವನ್ನು ತಕ್ಕೊಂಡು ಹಡೆದವರ ಎದುರಿಗೆ ಬರುವದೆಂದರೆ....

ಛೀ ! ತಾಳ ತಪ್ಪಿಯೇ ಹೋಯಿತು. ಹಾಟೇಲಿನಲ್ಲಿ ತಾಸಿಗೊಮ್ಮೆ ಚಹ ಕುಡಿಯುವದೇನು? ಕುಲ ಜಾತಿ ಏನಾದರೂ ಇದೆಯೇ ಇವನಿಗೆ? ಸೋದರ ಮಾವ ಎಂಥವ....! ದಿನಕ್ಕೆ ಮೂರು ಸಲ ದೇವರ ದರ್ಶನವಿಲ್ಲದೆ ಬಾಯಿಗೆ ನೀರು ಹಾಕುವದಿಲ್ಲ.... ಸೋದರತ್ತೆ ದಿನಕ್ಕೆ ಹತ್ತು ಸಾವಿರ ಜಪವಿಲ್ಲದೆ ಮಲಗಳು. ಅಂಥವರ ಮನೆಯಲ್ಲಿ ಇಂತ ಅತಿಚಾರ! ಇಂಥ ಮಕ್ಕಳು ಹುಟ್ಟುವದಕ್ಕಿಂತ ನಾವೂ ಹಾಗೇ ಇದ್ದಿದ್ದರೆ....

ಬಾಳಪ್ಪ ಇನ್ನೊಂದು ಮಗ್ಗುಲಿಗೆ ಹೊರಳಿದ.

ಸಾವುಕಾರರಿಗೆ ಹೊಲವನ್ನು ಬರೆದು ಕೊಡುತ್ತಿದ್ದಾನೆ —ಶ್ರೇಯಾಂಸ—ಇಂಥವನ ಹತ್ತಿರ ಲಕ್ಷ್ಮಿ ಹೇಗೆ ನಿಂತಾಳು....

ಅವಳು ಬಹು ಚಂಚಲಳು....! ನಾಟಕ ಸಿನೇಮಾಗಳಲ್ಲಿಯೇ ಇವನ ದಿನಗಳು ಕಳೆಯುತ್ತಿವೆ. ದಿನಕ್ಕೆ ಒಂದೆರಡು ಪಾಕೀಟು ಸಿಗಾರೇಟು ಸುಡುವ....ಸರೆಯನ್ನು ? ಅದನ್ನೂ ಸೇವಿಸುತ್ತಿರಬೇಕು....ಸಂಗತಿ ಎಂಥದು....ಸಹವಾಸ ಯಾವುದು ?

ಐವತ್ತು ವರ್ಷ ನಾನು ದುಡಿದು, ಮಣ್ಣು ಕಚ್ಚಿ ಸಂಪಾದಿಸಿದು ದನ್ನೆಲ್ಲ ಐದೇ ವರ್ಷಗಳಲ್ಲಿ ಕಳೆದು ಬಿಟ್ಟನಲ್ಲ !

ಇನ್ನೇನು ಜನರ ಬಾಗಿಲು ಬಾಗಿಲುಗಳಿಗೆ ಕೈಯೊಡ್ಡಿ ತಿರುಗು ತ್ತಿದ್ದಾನೆ ! ಯಾರೂ ಮಾತನಾಡಿಸರು. ಒಳಗೆ ಕರೆಯರು. ಇವನು ಎದುರಿಗೆ ಬಂದರೆ ಗೆಳೆಯರೂ ಕೂಡ ಮುಖ ತಿರಿವು ಹೋಗುತ್ತಿದ್ದಾರೆ.

ಅಯ್ಯೋ ಏನು ಬಂತು ಸ್ಥಿತಿಯಿದು ! ಹೊನ್ನು ಹಿಡಿಯುವಲ್ಲಿ ಹುಲ್ಲು ಹಿಡಿಯಬೇಕಾಯಿತಲ್ಲ ! ಸುಮ್ಮನೆ ಸಾಲೆ ಕಲಿಸಿದೆ....ನಾಲೆಗೇ ಕಳಿಸದಿದ್ದರೆ ನನ್ನ ಮನೆತನದ ಸ್ಥಿತಿ ಹೀಗೇಕಾಗುತ್ತಿದ್ದಿತು ?

ಇನ್ನೊಂದು ಮಗ್ಗುಲಿಗೆ ಹೊರಳಿದ ಬಾಳಪ್ಪ. ಶ್ರೇಯಾಂಸನ ಮುಂದಿನ ಜೀವನದ ಕನಸನ್ನೆಲ್ಲ ಕಂಡು ಅವನ ಮನಸ್ಸು ಭಾರ ವಾಗಿತ್ತು.

"ಏಕೆ ನಿದ್ರೆಯನ್ನೇ ಮಾಡುವಂತೆ ಕಾಣುವದಿಲ್ಲವಿಂದು ?"

ಸರಸಪ್ಪ ಆಕಳಿಸುತ್ತ ಪ್ರಶ್ನೆ ಹಾಕಿದಳು. ಅವಳಿಗೂ ಇಂದು ನಿದ್ರೆ ಹತ್ತಿರಲಿಲ್ಲ. 'ಮಗ ಉಪವಾಸ ಎದ್ದು ಹೋದನಲ್ಲ!' ಎಂಬ ಕೊರಗು ತಾಯ್ ಕರುಳನ್ನು ಕರಗಿಸಿದ್ದಿತು. ಆ ವೇಳೆಯ ಕಠೋರತೆ ಈಗ ಅವಳಲ್ಲಿ ಉಳಿದಿರಲಿಲ್ಲ.

"ಶ್ರೇಯಾಂಸನ ಜನ್ಮ ಹೇಗಾಗೋದು ಅಂತ ಚಿಂತಿಸು ತ್ತಿದ್ದೇನೆ... "

ಬಾಳಪ್ಪ ತನ್ನ ಹೃದಯವನ್ನು ತೆರೆದು ತೋರಿಸಿದ ಹೆಂಡತಿಗೆ...

"ಅದೇ ಕನಸು ಇಷ್ಟೊತ್ತಿನ ತನಕ....ಮುಂದೆ ಒಬ್ಬ ಫಕೀರನಂತೆ ಆಗಿ ತಿರುಗಿದರೆ ಏನು ಗತಿ ಎನ್ನುವೆ...."

"ಹಾಗೇನು ಆಗುವುದಿಲ್ಲ...." ಸಮಾಧಾನ ಹೇಳಿದಳು ಸರಸಾ.

"ಈಗೇನೋ ಅವನ ಲಕ್ಷಣ ಹಾಗೇ ಇದೆ....ನಾವು ನೋಡುವ ದಿಲ್ಲೇನು. ಈಗ ಊರೊಳಗೆ ಹಲವರನ್ನು ಇಂಗ್ಲೀಷ ನಾಲ್ಕಾರು ವರ್ಷ ಕಲಿತು ಬಂದು ತತ್ತಿ ತಿನ್ನುತ್ತಾ ತಿರಗತಾ ಇದ್ದಾರೆ. ಒಂದು ಕೆಲಸ ಇಲ್ಲ, ಒಂದು ಬೊಗಸೆ ಇಲ್ಲ. ಕಟ್ಟೆಯ ಮೇಲೆ ಕುಳಿತು ಹರಟೆ ಹೊಡೆಯುವರು. ಮನೆಯೊಳಗಿನ ದುಡ್ಡು ಕದ್ದು ಹಾಟೇಲ ನೊಳಗ ಚಹಾ ಕುಡಿಯುವರು...."

"ಹಾಗೆ ಆಗುವದೇನು ನಮ್ಮ ಶ್ರೇಯಾಂಸ ?"

"ಏನೂ ಹೇಳಬೇಡ ನೀ !"

"ಇಲ್ಲ; ನಮ್ಮ ಹುಡುಗನ ಲಕ್ಷಣವೆಲ್ಲ ಆ ಹುಡುಗರಲ್ಲ ? ದಿನಾ ಅತ್ರುವಕ್ಕೆ ಅಭ್ಯಾಸಕ್ಕೆ ಹೋಗುವ, ಬಸದಿಗೆ ಹೋಗುವ, ನಾಲ್ಕು ಜನರಿಗೆ ಪುರಾಣ ಓದಿ ಹೇಳುವ....ಇಂಥ ಹುಡುಗ ಆ ಹಾದಿಗೆ ಹತ್ತು ವದಿಲ್ಲ. ಅದರ ಹೆದರಿಕೆ ನನಗೇನೂ ಇಲ್ಲ. ಆದರೆ ಅವನ ಓದುವ ಹುಚ್ಚು ಬಂದು ಹೋಗುವಲ್ಲದು. ಅದರಿಂದಲೇ ಶ್ರೇಯಾಂಸ ಯಾವಾಗ ಲಕ್ಷ್ಮೇ ಹತ್ತಿರುವ ಕೆಲಸದ ಕಡೆಗೆ ಅವನ ಮನಸ್ಸೇ ಹತ್ತದಂತಾಗಿದೆ. ಇದಕ್ಕೇನಾದರೂ ಉಪಾಯ ಹುಡುಕಬೇಕು ನಾವು...."

"ನನ್ನ ಆಟವೆಲ್ಲ ನಿಂತು ಹೋಗಿದೆ....ಪದ್ಮಪ್ಪ ಅಂತೂ ಇತ್ತ ಮನಸ್ಸನ್ನೇ ಹಾಕುವದಿಲ್ಲ...."

"ಶ್ರೇಯಾಂಸ ಮಾಡಿದ್ದು ಅವರಿಗೆ ಚೆಂದ ಕಾಣುವುದಿಲ್ಲ !"

"ಅದಕ್ಕೆ ಉಪಾಯವಿಲ್ಲ !"

"ಹೊಲ ಮನೆ ಕೆಲಸ ಮಾಡಲಿಕ್ಕೆ ಅವನ ಮನಸ್ಸು ಇಲ್ಲದಿದ್ದರೆ ಎಲ್ಲಿಯಾದರೂ ಅಂಗಡಿಯೊಳಗೆ ಲೆಕ್ಕ ಬರೆಯಲಿಕ್ಕೆ ಇಟ್ಟು ನೋಡಿರಿ !"

"ಹಾಗೇ ಮಾಡಬೇಕು...."

ಗಂಡಹೆಂಡಿರು ಈ ನಿರ್ಣಯಕ್ಕೆ ಬರುವ ಹೊತ್ತಿಗಂದರ ಬಸದಿ

ಯೊಳಗೆ ಬೆಳಗಿನ ಜಯಘಂಟೆ ಹೊಡೆಯಿತು. ನಗಾರಿಯ ಸದ್ದೂ ಆಯಿತು. ಕೊರವ ಸನಾಯಿಯನ್ನು ಶ್ರುತಿಪಡಿಸಿಕೊಳ್ಳುವ ಎತ್ತು ಗಡೆಯೂ ಕೇಳಿಸಿತು.

"ಮನೆಯಲ್ಲಿ ಒಂದು ಹಿಡಿ ಹಿಟ್ಟೂ ಇಲ್ಲ !?

ಎಂದವಳೇ ಸರಸವ್ವ ಬೀಸಲಿಕ್ಕೆಂದು ಎದ್ದಳು.

"ನಾಳೆ ಸೊಸೆ ಬಂದು ನಿನ್ನ ಕೆಲಸ ಬಿಡಿಸಬಹುದು ನನ್ನ ಕೆಲಸ ಸಾಯುವವರೆಗೆ ನನಗೆ ಹತ್ತಿದ್ದೇ...."

ಎಂದು ಬಾಳಪ್ಪನೂ ನಿಟ್ಟುಸುರೊಂದನ್ನು ಬಿಟ್ಟು ಹಾಸಿಗೆ ಯಲ್ಲಿಯೇ ಎದ್ದು ಕುಳಿತು, ಬೆಳಗಿನ ಸಾಮಾಯಿಕವನ್ನು ಆರಂಭಿಸಿದ.

ಹೊರಗೆ ತಂಗಾಳಿ ತೀಡಿತು. ಪೂರ್ವದಿಕ್ಕಿನಲ್ಲಿ ಹೊತ್ತಿನ ಗೊಂಡೆಯೊಡೆಯಿತು.

೧೩

ಹೊರಗೆ ತಂಗಾಳಿ ತೀಡಿತು. ಪೂರ್ವದಿಕ್ಕಿನಲ್ಲಿ ಹೊತ್ತಿನ ಗೊಂಡೆಯೊಡೆಯಿತು!

ತೆರೆ ಮೇಲೆದ್ದಿತು. ಸ್ತುತಿಪಾಠಕರ ಉಗ್ಗಡಣೆಯು ಕೇಳಬಂದಿತು.

“ಶ್ರೀಮದ್ ರಾಜಾಧಿರಾಜ! ಮಹಾಮಂಡಲೇಶ್ವರ ಹರಿಹರ ಮಹಾರಾಜ! ಭೋ! ಪರಾಕು”

ಎಂಬ ನಿನಾದದಲ್ಲಿ ಹರಿಹರ ಮಹಾರಾಜನು ಸಿಂಹಾಸನದಲ್ಲಿ ಬಂದು ಕುಳಿತನು. ಸಭೆಯೆಲ್ಲ ಎದ್ದು ನಿಂತು,

“ಜಯಕರ್ಣಾಟಕ ರಾಜ್ಯಲಕ್ಷ್ಮೀ! ಜಯಭುವನೇಶ್ವರೀ!! ಜಯ ಪಂಪಾಪತೇ!!!”

ಎಂದು ಘೋಷಿಸಿತು. ವಿದ್ಯಾರಣ್ಯ ಮುನಿಗಳು ರಾಜ್ಯಮುಕುಟವನ್ನು ಹರಿಹರರಾಯನ ತಲೆಯ ಮೇಲೆ ಇರಿಸಿದರು. ಪಟ್ಟದ ಕತ್ತಿಯನ್ನು ಎತ್ತಿ ಕೈಯಲ್ಲಿ ಕೊಟ್ಟರು.

ಶ್ರೀಯಾಂಸನ ‘ವಿಜಯ ಸಾಮ್ರಾಜ್ಯ’ ನಾಟಕದ ಕೊನೆಯ ಪ್ರವೇಶ ಇದೀಗ ಆರಂಭವಾಗಿದ್ದಿತು. ಸುತ್ತಲೂ ತಾಳೆಗಳು ಹರವಿದ್ದುವು. ನಡುವೆ ಹುಲ್ಲಿನ ಚಾಪೆಯ ಮೇಲೆ ಎದುರಿಗೊಂದು ಗಾದಿಯ ಸುರುಳಿಯನ್ನು ಇಟ್ಟುಕೊಂಡು ಬರೆಯುವುದರಲ್ಲಿ ಮಗ್ನನಾಗಿದ್ದಾನೆ ಶ್ರೀಯಾಂಸ. ಮುಂದೆ ದೀಪವೊಂದು ಮಂದವಾಗಿ ಉರಿಯುತ್ತಿದೆ.

ಆತ್ಮಾರಾಮ ಮಾಸ್ತರರು ಅಟ್ಟವನ್ನೇರಿ ಮೆಲ್ಲನೆ ಮೇಲೆ

ಬಂದರು. ಶ್ರೇಯಾಂಸ ಇನ್ನೂ ಬರೆಯುತ್ತ ಕುಳಿತಿದ್ದಾನೆ! ನೋಡಿ ವಿಸ್ಮಯಗೊಂಡರು. ಅವರ ಬಾಯಿಂದ ತನ್ನಿಂದ ತಾನೇ ಶಬ್ದ ವೊಂದು ಹೊರಟಿತು.

"ಶ್ರೇಯಾಂಸ!"

ಅತ್ತ ಶ್ರೇಯಾಂಸನ ಲಕ್ಷ್ಯವೇ ಇಲ್ಲ. ಉಳಿದ ಆ ದೃಶ್ಯ ವೊಂದನ್ನು ಮುಗಿಸಿಯೇ ಮನೆಗೆ ಹೊರಡಬೇಕೆಂದು ಅವನ ಹಂಬಲ. ಕಣ್ಣುಗಳು ಕೆಂಪಾಗಿವೆ, ಉರಿಯುತ್ತಿವೆ. ಅದರ ಕಡೆಗೆ ಅವನ ಗಮನವೇ ಇಲ್ಲ. ಸಾಗಿದೆ ಹಾಗೇ ಲೆಕ್ಕಣಿಕೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಆ ಭವ್ಯ ದೃಶ್ಯ ರೂಪುಗೊಳ್ಳುತ್ತಿದೆ.

ಶ್ರೇಯಾಂಸನ ಸ್ಥಿತಿಯನ್ನು ಒಂದು ಕ್ಷಣ ನಿಂತು ಕಂಡರು ಆತ್ಮಾರಾಮ ಮಾಸ್ತರರು. ಅವರ ಮನಸ್ಸು ಆನಂದದಿಂದ ಪುಳಕಿತ ವಾಯಿತು. ಸರಸ್ವತಿಯ ವರ ಸಿಕ್ಕಿದೆ ಶ್ರೇಯಾಂಸನಿಗೆ! ನಿಜವಾದ ಕಲಾಜೀವಿ ಎಂದುಕೊಂಡರು. ಮರಳಿ ಸದ್ದಿಲ್ಲದೆ ಕೆಳಗೆ ಇಳಿದು ಹೋದರು.

ತುಸು ಹೊತ್ತಿನ ಮೇಲೆ ಶ್ರೇಯಾಂಸನ ಬರವಣಿಗೆ ನಿಂತಿದೆಯೋ ಇಲ್ಲವೋ ನೋಡಿಕೊಂಡು ಮತ್ತೆ ಮೇಲೆ ಬಂದರು. ಆಗ ಅವರ ಕೈಯಲ್ಲಿ ಚಹದ ಕಪ್ಪು ಇದ್ದಿತು. ಶ್ರೇಯಾಂಸನ ಮುಖ ತೊಳಿಸಿ ಒಂದು ಕಪ್ಪು ಚಹ ಕುಡಿಸಿದರು. ಅವನು ಚಹ ಕುಡಿಯುವವರೆಗೆ ಅಲ್ಲಿಯೇ ಕುಳಿತು ಸುತ್ತಲೂ ಹರವಿದ ಕಾಗದಗಳನ್ನು ಕೂಡಿ ಹಾಕಿ, ಹೊಂದಿಸಿದರು. ಹಾಗೆಯೇ ಅವುಗಳ ಮೇಲೆ ಕಣ್ಣಾಡಿಸಿ,

"ನಾಟಕ ಮುಗಿದೇ ಬಿಟ್ಟಿದೆಯಲ್ಲ....!"

ಎಂದರು ಬೆರಗಿನಿಂದ

"ಮುಗಿದಿದೆ....!"

"ಇನ್ನು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳು !"

"ಇಲ್ಲ, ಮಾಸ್ತರರೆ ಮನೆಯಲ್ಲಿ ನೀರು ತರಬೇಕಾಗಿದೆ........

ಹೋಗಬೇಕು"

"ಹೋಗುವೆಯಂತೆ ಮಲಗು!"

"ನನ್ನ ಕೆಲಸ......."

"ನಾನು ಹೇಳಿಕಳಿಸುವೆ. ಸುಮ್ಮನೇ ಕೂಡು."

ಇಷ್ಟು ಹೇಳಿ ಆತ್ಮಾರಾಮ ಮಾಸ್ತರರು ಶ್ರೇಯಾಂಸನಿಗೆ ಮುಂದೆ ಮಾತನಾಡಲಿಕ್ಕೇ ಕೊಡದೆ ಮಲಗಿಸಿದರು. ಅವನ ಮೇಲೊಂದು ಶಾಲನ್ನು ಹೊಚ್ಚಿ, ತಾವು ಪ್ರಾತರ್ವಿಧಿಗಳನ್ನು ತೀರಿಸಲಿಕ್ಕೆಂದು ಹೊರಗೆ ಹೋದರು.

ತಿರುಗಿ ಶ್ರೇಯಾಂಸ ಏಳಲಿಕ್ಕಂದರೆ ಮಧ್ಯಾಹ್ನದ ಹನ್ನೆರಡು ಗಂಟೆಯಾಯಿತು. ಅಷ್ಟರಲ್ಲಿ ಬಾಳಪ್ಪ ಎರಡು ಸಲ ಆತ್ಮಾರಾಮ ಮಾಸ್ತರರ ಮನೆಗೆ ಬಂದು ಹೋಗಿದ್ದ. ಬಾಳಪ್ಪನಲ್ಲಿಯ ಮಗನನ್ನು ಕಾಣುವ ಆತುರವನ್ನು ಕಂಡು ಆತ್ಮಾರಾಮ ಮಾಸ್ತರರು ಕೇಳಿದರು.

"ಏಕೆ? ಏನು ಕೆಲಸವಿತ್ತು?"

"ದಿನಾಲು ಬೆಳಗಿನಲ್ಲಿ ಎದ್ದು ಮನೆಗೆ ಬರತಕ್ಕವ ಇಂದು ಇನ್ನೂ ಬರಲಿಲ್ಲ!"

"ಬಂದಾನಪ್ಪ!"

"ಬರದೆ ಎಲ್ಲಿ ಹೋಗತಾನ ಬಿಡು!"

"ಆಸೋಲೇಕೆ ಇಷ್ಟು ಅವಸರ? ಏನು ನೀರು ತರಬೇಕಾಗಿತ್ತು?"

"ಇಲ್ಲ.... ಅದೇನಿಲ್ಲ.... ಆದರೆ...."

"ಹುಡುಗನನ್ನು ತಿಳಿದುಕೊಂಡಿಲ್ಲ ಬಾಳಪ್ಪ ನೀವು....!"

"ನಿನ್ನೆ ಬಂದಿಲ್ಲೇನರಿ ಶ್ರೇಯಾಂಸ ನಿಮ್ಮಲ್ಲಿ?"

"ಯಾಕೆ? ಮನೆಯಲ್ಲಿ ಸಿಟ್ಟುಮಾಡಿದನೆ?"

"ಏನೋ ಹೆಂಗಸರ ಕೆಲಸ....ದನಗಳಿಗೆ ನೀರು ಕುಡಿಸಲಿಲ್ಲ ಅಂತ ಅಂದರು ಕಾಣತದ....ಸಂಜೆಗೆ ಊಟ ಮಾಡದೇ ಹಾಗೇ ಬಂದು

ಬಿಟ್ಟಿದ್ದಾನೆ...."

"ನಿನ್ನೆ ಊಟ ಮಾಡಿಲ್ಲವೇ ಶ್ರೇಯಾಂಸ?"

"ಎಲೆಯ ಮುಂದೆ ಕುಳಿತಿದ್ದ. ಮಾತಿಗೆ ಮಾತು ಬಂದು ಹಾಗೇ ಎದ್ದು ಬಿಟ್ಟ. ನಾನು ತಿರುಗಿ ಕರೆಯುವಷ್ಟರಲ್ಲಿ ಕಣ್ಮರೆಯಾಗಿದ್ದ...."

"ನೀರು ಮೇವಿನ ಕೆಲಸ ಅವನಿಗೆ ಹೇಳಬೇಡಿ. ಸುಮ್ಮನೇ ಇನ್ನೂ ನಾಲ್ಕು ದಿನ ತನ್ನಷ್ಟಕ್ಕೆ ತಾನು ಓದಕೊಂಡು ಇರಲು ಬಿಡಿರಿ!"

"ಆ ಓದೇ ಕೆಡಿಸಿದೆ ಅವನನ್ನ ಮಾಸ್ತರರೇ!"

"ದಯಮಾಡಿ ಹಾಗನ್ನ ಬೇಡಿ!"

"ಹದಿನೆಂಟು-ಇಪ್ಪತ್ತು ವರ್ಷದ ಮಗನಾದ. ಮನೆಯಲ್ಲಿ ಒಂದು ಕೆಲಸ ಇಲ್ಲ....ಒಂದು ಬೊಗಸೆ ಇಲ್ಲ....ತಾಳಿಕೊಳ್ಳೋದು ಅಂದರೆ ಎಷ್ಟು ತಾಳಿಕೊಳ್ಳೋದರಿ? ನಾಲ್ಕು ದುಡ್ಡಿನ ಉತ್ಪನ್ನ ಇಲ್ಲ ಇವನದು? ನೆರೆಮನೆಯವರ ಮಕ್ಕಳಿಲ್ಲೇನು? ಎರಡೆರಡು ಹೋರಿ ಮೇಯಿಸಿ, ಜಾತ್ರೆಗೆ ಮಾರಿ, ನೂರಿನ್ನೂರು ರೂಪಾಯಿ ಗಳಿಸತಾರು. ಇವನು ಒಂದು ದಿವಸ ಹೊಲಕ್ಕೆ ಬಾ ಅಂದರೆ ಬರುವುದಿಲ್ಲ....ಅವರೇನು ಸಾಲೆ ಕಲಿಯಲಿಲ್ಲೇನು? ಕಲಿಯುವಾಗ ಕಲಿತರು, ಓದುವಾಗ ಓದಿದರು. ಈಗ ಎಲ್ಲ ಬಿಟ್ಟು ಮನೆಯ ಕೆಲಸಕ್ಕೆ ಹತ್ತಿದರಲ್ಲ...."

"ಹಾಗಲ್ಲಪ್ಪ ನಮ್ಮ ಶ್ರೇಯಾಂಸ....!"

ಕನಿಕರದ ಸ್ವರದಲ್ಲಿ ಆತ್ಮಾರಾಮರಿಂದ ಮಾತು ಬಂತು.

"ಈಗೇನು ಕೆಲಸ ಆದರಿ ಅವನದು?"

"ಏನಿಲ್ಲ; ಮಲಗಿಕೊಂಡಾನ. ಎದ್ದಕೂಡಲೆ ಕಳಿಸತೇನು ಹೋಗು...."

"ಇನ್ನೂ ಮಲಗಿದಾನ?"

"ಅಹುದು; ರಾತ್ರಿ ಬಹಳ ಹೊತ್ತಿನವರೆಗೆ ಬರೆಯುತ್ತ ಕುಳಿತಿದ್ದ. ಈಗ ಮಲಗಿಕೊಂಡಿದಾನ...."

"ಏನು ಬರೆಯಲಿಕ್ಕೆ ಹೇಳಿದ್ದಿರಿ ಹೌದು ?"

"ನಾನು ಹೇಳಿರಲಿಲ್ಲ; ಸರಸ್ವತಿ ಹೇಳಿದ್ದಳು. ನಿಮ್ಮ ದೈವಪ್ಪ ಇಂಥಾ ಮಗನನ್ನು ಹಡೆದದ್ದು.... ಕೂಡು ಸ್ವಲ್ಪ"

ಎಂದು ಹೇಳಿ ಆತ್ಮಾರಾಮರು ಅಟ್ಟದ ಮೇಲೆ ಹೋಗಿ. 'ವಿಜಯ ಸಾಮ್ರಾಜ್ಯ' ನಾಟಕದ ಪ್ರತಿಯನ್ನು ತಕ್ಕೊಂಡು ಕೆಳಗೆ ಬಂದರು. ಗೂಟಿಗೆ ತಗುಲಿಸಿದ ಕೋಟಿನ ಜೇಬಿನೊಳಗಿನ ಕನ್ನಡಕ ವನ್ನು ತಕ್ಕೊಂಡು ತೆಕ್ಕೆಗೆ ಆನಿಸಿ ಕುಳಿತರು. ಆಮೇಲೆ

"ಈಗ ಸವಡು ಇದೆಯಲ್ಲ?" ಎಂದು ಕೇಳಿದರು.

"ಒಕ್ಕಲಿಗರಿಗೆ ಯಾವಾಗಲೂ ಕೆಲಸ ಇದ್ದೇ ಇರತದ....ಆದರೆ ಏನೋ ಓದಿ ಹೇಳತೇವಿ ಅಂತೀರಿ ಅಂದಮೇಲೆ ಕೂಡತೇನಿ...."

ಎಂದು ಹೇಳಿ ಬಾಳಪ್ಪನೂ ಕಂಬಕ್ಕೆ ಆನಿಸಿ ಕುಳಿತುಬಿಟ್ಟ. ಅವನಿಗೆ ಮಾಸ್ತರರು ಓದುವದನ್ನು ಕೇಳುವುದೇ ಮುಖ್ಯ ಉದ್ದೇಶ ವಾಗಿರಲಿಲ್ಲ. ಮಗನ ಜೀವನದ ಮುಂದಿನ ಸಮಸ್ಯೆಯನ್ನು ಬಿಡಿಸ ಬೇಕಾಗಿತ್ತು. ಅವನಿಗೆ ಶ್ರೇಯಾಂಸನೊಂದು ಒಗಟಿನಂತೆ ಆಗಿದ್ದ. ಅವನ ವಿಷಯಕ್ಕೆ ಏನು ಮಾಡಬೇಕೆಂಬುದು ತಿಳಿಯದಾಗಿತ್ತು. ಅವನ ಗುರುಗಳೇನಾದರೂ ದಾರಿ ತೋರಿಸುವರೇನೋ ಎಂದು ಕೊಂಡಿದ್ದ. ಅದಕ್ಕಾಗಿಯೇ ಮುಂಜಾನೆಯ ವೇಳೆಯಲ್ಲಿ ಮನೆಯ ಎಲ್ಲ ಕೆಲಸಬೊಗಸೆಗಳನ್ನು ಬಿಟ್ಟು, ಮಗನ ಬರವಣಿಗೆಯನ್ನು ಓದುವಾಗ ಕೇಳಲು ಕುಳಿತಿದ್ದ.

ಆತ್ಮಾರಾಮರು ನಾಟಕವನ್ನು ಓದತೊಡಗಿದರು. ಅವರ ಹಾವಭಾವ ಯುಕ್ತ ವಾಚನ ಬಾಳಪ್ಪನ ಮನಸ್ಸನ್ನು ಸ್ವಲ್ಪ ಹೊತ್ತಿ ನಲ್ಲಿಯೇ ಸೆರೆ ಹಿಡಿಯಿತು. ಒಂದೆರಡು ಪ್ರವೇಶಗಳನ್ನು ಓದುವಷ್ಟರಲ್ಲಿ ಇಬ್ಬರೂ ನಾಟಕದಲ್ಲಿ ತನ್ಮಯರಾಗಿ ಬಿಟ್ಟರು! ತುಂಗೆಯ ತಡಿಯಲ್ಲಿ ವಿದ್ಯಾರಣ್ಯರಿಗೂ ಹುಕ್ಕ ಬುಕ್ಕರಿಗೂ ಮೊದಲ ಸಲ ಭೇಟಿಯಾದ ಪ್ರವೇಶದಿಂದ ನಾಟಕ ಆರಂಭವಾಗಿತ್ತು. ನಾಯಿಯನ್ನು ಬೆನ್ನಟ್ಟಿದ

ಮೊಲದ ಸಂಗತಿ ಕಣ್ಣಿಗೆ ಕಟ್ಟುವಂತೆ ವರ್ಣಿಸಲ್ಪಟ್ಟಿತು. ಆ ಮೇಲಾದ ಭುವನೇಶ್ವರಿಯ ಪ್ರಸಾದ, ಸುವರ್ಣವೃಷ್ಟಿ ಮೊದಲಾದ ಸನ್ನಿವೇಶಗಳೆಲ್ಲವೂ ಬಾಳಪ್ಪನನ್ನು ದಂಗುಗೊಳಿಸಿದ್ದವು. ಐದುನೂರು ವರ್ಷಗಳ ಹಿಂದಿನ ಜಗತ್ತಿನಲ್ಲಿ ಒಯ್ದು ಬಿಟ್ಟವು. ಬಸದಿಯಲ್ಲಿ ಪುರಾಣವನ್ನು ಕೇಳುವದಕ್ಕಿಂತಲೂ ಹೆಚ್ಚಾದ ಆಸೆಯಿಂದ ಬರಬರುತ್ತ ಕೇಳ ತೊಡಗಿದ. ಆಗಾಗ ಅವನ ಬಾಯಿಂದ 'ಆಂ! ಹಾಂ!' ಎಂಬ ಉದ್ಗಾರಗಳೂ ಹೊರಡ ತೊಡಗಿದವು. ನಡುವೆ ಓದುವದನ್ನು ತಡೆಯಲಿಕ್ಕೆಂದು ಬಂದ ಮಾಸ್ತರರ ಮೊಮ್ಮಗಳನ್ನು ತಾನೇ ತೊಡೆಯ ಮೇಲೆ ಕೂಡಿಸಿಕೊಂಡು ಬಿಟ್ಟ! ಆ ಕೂಸೂ ಕೂಡ ಅಜ್ಜನ ನಾಟಕವನ್ನು ಬೆರಗಿನಿಂದ ನೋಡುತ್ತ ಹಾಗೇ ಕುಳಿತಿತ್ತು!

ನಾಟಕವನ್ನು ಓದಿ, ಕೆಳಗಿಟ್ಟು ಕುಳಿತರು ಆತ್ಮಾರಾಮರು. ಅವರ ಮನಸ್ಸು ಇನ್ನೂ ಆ 'ವಿಜಯ ಸಾಮ್ರಾಜ್ಯ'ದ ವಾತಾವರಣವನ್ನು ಬಿಟ್ಟು ವಾಸ್ತವ ಪ್ರಪಂಚಕ್ಕೆ ಬಂದಿರಲಿಲ್ಲ. ಹಾಗೇ ದಿಙ್ಮೂಢರಾಗಿ ಕೆಲವು ಕಾಲ ಕಳೆದರು. ತಾವೂ ಅನೇಕ ನಾಟಕಗಳನ್ನು ಬರೆದಿದ್ದರು. ಆದರೆ ಈ ಪ್ರಸಾದ ಗುಣ ಅವುಗಳಲ್ಲಿ ಇಲ್ಲವೆಂಬುದು ಅವರಿಗೆ ಈಗ ಗೊತ್ತಾಯಿತು. ಅಲ್ಲದೆ ತಾವೆಂದೂ ಹೀಗೆ ಇರುಳೆಲ್ಲ ಕುಳಿತು ನಾಟಕ ಬರೆದು ಮುಗಿಸಿದ ಪ್ರಸಂಗವೂ ಇರಲಿಲ್ಲ. ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಆಡಲು ನಾಟಕ ಬೇಕಾಗಲು ಹಲವು ನಾಟಕಗಳನ್ನು ಆಗಾಗ ಬರೆದಿದ್ದರು. ಆದರೆ ಅವುಗಳಲ್ಲೊಂದೂ ಇವರ ಜೊತೆಗೆ ನಿಲ್ಲದು. ಇದರಲ್ಲಿರುವ ಜೀವಕಳೆಯೇ ಬೇರೆ. ಅವು ದೇಹವು ಮಾತ್ರ. ಇದಕ್ಕನ್ನಬೇಕು ನಾಟಕ....ಸಾಹಿತ್ಯ. ಬರೆಯಲಿಕ್ಕೇನು ಎಲ್ಲರಿಗೂ ಬರುತ್ತದೆ. ಇಂಥ ಬರಹ ಬರೆಯಲಿಕ್ಕೆ ಭಾಗ್ಯಬೇಕು, ಸಿದ್ಧಿ ಬಂದಿರಬೇಕು ಎಂದುಕೊಂಡರು.

"ಏಕೆ ಸುಮ್ಮನೆ ಕುಳಿತಿರಿ?"

ಬಾಳಪ್ಪನ ಈ ಪ್ರಶ್ನೆಯು ಆತ್ಮಾರಾಮರನ್ನು ಹೊರಗಿನ

ಜಗತ್ತಿನ ಕಡೆಗೆ ಎಳೆಯಿತು.

"ಏನು ಮಾಡಲಿ ?"

ಮಾಸ್ತರರ ಈ ಮರುಪ್ರಶ್ನೆಯಿಂದ ಮುಂದೆ ಏನು ಮಾತಾಡ ಬೇಕೆಂಬುದೂ ಬಾಳಪ್ಪನಿಗೆ ಹೊಳೆಯಲಿಲ್ಲ. ಅವನೂ ಸುಮ್ಮನೆ ಕುಳಿತ. ತುಸು ಹೊತ್ತು ಸರಿಯಿತು. ತಿರುಗಿ ಆತ್ಮಾರಾಮರೇ ಕೇಳಿದರು.

"ಹೇಗಿದೆ ನಾಟಕ ?"

"ಅವನು ಬರೆದದ್ದಕ್ಕಿಂತ ನೀವು ಓದಿದ್ದು ಚೆನ್ನಾಗಿದೆ...."

"ಹೆಣ್ಣೇ ಚೆಲುವಿರದಿದ್ದರೆ ಉಡಿಗೆ ತೊಡಿಗೆಗಳಿಂದ ಚೆಂದ ಕಂಡೀತೇ ಬಾಳಪ್ಪ ?"

ಬಾಳಪ್ಪ ಸುಮ್ಮನಾದ. ಅವನ ಮುಖವೂ ಪ್ರಸನ್ನವಾಗಿತ್ತು ಸ್ವಲ್ಪ ಹೊತ್ತು ಕುಳಿತು ಆ ಮಾತು ಈ ಮಾತು ಆಡಿ, ಮಗನ ಜೀವನದ ವಿಷಯಕ್ಕೆ ಬರಬೇಕೆಂದು ಹವಣಿಸಿದ. ಆದರೆ ಈ ರಸ ನಿಮಿಷವನ್ನು ವಿಷನಿಮಿಷವನ್ನಾಗಿ ಮಾಡಲು ಆತ್ಮಾರಾಮರು ಮನಸ್ಸು ಮಾಡಲಿಲ್ಲ. ಅದರಿಂದ ಅನಿವಾರ್ಯವಾಗಿ ಬಾಳಪ್ಪ ಎದ್ದು ಮನೆಯ ಕಡೆಗೆ ಬರಬೇಕಾಯಿತು.

ಮಗನ ಬರವಣಿಗೆಯನ್ನು ನೋಡಿ ಬಾಳಪ್ಪನ ಮನಸ್ಸೇನೋ ಸಮಾಧಾನಗೊಂಡಿತ್ತು. ಆದರೆ ಅವನ ಚಿಂತೆ ತಪ್ಪಿರಲಿಲ್ಲ. 'ಹೀಗೆ ನಾಟಕ ಬರೆಯುವುದರಿಂದ ಹೊಟ್ಟೆ ಏನಾದರೂ ತುಂಬುತ್ತದೆಯೇ ?' ಎಂಬುದೇ ಅವನನ್ನು ಈಗ ಕಾಡುತ್ತಿರುವ ಪ್ರಶ್ನೆ. ನಾಲ್ಕು ಜನ ಕುಳಿತು ಓದಿಯಾರು, ಹೌದೆಂದಾರು, ಆದರೆ ಮುಂದೇನು? ಇನ್ನೇನು ನಾಟಕ ಆಡುತ್ತ ಊರೂರು ತಿರುಗಿದರೆ ನಾಲ್ಕು ದುಡ್ಡು ಹುಟ್ಟಿ ಯಾವು........

ಈ ವಿಚಾರವೇ ಬಾಳಪ್ಪನ ಮನಸ್ಸನ್ನು ಅಧೀರಗೊಳಿಸು ವುದು. ಮಗನು ಬಣ್ಣ ಬಳಿದುಕೊಂಡು ನಾಟಕ ಮಾಡುತ್ತ

ತಿರುಗಿದರೆ....? ರೆ ? ಇಂದು ಇದನ್ನು ಮಾಡಿದವ ನಾಳೆ ಅದನ್ನೂ ಮಾಡದೆ ಇರುವನೆ ? ಹುಡುಗ ಮನುಷ್ಯರೊಳಗಿಂದ ಹೋಗಿ ಬಿಟ್ಟಂತೆಯೇ ಆದೀತಲ್ಲ....!

ಈ ವಿಚಾರಕ್ರಮವು ಸಂತಸಗೊಂಡ ಬಾಳಪ್ಪನ ಮನಸ್ಸನ್ನು ತಿರುಗಿ ದುಃಖದ ಮಡುವಿನಲ್ಲಿ ಒಯ್ದು ಹಾಕಿ ಬಿಟ್ಟಿತು. ಚಿಂತೆಯ ಭಾರವನ್ನು ಹೊತ್ತುಕೊಂಡೇ ಮನೆಯ ಕಟ್ಟೆಯನ್ನು ಹತ್ತಿದ.

"ಏಕೆ ? ಶ್ರೇಯಾಂಸ ಮಾಸ್ತರರ ಮನೆಯಲ್ಲಿ ಇಲ್ಲ ?"

ಗಾಬರಿಯಿಂದ ಸರಸವ್ವ ಕೇಳಿದಳು. ಧ್ವನಿಯಲ್ಲಿ ಆತುರ ವಿದ್ದಿತು.

"ಇರದೆ ಎಲ್ಲಿ ಹೋಗತಾನೆ ? ಕತ್ತೆ ತಪ್ಪಿದರೆ ಹಾಳು ಗೋಡೆಗೆ ಹೋದಂತೆ...."

"ಹೋಗಲಿ ತಾಯಿ !"

"ಹೋಗಿದಾನಲ್ಲ...."

"ಕರೆದುಕೊಂಡೇಕೆ ಬರಲಿಲ್ಲ ನೀವು ?"

"ಇನ್ನೂ ಮಲಗಿಕೊಂಡಾನ...."

"ಯಾಕೆ ? ಮೈಯೊಳಗೆ ನೆಟ್ಟಗಿಲ್ಲೇನು ಮತ್ತೆ ?"

ಮಾತಿನಲ್ಲಿ ಉದ್ವೇಗ ತುಂಬಿದ್ದಿತು.

"ನೆಟ್ಟಗಿರಲಿಕ್ಕೆ ಅವನಿಗೇನಾಗೇದ....?"

"ಸಿಟ್ಟು ಗಿಟ್ಟು ಮಾಡಿದಾನೇನು ಮತ್ತ ! ಪದ್ಮಪ್ಪಣ್ಣನ ಕಳಿಸಿರಿ....ಹೋಗಿ ಕರೆದುಕೊಂಡು ಬರಲಿ. ನಿನ್ನೆ ಯಾವಾಗ ಹರಿಹೊತ್ತು ಉಂಡಾನ ಹುಡುಗ....ನನಗೆಲ್ಲಿ ಕೆಟ್ಟಬುದ್ಧಿ ಗಂಟ ಬಿತ್ತೋ....ನಿನ್ನೇ ಸಂಜಿನಾಗ...."

ಒಂದೇ ಉಸುರಿನಲ್ಲಿ ಬಡಬಡ ನುಡಿದಳು ಸರಸವ್ವ....

"ಸಿಟ್ಟುಮಾಡಿಲ್ಲ, ಬೆಳತನಕ ನಾಟಕ ಬರೆದು ಮಲಗಿದಾನ ನಿನ್ನ ಮಗಾ !".

ಬಾಳಪ್ಪನ ದನಿಯಲ್ಲಿ ಈಗ ಕೊಂಕು ಇತ್ತು.

"ನಾಟಕ ಮಾಡುವ ಹುಚ್ಚ. ಈಗ ಮತ್ತ್ಯಾರು ನಮ್ಮ ಹುಡುಗನ ತಲಿಯೊಳಗ ತುಂಬಿದರು ಪುಣ್ಯಾತ್ಮರು....? ಸುಮ್ಮನೆ ಹೊಲಕ್ಕೆ ಒಯ್ಯಿರಿ ಅಂದರೆ ನೀವು ಕೇಳುವದಿಲ್ಲ ಊರೊಳಗ ತಿರುಗಲಿಕ್ಕೆ ಬಿಡುವಿರಿ. ಹೀಗೆ ಹುಡುಗ ಹಾಳು ಆಗ್ತಾನ. ಹನ್ನೆರಡ ಹುಡುಗರ ಕೆಟ್ಟ ಸಂಗತಿ. ಆ ಮಾಸ್ತರರ ಮನೆಯೊಳಗ ಎಂಥೆಂಥವರೆಲ್ಲ ಕೂಡತಾರೋ ಏನು ಮಣ್ಣೋ! ಈಗ ಹುಡುಗ ಸ್ವಲ್ಪ ಹಾದಿಗೆ ಹತ್ತಿದ್ದ....ಅಷ್ಟರೊಳಗೆ...."

ಹೆಂಡತಿಯ ಮಾತನ್ನು ನಡುವೆಯೇ ತಡೆದು ಬಾಳಪ್ಪ

"ಇನ್ನೂ ನಾಟಕ ಆಡಲಿಕ್ಕೆ ಹತ್ತಿಲ್ಲ, ಈಗ ಬರೆಯಲಿಕ್ಕೆ ಹತ್ತ್ಯಾನೆ...."

ಎಂದು ವಿವರಿಸಿದ. ಮಾತಿನಲ್ಲಿ ಮಾರ್ಮಿಕತೆ ಇತ್ತು.

ಹೀಗೆ ಬಾಳಪ್ಪ ಮನೆಗೆ ಹೋಗಿ ಹತ್ತುವಷ್ಟರಲ್ಲಿ ಶ್ರೇಯಾಂಸನೂ ಎದ್ದು ಕೆಳಗಿಳಿದು ಪಡಸಾಲೆಗೆ ಬಂದ. ಇನ್ನೂ ಮಾಸ್ತರರು ನಾಟಕದ ಪ್ರತಿಯನ್ನು ಮುಂದೆಯೇ ಇಟ್ಟುಕೊಂಡು ಕುಳಿತಿದ್ದರು. ಶ್ರೇಯಾಂಸ ಬಂದುದನ್ನು ಕಂಡು, ಮುಖ ತೊಳೆದುಕೊಳ್ಳಲು ನೀರು ಕೊಡಲಿಕ್ಕೆ ಹೇಳಿದರು. ಮಾಸ್ತರರ ಹೆಂಡತಿ ನೀರಿನ ತಂಬಿಗೆ ಯೊಂದನ್ನು ತಂದು ಹೊರಗೆ ಇಟ್ಟರು. ಜೊತೆಗೆ ಸೀ ಸಜ್ಜಿಗೆ ಯೊಂದಿಷ್ಟು ತಂದುಕೊಟ್ಟರು. ಶ್ರೇಯಾಂಸ ಮುಖ ತೊಳೆದುಕೊಂಡು ಬಂದು ಸಜ್ಜಿಗೆಯ ಬಟ್ಟಲಿಗೆ ಕೈಹಾಕಿದ. ತುಂಬ ಹಸಿವಾಗಿತ್ತವನಿಗೆ. ಅಷ್ಟನ್ನೂ ಗಬಗಬನೆ ತಿಂದು ಮುಗಿಸಿದ, ನೀರನ್ನು ಕುಡಿಯುತ್ತ ಕೇಳಿದ :

"ಹೇಗೆನಿಸಿತು ನಾಟಕ....?"

"ಚೆನ್ನಾಗಿದೆ...."

"ಪೂರ್ಣ ಓದಿದಿರಾ ?"

"ಇದೇ ಓದಿ ಇಲ್ಲೇ ಕುಳಿತಿರುವೆ...."

"ವಿಜಯನಗರ ಕಾಲದ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದಕ್ಕೆ ಸಾಕಷ್ಟು ಗ್ರಂಥಗಳು ಸಿಕ್ಕಲಿಲ್ಲ .... ಏನೇನು ತಪ್ಪು ತಪ್ಪಾಗಿ ಇರುವುದೋ ?"

"ಇಲ್ಲ ; ಸುಂದರವಾಗಿ ಇಳಿದಿದೆ. ಶಿವನ ತಲೆಯಿಂದ ಗಂಗೆ ಇಳಿಯುವಂತೆ...."

"ಬಹಳ ದೊಡ್ಡ ಮಾತು ಹೇಳುವಿರಿ ಮಾಸ್ತರರೆ !"

"ಬಹಳ ಸಣ್ಣ ಮಾತು ಶ್ರೇಯಾಂಸ ಇದು...."

ಎಂದು ಎದ್ದು ಬಿಗಿದಪ್ಪಿದರು ಶ್ರೇಯಾಂಸನನ್ನು. ಕಣ್ತುಂಬ ಅವನನ್ನೊಮ್ಮೆ ನೋಡಿದರು. ಆನಂದಬಾಷ್ಪಗಳು ಅವರ ಕಣ್ಣು ಗಳಿಂದ ಉದುರಿದವು. ಮೆಲ್ಲನೆ ಕೇಳಿದರು :

"ಮನೆಯ ಕಡೆಗೆ ಹೋಗಿ ಬರುವೆಯಾ ?"

"ಹೌದು !"

"ಈಗ ನಿಮ್ಮ ತಂದೆಯವರು ಬಂದಿದ್ದರು !"

"..............."

"ಅವರಿಗೂ ಓದಿ ಹೇಳಿದೆ...."

ಪ್ರತಿಯಾಗಿ ಶ್ರೇಯಾಂಸ ಅದಕ್ಕೇನೂ ಕೇಳಲಿಲ್ಲ. ಎದ್ದು ಮನೆಯ ಕಡೆಗೆ ನಡೆದ. ಅವನ ನಡಿಗೆಗಿಂತ ಮುಂದೆ ವಿಚಾರ ಓಡುತ್ತಿದ್ದಿತು. ಬಹಳ ಹೊತ್ತು ಮಲಗಿಬಿಟ್ಟೆ. ನಿನ್ನೆ ಮನೆಯನ್ನು ಬಿಡುವಾಗ ಊಟವನ್ನೂ ಮಾಡದೆ ಹಾಗೇ ಬಂದಿದ್ದೆ. ಅದಕ್ಕೇ ತಂದೆಯವರು ಮಾಸ್ತರರ ಮನೆಗೆ ಬಂದಿರಬೇಕು. ಕೋಪಿಸಿ ಕೊಂಡಿದ್ದಾರೋ ಏನೋ ? ಅದರಲ್ಲಿ ಗುರುಗಳು ನಾಟಕವನ್ನು ಬೇರೆ ಓದಿ ತೋರಿಸಿದರು .... ಅದರಿಂದ ಮತ್ತೇನು ಅನುಮಾನ ಕಟ್ಟಿ ಇರುವರೋ ನನ್ನ ವಿಷಯದಲ್ಲಿ....?

ಶ್ರೇಯಾಂಸನ ಇನ್ನೊಂದು ಮನಸ್ಸು 'ವಿಜಯ ಸಾಮ್ರಾಜ್ಯ'

ನಾಟಕದ ದೃಶ್ಯಗಳನ್ನು ತಿರುಗಿ ನೆನೆಯುತ್ತಿದ್ದಿತು. ಅವುಗಳ ಸೊಬಗನ್ನು ರಂಗಸ್ಥಳದಲ್ಲಿಟ್ಟು ನೋಡಿ ಆನಂದಿಸುತ್ತಿದ್ದಿತು. ಶ್ರೀ ವಿದ್ಯಾರಣ್ಯ ಸ್ವಾಮಿಗಳ ಗಂಭೀರವಾಣಿ ಅವನ ಕಿವಿಯಲ್ಲಿ ನಿನದಿಸುತ್ತಿದ್ದಿತು, ಕರ್ನಾಟಕದ ಕಹಳೆಯನ್ನು ಊದುತ್ತಿದ್ದಿತು, ನಾಡಸೇವೆಗೆ ಕರೆಯುತ್ತಿದ್ದಿತು.

ಎಂಥದೋ ಒಂದು ಗುಂಗಿನಲ್ಲಿಯೇ ಸಾಗಿದ್ದ ಶ್ರೇಯಾಂಸ.

"ಶ್ರೇಯಾಂಸ !"

ಕರೆ ಕಿವಿಯನ್ನು ಸೇರಲಿಲ್ಲ.

"ಶ್ರೇಯಾಂಸ ! ಏಯ್ ಶ್ರೇಯಾಂಸ !"

ಈ ಸಲ ತಿರುಗಿ ನೋಡಿದ ಶ್ರೇಯಾಂಸ. ಲಲಿತೆ ಬಾಗಿಲಲ್ಲಿ ನಿಂತು ಕರೆಯುತ್ತಿದ್ದಳು. ನಗುಮೊಗ, ಹದಿನಾರು ವರ್ಷದ ಹರೆಯದ ಹುಡುಗಿ; ಚೆಲುವಿನ ನಿಲುವು, ಬೆಡಗಿನ ನೋಟ, ಮನ ಸೆಳೆಯುವ ಒಯ್ಯಾರದಿಂದ ಕೇಳಿದಳು :

"ಏಕೆ, ಅವಸರವೇನು ?"

"ಅಹುದು ; ಇ....ಲ್ಲ....! "

"ನಿಮ್ಮ ಕಡೆಗೆ ಕೆಲಸವಿತ್ತು...."

"ಮತ್ತೇನು ? ಮಕರದ ಸಿಂಗರವೊ ?"

"ಹೂಂ ! ಮೇಲಿಂದ ಮೇಲೆ ಅದೇ ಇರುತ್ತದೆ...."

ನಸು ಗೋಣು ಕೊಂಕಿಸಿದಳು ನವಿಲಿನಂತೆ. ಮುಖದಲ್ಲಿ ಮಂದಹಾಸವೊಂದು ಮೂಡಿತು.

"ಏನು ಹೇಳು. ನಾನು ಮನೆಗೆ ಹೋಗಬೇಕು. ಮುಂಜಾನೆ ಯಿಂದ ಮನೆಯ ಕಡೆಗೇ ಹೋಗಿಲ್ಲ...."

"ಹೋ....ಗು !"

ಶ್ರೇಯಾಂಸ ನಾಲ್ಕು ಹೆಜ್ಜೆ ಅವಳ ಕಡೆಗೇ ಬರುತ್ತ

"ಯಾಕೆ ಕರೆದೆ ?"

"ಅವಸರವಿದ್ದರೆ ಹೋಗಲ್ಲ; ಇನ್ನೊಮ್ಮೆ ಹೇಳುವೆ...."

"ಅಂಥದೇನು ಮಾತು ?"

"ಏನೋ !"

ಚೆಲ್ಲಾಟದ ಸ್ವರದಲ್ಲಿ ನುಡಿದಳು ಲಲಿತೆ.

ಶ್ರೇಯಾಂಸ ಹೊರಳಿ ನಡೆದ.

"ನಿನಗೆ ಪುಸ್ತಕ ಯಾರು ಕಳಿಸುತ್ತೇವೆಂದಿದ್ದರು ?"

ಪುಸ್ತಕ ಎಂಬ ಶಬ್ದ ಕಿವಿಗೆ ಬೀಳುತಲ್ಲೇ ಶ್ರೇಯಾಂಸ ಮತ್ತೆ ಹೊರಳಿ ನಿಂತ. ಧೇನಿಸಹತ್ತಿದ. ಅವನಿಗೆ ಕೂಡಲೆ ಯಾರ ಹೆಸರೂ ನೆನಪಾಗದಾಯಿತು. ತಿರುಗಿ ಅವಳಿಗೇ ಕೇಳಿದ—

"ಏಕೆ ?"

"ಯಾಕಿಲ್ಲ; ಸಹಜ ಕೇಳಿದೆ...."

"ಕೆಲಸವಿಲ್ಲವೇನು ?"

"ಯಾರಿಗೆ ?"

"ನಿನಗೆ...."

"ಅಂತಲೇ ನಿನ್ನ ಹಮಾಲಿ ಮಾಡಬೇಕಾಗಿದೆಯಲ್ಲ !"

"ಯಾತರ ಹಮಾಲಿ ?"

"ಪುಸ್ತಕ ಹೊತ್ತು ತರುವುದು !"

ಇಷ್ಟು ಹೇಳಿ ಲಲಿತಾ ಒಳಗೆ ಹೋದಳು. ಶ್ರೇಯಾಂಸ ತಾನಾಗಿಯೇ ಹಿಂಬಾಲಿಸಿದ. ಎದುರಿಗೆ ಪಡಸಾಲೆಯಲ್ಲಿ ಕುಳಿತ. ಅಕ್ಕಾಸಾನಿ ಶ್ರೇಯಾಂಸನನ್ನು ಸ್ವಾಗತಿಸಿದಳು.

"ಬಾ, ಶ್ರೇಯಾಂಸ."

"ಬಂದೆ...."

"ಪಲ್ಲಂಗದ ಮೇಲೆ ಕೂಡು...."

ಕುಳಿತ ಶ್ರೇಯಾಂಸ. ಸಾನಿ ಕೋಣೆಯ ಕಡೆಗೆ ಹೊರಳಿ

"ಶ್ರೇಯಾಂಸ ಬಂದು ಕೂತಾನ ನೋಡಬೇ....ಲಲಿತಾ...."

"ಹೂಂ ! ಬಂದೆ."

ಲಲಿತೆಯ ಸ್ವರ ಭಾರವಾಗಿತ್ತು. ಸ್ವಲ್ಪಹೊತ್ತು ಒಳಗೆ ಏನೋ ಮಾಡುತ್ತ ಕಳೆದಳು. ಮನಸ್ಸಿನಲ್ಲಿ ಕಳವಳ. ಶ್ರೇಯಾಂಸ ನೆಟ್ಟಗೆ ಒಳಗೇ ಬರಲಿಲ್ಲವಲ್ಲ. ಮತ್ತೂ ತುಸು ತಡೆದಳು, ಒಳಗೇ ಬರಲಿ ಎಂದು.

ಶ್ರೇಯಾಂಸನಿಗೆ ಏನೂ ತಿಳಿಯದಾಯಿತು. ಕುಳಿತಲ್ಲಿಯೇ ಮಿಸುಕಾಡಹತ್ತಿದ. ಪಲ್ಲಂಗ ಚಿರ್ ಎಂದಿತು.

"ಲಲಿತಾ!" ಎಂದಳು ಅಕ್ಕಾಸಾನಿ.

"ಇಲ್ಲೇ ಕೂಡಿಸಿ ಹೋದೆ ಏನು ಶ್ರೇಯಾಂಸನ....?"

"ಇ....ಲ್ಲ...."

ಮತ್ತೂ ತಡೆದಳು ಲಲಿತೆ.

ಕೋಣೆಯ ಬಾಗಿಲ ಕಡೆಗೊಮ್ಮೆ ತಲೆಬಾಗಿಲ ಕಡೆಗೊಮ್ಮೆ ನೋಡತೊಡಗಿದ ಶ್ರೇಯಾಂಸ.

"ಊಟವಾಯಿತೆ ?"

ಹುಡುಗನ ಕೂಡ ಏನಾದರೂ ಮಾತನಾಡಲೆಂದು ಸಾನಿ ಕೇಳಿದಳು.

"ಇ....ಲ್ಲ...."

"ಹೊತ್ತಾಯಿತಲ್ಲ....!"

"ಮಾಸ್ತರರ ಮನೆಯಲ್ಲಿ ಕುಳಿತಿದ್ದೆ........ಹಾಗೇ ಹೊತ್ತು ಆಯಿತು...."

"ನಿಮ್ಮ ತಂದೆ ಯಾಕೋ ಮುಂಜಾನೆಯಿಂದ ಎರಡು ಸಲ ಬಂದು ಹೋದರಲ್ಲ ಮಾಸ್ತರರ ಮನೆಗೆ ?"

"ನನ್ನನ್ನು ಕರೆಯಲಿಕ್ಕೇ ಬಂದಿರಬೇಕು...."

"ಯಾಕೆ, ಸಿಟ್ಟುಮಾಡಿರುವೆ ಏನು ?"

"ಇಲ್ಲ ; ಮಲಗಿದ್ದೆ...."

"ವೈಯಲ್ಲಿ ನೆಟ್ಟಗಿಲ್ಲವೇ ?"

"ಇದೆ; ಬಹಳ ಹೊತ್ತು ರಾತ್ರಿ ಬರೆಯುತ್ತ ಕುಳಿತಿದ್ದೆ...."

"ಏನದು ?"

"ಒಂದು ನಾಟಕ...."

"ನಾಟಕ ಬರೆಯುವೆಯಾ ?"

"ಏನೋ ಪ್ರಯತ್ನ...."

"ಹಾಗಾದರೆ ಇಂದು ಮಿರಜಿಗೆ ನಾಟಕಕ್ಕೆ ನಡೆಯಲ್ಲ... ಬಾಲಗಂಧರ್ವನ ಕಂಪನಿ ಬಂದಿದೆ...."

ಶ್ರೇಯಾಂಸ ಸುಮ್ಮನಾದ. ಆದರೆ ಅವನ ಮುಖವನ್ನು ಯಾವದೋ ಒಂದು ಚಿಂತೆ ಆವರಿಸಿತಾಕ್ಷಣ. ವಿಚಾರಮಗ್ನನಾದ ಅದನ್ನು ಗಮನಿಸಿ ಸಾನಿ ಮತ್ತೆ ಮಗಳನ್ನು ಕೂಗಿದಳು.

"ಲಲಿತಾ...."

"ಬಂದೆ !"

ಮಾತಿನೊಡನೆ ಲಲಿತೆ ಪಡಸಾಲೆಗೆ ಬಂದಳು. ಅವಳ ಕೈಯ್ಯಲ್ಲಿ ಎರಡು ಪುಸ್ತಕಗಳು ಇದ್ದುವು. ಒಂದು ವಿನಾಯಕರ 'ಕಲೋಪಾಸಕ.' ಇನ್ನೊಂದು ವಿಜಯನಗರ ಸಾಮ್ರಾಜ್ಯದ ಆರು ನೂರು ವರ್ಷಗಳ ಸ್ಮಾರಕೋತ್ಸವದ ಕಾಲಕ್ಕೆ ಪ್ರಕಟವಾದ ಹಿರಿಯ ಹೊತ್ತಿಗೆ ಆ ಹಿರಿಯ ಹೊತ್ತಿಗೆಯೊಂದನ್ನು ಕೊಡುತ್ತ ಲಲಿತೆ ನುಡಿದಳು.

"ಕಲೋಪಾಸಕ ಎರಡು ದಿನ ನನಗಿರಲಿ ?"

"ನೋಡಿ ನಿನಗೇ ಕೊಡುವೆ ತಾ...."

ಶ್ರೇಯಾಂಸ ಎರಡೂ ಪುಸ್ತಕಗಳನ್ನು ನೋಡಿದ ಹಾಯಸ್ಕೂಲಿನಲ್ಲಿಯ ವಾಚನಾಲಯದ ಪುಸ್ತಕಗಳವು. ಭಕ್ತಿಯಿಂದ ಕಣ್ಣಿಗೊತ್ತಿಕೊಂಡು ಕೇಳಿದ—

"ಯಾರು ತಂದರಿವನ್ನು ?"

"ನಿನ್ನೆ ಗೌಡರು ಹೋಗಿದ್ದರು...."

ಮಗಳ ಮಾತನ್ನು ನಡುವೆಯೇ ತಡೆದು ಸಾಸಿ ಕೇಳಿದಳು.

"ನಿನ್ನೆ ರಾತ್ರಿ ಜಿನಗೌಡರು ತಂದ ಪುಸ್ತಕ ಹೌದು !"

ತಾಯಿಯ ಮಾತಿಗೆ ಮಗಳು ಉತ್ತರ ಹೇಳದೆ ತನ್ನ ಮಾತನ್ನೇ ಮುಂದರಿಸಿದಳು :

"ಈ ಎರಡು ಪುಸ್ತಕಗಳನ್ನು ನಿನಗೆ ಕೊಡಲಿಕ್ಕೆ ಹೇಳಿದ್ದಾರೆ ಗೌಡರು. ಯಾರೋ ನಿನ್ನ ಗೆಳೆಯರು, ಹಾಯಸ್ಕೂಲಿನಲ್ಲಿ ಓದುತ್ತಾರಂತಲ್ಲ....ಅವರು ಕಳಿಸಿಕೊಟ್ಟಿದ್ದಾರೆ. ಮುಂದಿನ ರವಿವಾರ ವಕೀಲರು ಬಂದಾಗ ಕೊಟ್ಟು ಕಳಿಸಲಿಕ್ಕೆ ಹೇಳಿದ್ದಾರೆ....ಅದರಲ್ಲಿ ನಿನಗೊಂದು ಪತ್ರವಿದೆ ನೋಡು...."

ಶ್ರೇಯಾಂಸ ಪತ್ರವನ್ನು ತೆಗೆದುಕೊಂಡು ಓದಿದ ಪತ್ರ ಮೂರ್ತಿಯ ಕರುಣಿನ ಮಿಡಿತವನ್ನೇ ಅದರಲ್ಲಿ ಕಂಡನಾತ. ಹತ್ತೆಂಟು ಸಾಲಿನ ಆ ಪತ್ರದಲ್ಲಿ ಎಷ್ಟೊಂದು ಭಾವನನ್ನು ಆತ ತುಂಬಿ ಕಳಿಸಿದ್ದನೋ ! ತಿರುತಿರುಗಿ ನಾಲ್ಕೆಂಟು ಸಲ ನಿಂತಲ್ಲಿಯೇ ಆ ಕಾಗದವನ್ನು ಓದಿದ. ಅವನ ಭಾವಸಮಾಧಿಯನ್ನು ಕಂಡು,

"ಯಾಕೆ, ಓದುವುದು ಮುಗಿಯಲಿಲ್ಲವೇ ?"

"ಮುಗಿಯಿತಲ್ಲ...."

ಕಾಗದವನ್ನು ಮುಚ್ಚಿ ಪುಸ್ತಕದಲ್ಲಿಟ್ಟ. ಯಾವದೋ ಒಂದು ವಿಚಾರದಲ್ಲಿ ಮಗ್ನನಾಗಿ ಎರಡೂ ಪುಸ್ತಕಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊರಳಿ ನಡೆದ ಶ್ರೇಯಾಂಸ.

"ನನಗೆ ಪುಸ್ತಕ ಕೊಡಲಿಲ್ಲವಲ್ಲ ?"

"ಹೇಗೋ ?"

"ನಿನಗೇ ಎರಡೂ ಬೇಕಾಗಿತ್ತೇ ?"

"ಇಲ್ಲ ! ಮರೆತು ಒಯ್ಯುತ್ತಿದ್ದೆ....ನಿನಗೆ ಯಾವುದು ಬೇಕು ?"

"'ಕರ್ಮೋಪಾಸಕ' ಓದುತ್ತಿದ್ದೆ...."

ಅನುಮಾನಿಸುತ್ತ ನುಡಿದಳು ಲಲಿತಾ

"ಅದನ್ನೇ ಇಟ್ಟುಕೋ; ನಾನು ಮೊದಲು ವಿಜಯನಗರ ಸಾಮ್ರಾಜ್ಯದ ವಿಷಯಕ್ಕೇನೇ ಓದಬೇಕಾಗಿದೆ...."

ಎಂದು ಪುಸ್ತಕವನ್ನು ಅವಳ ಕೈಗೆ ಕೊಟ್ಟು ಶ್ರೇಯಾಂಸ ನಡೆದ. ಲಲಿತಾ ಕಸಬಿಣಿಯ ಮಗಳಾದರೂ ಶ್ರೇಯಾಂಸನೊಡನೆ ಚಿಕ್ಕಂದಿನಲ್ಲಿ ಕೂಡಿ ಆಡಿದವಳು. ಒಂದೇ ಓಣಿಯೊಳಗಿನ ಹುಡುಗರವರು! ಕೆಲವು ದಿನ ಆತ್ಮಾರಾಮ ಮಾಸ್ತರರ ಮನೆಗೆ ಅಭ್ಯಾಸ ಹೇಳಿಸಿಕೊಳ್ಳಲಿಕ್ಕೆ ಅವಳೂ ಬರುತ್ತಿದ್ದಳು. ಕೋಣೆಯೊಳಗಿದ್ದೇ ತಾಯಿಗೂ ಶ್ರೇಯಾಂಸನಿಗೂ ನಡೆದ ಮಾತುಕತೆಗಳನ್ನೆಲ್ಲ ಅವಳೂ ಕೇಳಿದ್ದಳು. ಹೇಗಾದರೂ ಜಿನಗೌಡ ತನ್ನ ತಾಯಿಯನ್ನು ತನ್ನನ್ನು ಇಂದು ಮಿರಜಿಗೆ ನಾಟಕಕ್ಕೆ ಕರೆದೊಯ್ಯುವವನಿದ್ದಾನೆ. ಜೊತೆಗೆ ಶ್ರೇಯಾಂಸನನ್ನು ಏಕೆ ಕರೆದುಕೊಳ್ಳಬಾರದು ಎಂದು ವಿಚಾರಿಸಿದಳು. ವಿಚಾರ ಬಂದುದೇ ತಡ ಕೇಳಿಯೇಬಿಟ್ಟಳು:

"ಶ್ರೇಯಾಂಸ, ನೀನೂ ನಾಟಕಕ್ಕೆ ನಡೆಯಲ್ಲ!"

ಮಗಳ ಈ ಅಧಿಕಪ್ರಸಂಗತನ ಅಕ್ಕಾಸಾನಿಗೆ ಸೇರಲಿಲ್ಲ. ಅವಂಳಿದಳು:

"ಅವರ ಮಾವ ನೆತ್ತಿಯಿಂದ ಜೀವ ಬಿಟ್ಟಾನಲ್ಲ...."

"ಯಾರು?"

"ಪದ್ಮಪ್ಪ! ಗೊತ್ತಿಲ್ಲೇನು ನಿನಗೆ? ಅವರೆಷ್ಟು ಮಡಿ ಮಾಡತಾರೆ, ಶಾಸ್ತ್ರ ಓದೋದೇನು, ಬಸ್ತಿಗೆ ಹೋಗೋದೇನು. ಅಲ್ಲೇನು ನಡೆಯುವದಿಲ್ಲ ಬಿಡು. ನಮ್ಮ ಮನೆಯೊಳಗೆ ಬಂದದ್ದು ತಿಳಿದರೇನೇ....ರಂಭಾಟ ಮಾಡಿಬಿಟ್ಟಾರು. ಇನ್ನು ನಿನ್ನ ಕೂಡ ನಾಟಕಕ್ಕೆ ಕಳಿಸುತ್ತಾರೆಯೇ?"

"ಜಿನಗೌಡ ತಾತಾ ಅವರಕ್ಕಿಂತ....ಹೆಚ್ಚು ಬಸ್ತಿ ಹುಚ್ಚು ಅದ ಅವರಿಗೆ? ಗೌಡರು ಸ್ವತಃ ಮೂರು ಸಾವಿರ ಖರ್ಚುಮಾಡಿ ಬಸತಿ ಕಟ್ಟಿದಾರಲ್ಲ! ಹೀಗೇನೂ ಬೇರೆ ಇಲ್ಲs ಪದ್ಮಪ್ಪನದು?"

ಮಗಳಿಗೆ ಪ್ರಪಂಚದ ಜ್ಞಾನ ಸಾಲದೆಂದು ಅಕ್ಕಾಸಾನಿ ಸುಮ್ಮ ನಾದಳು. ಶ್ರೇಯಾಂಸನೂ ಅಲ್ಲಿ ಹೆಚ್ಚು ಹೊತ್ತು ನಿಲ್ಲದೆ ಮನೆಯ ಕಡೆಗೆ ನಡೆದುಬಿಟ್ಟ. ಆಗ ಅವನ ತಲೆಯಲ್ಲಿದ್ದುದು ಒಂದೇ ವಿಚಾರ.

'ಈ ಪುಸ್ತಕ ಓದಿದ ಮೇಲೆ 'ವಿಜಯ ಸಾಮ್ರಾಜ್ಯ' ಬರೆದಿದ್ದರೆ ನೆಟ್ಟಗಿತ್ತೇನೋ ! ಇತಿಹಾಸಕ್ಕೆ ಎಷ್ಟು ಅನ್ಯಾಯವಾಗಿದೆಯೋ ನನ್ನ ನಾಟಕದಲ್ಲಿ !

ಈ ವಿಚಾರದಿಂದ ಶ್ರೇಯಾಂಸನ ಹಸಿವು ನೀರಡಿಕೆಗಳೆಲ್ಲ ಹಾರಿ ಹೋದುವು. ಆ ಹೆಬ್ಬೊತ್ತಿಗೆಯನ್ನು ಓದಿ ಮುಗಿಸಲು ಅವನ ಮನಸ್ಸು ತವಕಗೊಳ್ಳುತ್ತಿತ್ತು.

೧೪

ಪದ್ಮಪ್ಪ ಅವಸರ ಅವಸರದಿಂದ ಬರುತ್ತಿದ್ದ. ಪ್ಯೈಪೋಲ್ ಹೊತ್ತುಕೊಂಡ ಖದ್ದರ ಬಟ್ಟೆಯ ತುಂಡು ಜಾರಿದುದರ ಕಡೆಗೆ ಅವನ ಲಕ್ಷ್ಯವಿರಲಿಲ್ಲ. ಆದರೂ ತಲೆ ಕೆಳಗೆ ಹಾಕಿ ಕಾಲಲ್ಲಿ ಕ್ರಿಮಿಕೀಟಕಗಳು ಸಿಕ್ಕಿ ಸತ್ತಾವೆಂದು ಎಚ್ಚರದಿಂದ ನಡೆದಿದ್ದ. ಎದುರಿಗೆ ಎಮ್ಮೆಗಳನ್ನು ಹೊಡೆದುಕೊಂಡು ಹೆಂಗಸೊಬ್ಬಳು ಹೊಲಕ್ಕೆ ನಡೆದುದನ್ನು ಕಂಡು,

"ಎಲಾ! ಇದೇ ವೇಳೆಯೊಳಗೇ ನಿಮ್ಮದೂ ಇರತದೇನು? ಹೂಂ! ಇರಲಿ, ಹೊಡೆ ಲಗೂನೆ! ಈಗ ಮಹಾರಾಜರ ಬರತಾರೆ... ಅವರ ಎದುರಿಗೆ ಹೋಗಬೇ ಮತ್ತ!"

"ಇಲ್ಲ, ಗೌಡರ ಸಂದಿಯಿಂದ ಹೊಡೆಯಿತೇನೆ...."

"ಹಾಗೇ ಮಾಡು!"

ಪದ್ಮಪ್ಪ ಮುಂದೆ ಸಾಗಿದ. ಎಮ್ಮೆಗಳೂ ಗೋಡೆಯ ಬದಿಯನ್ನು ಹಿಡಿದು ಹಾಗೇ ನಡೆದುವು. ಮತ್ತೆ ಪದ್ಮಪ್ಪ ಹೊರಳಿ ನೋಡಿ ಹೇಳಿದ :

"ಹೂಂ! ಲಗೂನೆ ಹೊಡೆ. ಆದರೆ ಸಂದಿಯೊಳಗಿಂದ ಒಯ್ಯಬೇಡ. ಎಮ್ಮೆಗಳು ಕಾಲುಗೀಲು ಮುರಿದುಕೊಂಡಾವು. ನೆಟ್ಟಗೆ ಹಾದಿಯಿಂದೇ ಹೋಗು. ಆದರೆ ಅವಸರ ಮಾಡು...."

ದೂರದಲ್ಲಿ ಗಂಡನ ಸ್ವರ ಕೇಳಬರುತ್ತಿದ್ದುದನ್ನು ಗಮನಿಸಿ, ಸುಂದರವ್ವ ಹೊರಗೆ ಬಂದರು. ಕೈಯಲ್ಲೊಂದು ಚಿಕ್ಕ ತಾಟು. ಅವರಲ್ಲಿ ಸ್ವಲ್ಪ ಅಕ್ಷತೆ, ಒಂದೆರಡು ಹೂವು, ಅಡಿಕೆ, ಲವಂಗ.

ಇನ್ನೊಂದು ಕೈಯಲ್ಲಿ ನೀರಿನ ಗಿಂಡಿ. ಪದ್ಮಪ್ಪನನ್ನು ಕಂಡೊಡನೆಯೇ ಆತುರದಿಂದ ಕೇಳಿದಳು :

"ಮಹಾರಾಜರು ಹೊರಟರು ಬಸ್ತಿಯಿಂದ... ?"

"ಈಗ ದರ್ಶನ ಮಾಡಿಕೊಳ್ಳಲಿಕ್ಕೆ ಹತ್ತಿದ್ದರು !"

"ಇನ್ನೂ ಕರ ಹಿಡಿದಿರಲಿಲ್ಲ ಹಾಗಾದರೆ....?"

"ಇಲ್ಲ....! ಈಗ ಪೂಜೆ ಮುಗಿಯಿತು...."

"ಕೈತಾಳ ಜಾಂಗಟೆಗಳ ಸಪ್ಪಳ ನಿಂತು ಬಹಳ ಹೊತ್ತು ಆಯ್ತಲ್ಲ !"

"ದರ್ಶನ, ಜಪ ಮುಗಿಸಿಕೊಂಡು ಹೊರಡಲಿಕ್ಕೆ ಅಂದರೆ ವೇಳೆ ಆಗೋದಲ್ಲ ! "

"ಇಂದು ಕರ ಏನು ಹಿಡಿಯುವರೋ ?"

"ನೋಡಬೇಕು. ಇಂದು ಯಾರ ಮನೆಯಲ್ಲಿ ಭಿಕ್ಷೆ ಆಗ ತದನೋ ! ಇಂದು ಐದನೆಯ ದಿನ, ಮಹಾರಾಜರು ಆಹಾರ ತಕ್ಕೊಂಡು ...ಈಗ ಮುನಿಗಳಿಗೆ ಆಹಾರ ದಾನಕೊಡುವ ಭಾಗ್ಯ ಯಾರದದ ನೋಡಬೇಕು...."

"ನಾವಂತೂ ಶುದ್ಧ ಮನಸ್ಸಿನಿಂದ ಮಾಡಲಿಕ್ಕೆ ನಿಂತಿದೇವೆ."

ಪದ್ಮಪ್ಪ ಹೆಂಡತಿಯ ಕೈಯೊಳಗಿನ ತಾಟಿನ ಕಡೆಗೆ ದೃಷ್ಟಿ ಬೀರಿದ. ಅಲ್ಲಿ ಎಲ್ಲ ಪದಾರ್ಥಗಳೂ ವ್ಯವಸ್ಥಿತವಾಗಿರುವುದನ್ನು ಕಂಡುಕೊಂಡ. ಆಮೇಲೆ ಅವಳ ಉಡಿಗೆತೊಡಿಗೆಗಳನ್ನು ನಿರೀಕ್ಷಿಸಿದ. ನಿಲ್ಲಿಗೆ,

"ಯಾಕೋ ಕುಂಕುಮ, ಬಂಡಾರ ಇಲ್ಲದ ನೋಡು."

ಎಂದು ಸೂಚಿಸಿದ.

ಸುಂದರವ್ವ ಲಗುಬಗೆಯಿಂದ ಒಳಗೆ ಹೋಗಿ ಕುಂಕುಮವನ್ನು ಹಣೆಗೆ ಹಚ್ಚಿಕೊಂಡು ಬಂದಳು. ಪದ್ಮಪ್ಪ ತಲೆಬಾಗಿಲಲ್ಲಿ ತುಂಬಿಟ್ಟ ತಂಬಿಗೆಯನ್ನು ತಕ್ಕೊಂಡು ಕಾಲುಗಳನ್ನು ತೊಳೆದುಕೊಂಡ. ಕೂಡಲೆ

ಒಂದು 'ಪೇಲಿ'ಯಲ್ಲಿ ನೀರು ತುಂಬಿಕೊಂಡು ದಾರಿಗೆ ಬಂದು ನಿಂತ. ಮುನಿಗಳ ಬರವನ್ನು ನಿರೀಕ್ಷಿಸುತ್ತಿದ್ದ. ಆಗ ಅವನಿಗೆ ಒಂದು ಕ್ಷಣವೆಂದರೆ ಯುಗವಾಗಿತ್ತು.

ಈ ದಂಪತಿಗಳು ಮುನಿಗಳ ಬರವನ್ನು ಹಾರೈಸಿ ದಾರಿಯಲ್ಲಿ ನಿಂತಿದ್ದರು. ಒಳಗೆ ಬಾಳಪ್ಪ ಸರಸವ್ವರು ಮುನಿಗಳ ಆಹಾರದ ಸಿದ್ಧತೆಯನ್ನು ಮಾಡಿಕೊಂಡು ಕುಳಿತಿದ್ದರು. ಇಷ್ಟೆಲ್ಲ ಆದರೂ ಶ್ರೇಯಾಂಸನ ಸುಳಿವೇ ಇಲ್ಲ. ಒಮ್ಮೆಲೇ ನೆನಪಾದಂತಾಗಿ ಪದ್ಮಪ್ಪ ಕೇಳಿದ :

"ಶ್ರೇಯಾಂಸ ಇನ್ನೂ ಬರಲಿಲ್ಲ ?"

"ಇಲ್ಲ !"

"ಅವನಿದ್ದರೆ ಸ್ವಲ್ಪ ನೆಟ್ಟಗಿತ್ತು. ಸ್ವಾಮಿಗಳ ಪಾದಪೂಜೆ ಯನ್ನು ನೆಟ್ಟಗೆ ಮಾಡತಿದ್ದ. ನಮ್ಮ ಪಾಲಿಗೆ ಹೊರಳುವದಿಲ್ಲ. ಏನಾದರೆ ತಪ್ಪ ತಪ್ಪ ಮಂತ್ರ ಅನ್ನತೇವಿ...."

"ಅದಲ್ಲ ಹೌದ. ಮನೆಯೊಳಗೆ ಕಲಿತವನಿದ್ದೂ ಇಂಥ ನೇಳೆ ಯೊಳಗೆ ಉಪಯೋಗ ಇಲ್ಲ. ಏನು ಮಾಡುವುದು ?"

"ಅವರವರ ಕರ್ಮ !" ಸ್ವಲ್ಪ ತಡೆದು "ಇಷ್ಟೆಲ್ಲ ಅಭ್ಯಾಸ ಮಾಡಿಸಿದೆ. ಪುರಾಣ ಪುಸ್ತಕ ಓದಿಸಿದೆ. ಆದರೆ ಶ್ರೇಯಾಂಸನ ಲಕ್ಷ್ಯ ಧರ್ಮದ ಕಡೆಗೆ ಹೆತ್ತಲಿಲ್ಲ. ಏನೋ ಕತೆ ಕಾದಂಬರಿ ಓದು ವುದರೊಳಗೇ ವೇಳೆ ಹಾಕಲಿಕ್ಕೆ ಹತ್ತಿದಾನ. ಹುಡುಗನ ಬುದ್ಧಿ ಚೆಲೋ ಅದ. ಆದರೆ ಮಾಡೋದೇನು ?" ನಿರಾಶೆಯಿಂದ ಪದ್ಮಪ್ಪ ನುಡಿದ.

"ಅದನ್ನ ಏನು ಸುಡುವಿರಿ. ಸ್ವಾಮಿಗಳು ಇನ್ನೂ ಯಾಕ ಬರಲಿಲ್ಲ ನೋಡಿರಿ !"

"ದಾರಿಯೊಳಗೂ ನಾಲ್ಕೆಂಟು ಮನೆಯುವರು ಬಾಗಿಲಲ್ಲಿ ನಿಂತಿ ದಾರೆ. ಎಲ್ಲಿ ಹೋಗತಾರೋ ನೋಡಬೇಕು...."

"ಇಲ್ಲೇ ನಿಲ್ಲುವದಕ್ಕಿಂತ ನಾಲ್ಕು ಹೆಜ್ಜೆ ಮುಂದಕ್ಕಾದರೂ ಹೋಗಿ ಬನ್ನಿರಲ್ಲ!" ಸುಂದರವ್ವ ಪತಿಯನ್ನು ಮತ್ತೆ ಕಳಿಸಿದಳು.

ಪದ್ಮಪ್ಪ ಹಾಗೇ ನೀರಿನ ಪೇಲಿಯನ್ನು ಕೈಯಲ್ಲಿ ಹಿಡಿದು ಕೊಂಡೇ ಮುಂದಿನ ದಾರಿಗಳ ಕೂಟದವರೆಗೂ ಹೋದ. ದೂರದಲ್ಲಿ ಮುನಿಗಳು ಬರುವುದನ್ನು ಕಂಡು,

"ಬಂದರು! ಬಂದರು!"

ಎಂದು ಮರಳಿ ಅವಸರದಿಂದ ತನ್ನ ಮನೆಯ ಬಾಗಿಲ ಕಡೆಗೆ ಧಾವಿಸಿದ.

"ಪೊನ್ನಗೌಡರ ಮನೆ ದಾಟಿ ಬಂದರೇನು?"

"ದಾಟಿ ಇಲ್ಲೇ ಬಂದರಲ್ಲ. ಅಲ್ಲೇನು ಹೊಂದಿಕೆ ಆಗಲಿಲ್ಲ ವೇನೊ!"

"ಬರಲಿ ತಾಯಿ!" ಎಂದು ನುಡಿದು ಸುಂದರವ್ವ ಸ್ವಲ್ಪ ಹೊತ್ತು ಏನೋ ವಿಚಾರಿಸಿ "ಸರಸವ್ವನಿಗೂ ತಂಬಿಗೆ ಮೇಲೆ ತೆಂಗಿನಕಾಯಿ ಇಟ್ಟುಕೊಂಡು ಬಂದು ನಿಲ್ಲಲಿಕ್ಕೆ ಹೇಳಲೇನು?" ಗಂಡನಿಗೆ ಸಲಹೆ ಕೇಳಿದಳು.

"ಅಲ್ಲಿ ಅಡಿಗೆಯ ಹತ್ತಿರ ಯಾರು? ಏಕೆಂತಾ ಬಂದೀತು."

ಅಲ್ಲಿ ಬಾಳಪ್ಪ ನೋಡುತಿರತಾನಲ್ಲ...."

"ಹಾಗಾದರೆ ಬಾ ಅನ್ನು ಲಗೂನೆ...."

ಸರಸವ್ವ ರೇಶಿಮೆಯ ಮಡಿಯನ್ನುಟ್ಟಿದ್ದಳು. ಕೈಯಲ್ಲಿ ತುಂಬದ ತಂಬಗೆ. ಅದರ ಮೇಲೊಂದು ತೆಂಗಿನಕಾಯಿಯನ್ನು ಇಟ್ಟುಕೊಂಡು ಬೀದಿಗೆ ಬಂದು ನಿಂತಳು. ಅವಳನ್ನೊಮ್ಮೆ ನಿರೀಕ್ಷಿಸಿದ ಪದ್ಮಪ್ಪ ಅವಳುಟ್ಟ ಕೆಂಪು ಮಡಿಯ ಬಟ್ಟೆಯ ಸಲುವಾಗಿ ಸ್ವಲ್ಪ ಸಂಶಯ ಎತ್ತಿದ.

"ಕೆಂಪು ಮಡಿ ಅದೆ. ಹಿಂಸೆಯ ಚಿಹ್ನ...."

"ಇರಲಿ, ಸುಮ್ಮ ಇರ್ರಿ ಇನ್ನು-ಬಂದರು!"

ಸುಂದರವ್ವ ಪತಿಯನ್ನು ಎಚ್ಚರಿಸಿದಳು. ಆದರೂ ಅವಸರದಲ್ಲಿ ತನ್ನ ಹತ್ತಿರ ಇದ್ದ ಜಪಮಾಲೆಯನ್ನು ತೆಗೆದು ಪದ್ಮಪ್ಪ ಸರಸವ್ವನ ಕೈಯಲ್ಲಿದ್ದ ತೆಂಗಿನಕಾಯಿಗೆ ಹಾಕದೆ ಇರಲಿಲ್ಲ. ಇಷ್ಟು ಮಾಡಿ ಹೊರಳಿ ನಿಲ್ಲಲಿಸುವಷ್ಟರಲ್ಲಿ ಮುನಿಗಳು ತೀರ ಸಮೀಪಕ್ಕೆ ಬಂದಿದ್ದರು!

"ನಮೋಸ್ತು ಸ್ವಾಮಿ ನಮೋಸ್ತು...."

ಎಂದು ಮೂವರೂ ಏಕಕಂಠದಿಂದ ಕೂಗಿ ತಲೆಬಾಗಿಸಿದರು. ಸುತ್ತಲಿನ ಮನೆಗಳ ಮೇಲೆ ನಿಂತು ಸ್ತ್ರೀ ಪುರುಷರೆಲ್ಲ ಮಹಾರಾಜರ ಈ ಸ್ವಾಗತವನ್ನು ನಿರೀಕ್ಷಿಸುತ್ತಿದ್ದರು. ಎಲ್ಲಿ ಇಂದೂ ಮುನಿಗಳ ಆಹಾರ ತಪ್ಪುವದೋನೋ ಎಂಬ ಶಂಕೆಯಿಂದ ಹಲವರ ಮುಖದಲ್ಲಿ ಕಳವಳ ಉಂಟಾಗುತಲಿತ್ತು. ಹಲವರು ದಾರಿದಾರಿಗಳ ಕೂಟಗಳಲ್ಲಿ ನಿಂತು, ದನಕರುಗಳನ್ನು ನಾಯಿ ಬೆಕ್ಕುಗಳನ್ನು ಅತ್ತಿಂದತ್ತ ಕಡೆಗೇ ತಿರುವಿ ಬಿಡುತ್ತಿದ್ದರು. ಅವರ ದೃಷ್ಟಿಗೆ, ಕಿವಿಗೆ ಹಿಂಸೆಯಾಗಲಿ, ನೋವಿನ ದನಿಯಾಗಲಿ ಬೀಳದಂತೆ ಎಚ್ಚರ ವಹಿಸಿದ್ದರು. ಊರಿಗೆ ಊರೇ ಒಂದು ಮನಸ್ಸಿನಿಂದ ಮುನಿಗಳ ಆಹಾರಕ್ಕಾಗಿ ಯತ್ನಿಸುತ್ತಿದ್ದಿತು. 'ಯಾರ ಮನೆಯಲ್ಲಾದರೂ ಅಷ್ಟೇ. ಮುನಿಗಳು ಆಹಾರ ತಕ್ಕೊಳ್ಳಲಿ,' ಎಂದು ಎಲ್ಲರೂ ಹೃತ್ಪೂರ್ವಕವಾಗಿ ಹಾರೈಸುತ್ತಿದ್ದರು. ಪ್ರಯತ್ನಿಸುತ್ತಿದ್ದರು.

ಶ್ರೀ ಮಹಾವೀರ ಕೀರ್ತಿಗಳು ಉಗ್ರ ತಪಸ್ವಿಗಳು. ನಗ್ನ ಸಾಧುಗಳು. ಕಾಯ್ದ ಕಾಂಚನದಂಥ ಮೈಬಣ್ಣ. ಉದ್ದ ನಿಲುವು ತೇಜಃಪುಂಜ ಕಣ್ಣುಗಳು. ಒಂದು ಕೈಯಲ್ಲಿ ಹಿಂಛ ಕಮಂಡಲು ಹಿಡಿದುಕೊಂಡಿದ್ದಾರೆ. ಇನ್ನೊಂದು ಕೈಯ ಬೆರಳುಗಳು—ಗೋಣು ತಿರುವಿ ಏನನ್ನೋ ಆಯ್ದುಕೊಳ್ಳುವ ನವಿಲಿನ ಚುಂಚಿನ ರೀತಿಯಲ್ಲಿ ಭುಜದ ಮೇಲೂರಿವೆ. ಮೂರು ಮೊಳ ಮುಂದಿನ ದಾರಿಯ ಮೇಲೆ ದೃಷ್ಟಿಯನ್ನಿಟ್ಟು ಸಾವಕಾಶವಾಗಿ ನಡೆಯುತ್ತ ಬಂದರು. ದೂರದಲ್ಲಿ ಹಿಂದೆ ಉಪಾಧ್ಯೆಯವರಿದ್ದರು.

ಮುನಿಗಳು ಹತ್ತಿರ ಬಂದು ಸುಂದರವ್ವನ ಕೈಯೊಳಗಿನ ತಾಟನ್ನು ನಿರೀಕ್ಷಿಸಿದರು. ಅಷ್ಟರಲ್ಲಿ ಸರಸವ್ವ ಮುಂದೆ ಬಂದಳು ಅವರು ಮನದಲ್ಲಿ ಮಾಡಿಕೊಂಡ ಸಂಕಲ್ಪ ಸಿದ್ಧಿಸಿತು. ಸುಮ್ಮನೆ ನಿಂತರು. ಕೂಡಲೆ ಪದ್ಮಪ್ಪನು ಮುನಿಗಳನ್ನು ಬಲಗೊಂಡು ಮೂರು ಸುತ್ತು ಹಾಕಿದ. ಆಮೇಲೆ ತಮ್ಮಲ್ಲಿ ಅನ್ನ ನೀರುಗಳು ಶುದ್ಧವಾಗಿವೆ ಯೆಂದೂ ತಾವು ಸಮ್ಯಕ್ತ್ವಧಾರಣ ಮಾಡಿರುವದಾಗಿಯೂ ಪದ್ಮಪ್ಪ ಮೆಲ್ಲನೆ ಉಸುರಿದ. ಹಾಗೆಯೇ ಭೂಮಿಯನ್ನು ಶುದ್ಧಮಾಡುವದಕ್ಕಾಗಿ ತನ್ನ ಕೈಯೊಳಗಿನ ನೀರಿನಿಂದ ಧಾರೆಯನ್ನು ಬಿಡುತ್ತ ಮುನಿಗಳನ್ನು ಕರೆದುಕೊಂಡು ಮನೆಯೊಳಗೆ ಹೋದ. ಇದನ್ನು ನೋಡಿ ಎಲ್ಲ ಜನರಿಗೂ ಸಂತಸವಾಯಿತು. ಅತಿ ಸಂತಸದಲ್ಲಿ ಸಂಶಯವೂ ಹುದುಗಿರುವಂತೆ ಹಲವರಿಗೆ, ಇನ್ನೂ ಆಹಾರ ಹೊಟ್ಟೆಗೆ ಹೋದಾಗ 'ಬಾಹುರಿ' ಆಯಿತೆಂದು ಅನ್ನುವುದು ಎಂಬ ಚಿಂತೆಯಿದ್ದಿತು. ಯಾವ ಕ್ಷಣದಲ್ಲಿ ಸ್ವಾಮಿಗಳು ಅಂತರಾಯವಾಗಿ ಹೊರಗೆ ಬರುವರೋ ಏನೋ ಎಂಬ ಸಂಶಯದಿಂದ ನೋಡುತ್ತ ತಮ್ಮ ಊಟ ಉಡಿಗೆಗಳನ್ನು ತೊರೆದು ಅಲ್ಲಿಯೇ ನೋಡುತ್ತ ನಿಂತವರು ಕೆಲವರು

ಬಡವರ ಮನೆಯಲ್ಲಿ ಮುನಿಗಳು ಹೊಕ್ಕಿದ್ದರು ಎಲ್ಲ ವ್ಯವಸ್ಥೆ ನಮ್ಮಲ್ಲಿಯಂತೆ ಆಗಲಿಕ್ಕಿಲ್ಲವೆಂದು ಬಗೆದು ನೋಡುತ್ತ ನಿಂತ ಗೌಡರ ಹಲವರು. ಆದರೆ ಈ ಐದೂ ದಿನ ಮುನಿಗಳಿಗೆ ಆಹಾರ ತಪ್ಪಿದುದಕ್ಕೆ ಊರಲ್ಲಿ ಪದ್ಮಪ್ಪ ಒಬ್ಬನೇ ಅವರಂತೆ ಉಪವಾಸವಿದ್ದನೆಂಬುದು ಗೌಡರಿಗೇನು ಗೊತ್ತು ಪಾಪ! ಸ್ವಾಮಿಗಳ ವ್ಯವಸ್ಥೆಯಲ್ಲಿ ಕೊರತೆ ಯಾದೀತಲ್ಲ ಎಂದು ಚಿಂತಿಸುತ್ತಿದ್ದವರು ಶಿಲೆಯಂತಾದರು! ಆದರೆ ಪದ್ಮಪ್ಪ ತನ್ನ ಶಕ್ತಿಗೆ ತಕ್ಕಂತೆ ಎಲ್ಲ ವ್ಯವಸ್ಥೆಯನ್ನೂ ಮಾಡಿದ್ದ. ನಡುಮನೆಯಲ್ಲಿ ಸಾಲೆಯೊಳಗಿನ ಮೇಜು ತಂದು ಹಾಕಿದ್ದ ಅದರ ಮೇಲ್ಭಾಗದಲ್ಲಿ ಮಣ್ಣು ಮೊದಲಾದವುಗಳು ಬೀಳದಂತೆ ಮಡಿಯ ಬಟ್ಟೆಯಿಂದ ಛತ್ತು ಹೊಡೆದಿದ್ದ. ಅದರಂತೆ ಅಡಿಗೆ ಮಾಡುವ ಒಲೆಯ ಮೇಲೂ

ಬಟ್ಟೆಯನ್ನು ಕಟ್ಟಿಸಿದ್ದ. ಮೊದಲು ಅದನ್ನೆಲ್ಲ ನೋಡಿಕೊಂಡು ಬಂದು. ಮುನಿಗಳು ನಡುಮನೆಯಲ್ಲಿಟ್ಟ ಮೇಜಿನ ಹತ್ತಿರ ನಿಂತರು. ಆಮೇಲೆ ಪದ್ಮಪ್ಪ ಸುಂದರಪ್ಪ ಸೇರಿ ತಮಗೆ ತಿಳಿದ ರೀತಿಯಲ್ಲಿ ಮುನಿಗಳ ಪಾದ ಪೂಜೆಯನ್ನು ಮಗ್ಗುಲಿಗೆ ಮಣೆ ಹಾಕಿಕೊಂಡು ಮಾಡಿದರು, ಅಷ್ಟಕ ಮಾಡಿಕೊಂಡರು.

ಇಷ್ಟರಲ್ಲಿ ಸರಸಪ್ಪ ಮೇಜಿನ ಮೇಲೆ ಮುನಿಗಳು ಕೈತೊಳೆದು ಕೊಳ್ಳಲಿಕ್ಕೆ ಪಾಟೇಲಿಯನ್ನೂ ಬಿಸಿ ನೀರನ್ನೂ ತಂದಿಟ್ಟಳು. ಮುಂದೆ ಬೇಕಾಗಬಹುದಾದ ಇನ್ನೂ ಕೆಲವು ಪಾತ್ರೆಗಳನ್ನೂ ಅಣಿಗೊಳಿಸಿದಳು. ಇವೆಲ್ಲ ಕಾರ್ಯಗಳಿಗೆ ಬಾಳಪ್ಪನೂ ಹೆಂಡತಿಗೆ ನೆರವಾಗುತ್ತಲಿದ್ದ. ಪದ್ಮಪ್ಪ ಪಾದ ಪೂಜೆಯನ್ನು ತೀರಿಸಿಕೊಂಡು ಆಹಾರ ಕೊಡಲು ಸಿದ್ಧನಾದ. ಮುನಿಗಳು ಪಾಟೇಲಿಯಲ್ಲಿ ಕೈ ನೀಡಿದರು. ಪದ್ಮಪ್ಪ ಮೊದಲು ನೀರು ಹನಿಸಿದ. ಕೈ ತೊಳೆದಾದ ಮೇಲೆ ಮುನಿಗಳು ತಮ್ಮ ಅಂಗೈಗಳಿಂದ ಪಾತ್ರೆಯನ್ನು ರಚಿಸಿಕೊಂಡರು. ಅದರಿಂದ ಮೊದಲು ಸಾಕಾಗುವಷ್ಟು ನೀರು ಕುಡಿದರು. ಆಮೇಲೆ ಉಪ್ಪಿಲ್ಲದ ನಿರ್ಮಲ ಶುದ್ಧ ಆಹಾರವನ್ನು—ತಮ್ಮ ಕಣ್ಣುಗಳಿಂದ ನೋಡಿ ನೋಡಿ—ಏಳು ತುತ್ತುಗಳನ್ನು ಮಾತ್ರ ಸ್ವೀಕರಿಸಿದರು. ಮತ್ತೆ ನೀರು ಕುಡಿದು ಆಹಾರವಿಧಿಯನ್ನು ಮುಗಿಸಿದರು. ಪಾಣಿತಲ ಪಾತ್ರವನ್ನು ಮುರಿದರು. ಆಮೇಲೆ ಪದ್ಮಪ್ಪ ಅವರ ಮೈಮೇಲೆ ಬಿದ್ದ ಮುಸುರೆಯನ್ನು ಅರಿವೆಯಿಂದ ಒರಿಸಿ ತೆಗೆದ.

ಮುನಿಗಳು ನಿಂತಲ್ಲಿಯೇ ಧ್ಯಾನದಲ್ಲಿ ಮಗ್ನರಾದರು.

ಇಷ್ಟಾದ ಮೇಲೆ ಮನೆಯವರೆಲ್ಲ ನೆಟ್ಟಗೆ ಉಸುರಾಡಿಸ ತೊಡಗಿದರು.

ಇಲ್ಲಿಯವರೆಗೂ ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿ ದ್ದರು. ಸರಸಪ್ಪ ಒಲೆಯ ಮುಂದೆ ಅನ್ನ ತೋಡಿಕೊಡಬೇಕು; ಬಾಳಪ್ಪ ಮೇಜಿನ ಹತ್ತರ ಒಯ್ದು ಕೊಡಬೇಕು; ಸುಂದರಪ್ಪ ತುಪ್ಪ

ಹಾಲುಗಳೊಡನೆ ಬೆರಸಿ ತುತ್ತು ಸಿದ್ಧಗೊಳಿಸಬೇಕು: ಪದ್ಮಪ್ಪ ಅದನ್ನೆಲ್ಲ, ಮುನಿಗಳ ಕರಪುಟದಲ್ಲಿ ಹಾಕಬೇಕು. ಇಷ್ಟು ಕೈಗಳಿಂದ ಬಂದ ತುತ್ತನ್ನೂ ಮುನಿಗಳು ತಮ್ಮ ಹೆಬ್ಬೆರಳುಗಳಿಂದ ಒಡೆದು, ನಿರೀಕ್ಷಿಸಿ ನಿರೀಕ್ಷಿಸಿ ಬಾಯಿಗೆ ಹಾಕಿಕೊಳ್ಳುವರು. ತುತ್ತುಗಳ ಇತಿ ಮಿತಿ ಸ್ವಾಮಿಗಳನ್ನುಳಿದು ಇನ್ನಾರಿಗೂ ಗೊತ್ತಿರದುದ್ದರಿಂದ ರೊಟ್ಟಿ, ಅನ್ನ, ಹುಗ್ಗಿ, ಹಾಲು, ತುಪ್ಪ ಮೊದಲಾದವುಗಳನ್ನು ಹದನರಿತು ಸೇರಿಸಿ ಒಂದೊಂದು ತುತ್ತನ್ನೂ ಹಾಕಬೇಕಾಗುವುದು. ಒಂದು ತುತ್ತು ಮುನಿಗಳ ಹೊಟ್ಟೆಯಲ್ಲಿ ಹೋಯಿತೆಂದರೆ ಸ್ವರ್ಗದ ಮೆಟ್ಟಲನ್ನು ಒಂದು ಹತ್ತಿದಷ್ಟು ಸಂತಸ ಆಹಾರ ಕೊಡುವವರಿಗೆ. ಅಂದ ಮೇಲೆ ತಮ್ಮ ಮನೆಯಲ್ಲಿ ನಿರ್ವಿಘ್ನವಾಗಿ ನಿರ್ಗ್ರಂಥ ಮುನಿಗಳು ಆಹಾರ ತಕ್ಕೊಂಡು ತಣಿದುದಕ್ಕೆ ಶ್ರೇಯಾಂಸನ ಮನೆಯವರಿಗೆಲ್ಲರಿಗೂ ಆನಂದವಾಗದೆ ಇದ್ದೀತೇ? ಇಂಥ ಅನುಪಮ ಆನಂದದಲ್ಲಿ ಪಾಲನ್ನು ಸ್ವೀಕರಿಸಲಿಕ್ಕೆ ಶ್ರೇಯಾಂಸ ಮನೆಯಲ್ಲಿ ಇಲ್ಲದುದಕ್ಕೆ ಎಲ್ಲರಿಗೂ ಸ್ವಲ್ಪ ಅಸಮಾಧಾನ. ಮುನಿಗಳೂ ಒಂದೆರಡು ಸಲ ಸುತ್ತಲೂ ದಿಟ್ಟಿಸಿ ನೋಡಿದರು. ಶ್ರೇಯಾಂಸನ ಮುಖ ಕಾಣದುದಕ್ಕೆ ನಡುವೆ ಪ್ರಶ್ನಾರ್ಥಕ ಮುಖದಿಂದ ಪದ್ಮಪ್ಪನ ಕಡೆಗೆ ನೋಡಿದ್ದರು. ಅದನ್ನು ಕಂಡೂ ಕಾಣದಂತೆ ಪದ್ಮಪ್ಪನಿದ್ದನು.

ಮುನಿಗಳು ಪಡಸಾಲೆಗೆ ಬಂದರು. ಅಲ್ಲಿ ಮೊದಲೇ ಹಾಕಿದ ಮಣೆಯನ್ನೂ ಪಿಂಛಿಯಿಂದ ಮೆಲ್ಲನೆ ಜಾಡಿಸಿ ಕುಳಿತುಕೊಂಡರು. ಪದ್ಮಪ್ಪನೂ ಅವರ ಸಂಗಡವೇ ಬಂದು ಹತ್ತರ ಕುಳಿತ. ಆಮೇಲೆ ಮುನಿಗಳು ಮಾತಿಗೆ ಆರಂಭ ಮಾಡಿದರು. ಅವರು ಕೇಳಿದ ಮೊದಲನೆಯ ಪ್ರಶ್ನೆಯೇ ಇದು.

"ಶ್ರೇಯಾಂಸ ಎಲ್ಲಿ ಕಾಣಲಿಲ್ಲ?"

"ಮಾಸ್ತರರ ಮನೆಗೆ ಅಭ್ಯಾಸಕ್ಕೆ ಹೋದವ ಇನ್ನೂ ಬರಲೇ ಇಲ್ಲ...."

"ಊಟ ?"

"ಇನ್ನು ಬಂದಮೇಲೆ !"

"ಎಂಥಾ ಅಭ್ಯಾಸ ಇದು ?"

ಇಷ್ಟರಲ್ಲಿ ಒಳಗಿನ ಕೆಲಸವನ್ನು ಒಂದು ಮಟ್ಟಿಗೆ ಹಚ್ಚಿ ಉಳಿದವರೂ ಪಡಸಾಲೆಗೆ ಬಂದು ಮುನಿಗಳನ್ನು ವಂದಿಸಿದರು. ಮುನಿಗಳು ಎಲ್ಲರನ್ನೂ

"ಸದ್ಧರ್ಮ ವೃದ್ಧಿರಸ್ತು"

ಎಂದು ಹರಸಿದರು. ಇದನ್ನೇ ಕಾಯುತ್ತ ನಿಂತ ನೆರಮನೆಯವರೂ ಅನೇಕ ಜನ ಶ್ರಾವಕರೂ ಬಂದು, ಮುನಿಗಳ ಮುಂದೆ ಹಣ್ಣು ಹೂವುಗಳನ್ನು ಇಟ್ಟು 'ನಮೋಸ್ತು' ಮಾಡಿಕೊಂಡರು. ಎಲ್ಲರನ್ನೂ ಹರಸುವುದು ಸ್ವಾಮಿಗಳು ಒಂದೇ ರೀತಿ. ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಬರುವ ಜನವೆಲ್ಲ ಬಂದ ಮೇಲೆ ಸ್ವಾಮಿಗಳು ಧರ್ಮಾಧರ್ಮ ಸ್ವರೂಪವನ್ನು ಕುರಿತು ನಾಲ್ಕು ಮಾತುಗಳನ್ನು ಹೇಳಿದರು. ಅಣುವ್ರತ-ಮಹಾ ವ್ರತಗಳ ಮಹತ್ವವನ್ನು ಬೋಧಿಸಿದರು. ಶ್ರಾವಕರ ಅಷ್ಟಮೂಲ ಗುಣಗಳನ್ನು ವಿವರಿಸಿದರು. ಅದನ್ನೇ ಭಕ್ತಿಯಿಂದ ಕೇಳುತ್ತ ಕುಳಿತ ಜನರಲ್ಲಿ ಕೆಲವರು ಮಹಾ ಮುನಿ ರಾಜರಿಂದ ವ್ರತಗಳನ್ನು ಸ್ವೀಕರಿಸಿದರು. ಪದ್ಮಪ್ಪನೂ ಅಂದಿನಿಂದ ಏಕಭಕ್ತ—ಒಪ್ಪತ್ತೂಟ—ವ್ರತವನ್ನು ಮುನಿಗಳ ಹತ್ತಿರ ಸ್ವೀಕರಿಸಿದನು. ಇನ್ನೂ ವ್ರತ ತೊಡುವ ವಿಧಿಯು ನಡೆದಿರುವಾಗಲೇ ಶ್ರೇಯಾಂಸ ಮನೆಯಲ್ಲಿ ಕಾಲಿಕ್ಕಿದ. ಬಾಡಿದ ಮುಖ. ಬತ್ತಿದ ಕಣ್ಣು, ಭಾರವಾದ ದೇಹವನ್ನು ಎಳೆದುಕೊಂಡು ಬಂದಂತೆ ಬಂದ. ಎದುರಿಗೆ ಮುನಿಗಳನ್ನು ಕಂಡೊಡನೆಯೇ ಸಂಕೋಚದಿಂದ ಅಲ್ಲಿಯೇ ನಿಂತ. ಅದನ್ನು ಕಂಡು ಮುನಿಗಳೇ ಅವನನ್ನು ಆದರದಿಂದ ಬರಮಾಡಿಕೊಂಡರು.

"ಬಾರಪ್ಪ ಶ್ರೇಯಾಂಸ !"

ಶ್ರೇಯಾಂಸ ಮುನಿಗಳ ಎದುರಿಗೆ ಹೋಗಿ, ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದಿಟ್ಟು ನಮಸ್ಕರಿಸಿ ಅಲ್ಲಿಯೇ ಕುಳಿತ.

ಮನೆಯವರೆಲ್ಲ ಶ್ರೇಯಾಂಸನನ್ನು ಸಿಟ್ಟಿನಿಂದ ನೋಡುತ್ತಿದ್ದರು. ಬಾಳಪ್ಪನ ಕಣ್ಣುಗಳಂತೂ ಕಿಡಿಯನ್ನೇ ಕಾರುತ್ತಿದ್ದುವು. ಪದ್ಮಪ್ಪ ನಿರಾಶಾಭಾವದಿಂದ ಶ್ರೇಯಾಂಸನನ್ನು ಒಮ್ಮೆ ನೋಡಿ, ಮುನಿಗಳ ಕಡೆಗೆ ದೃಷ್ಟಿಯನ್ನು ಹೊರಳಿಸಿದ.

ಮುನಿಗಳ ಲಕ್ಷ್ಯವೆಲ್ಲ ಶ್ರೇಯಾಂಸನ ತಲೆಯ ಮೇಲಿನ ಕೂದಲಿನ ಕಡೆಗೆ ಈಗ ಇದ್ದಂತೆ ಪದ್ಮಪ್ಪನಿಗೆ ತೋರಿತು.

ಶ್ರೇಯಾಂಸನ ತಲೆಗೂದಲುಗಳು ಸ್ವಲ್ಪ ಹೆಚ್ಚಾಗಿಯೇ ಬೆಳೆದಿದ್ದುವು ಕ್ಷೌರ ಮಾಡಿಸಿಕೊಂಡು ಒಂದೆರಡು ತಿಂಗಳು ಆಗಿರಬೇಕು. ಮನೆಗೆ ಕ್ಷೌರಿಕ ಬಂದ ಹೊತ್ತಿನಲ್ಲಿ ಶ್ರೇಯಾಂಸ ಇರುತ್ತಿರಲಿಲ್ಲ. ಕ್ಷೌರಿಕನ ಮನೆಗೇ ಹೋಗಿ ಕೂದಲು ಕತ್ತರಿಸಿಕೊಂಡು ಬರುವ ಪದ್ಧತಿ ಅವರ ಮನೆಯವರಿಗೆ ಒಪ್ಪಿಗೆಯಿಲ್ಲ. ಹೀಗಾಗಿ ಅವು ವಿಪರೀತ ಬೆಳೆದಿದ್ದುವು. ಅದರಲ್ಲೂ ಅವು ಎಣ್ಣೆ ನೀರುಗಳನ್ನು ಕಾಣದೆ ಒಣಗಿದ್ದುವು. ಬಿಗಿಯಾದ ಟೊಪ್ಪಿಗೆ ಒಳಗೆ ಸಿಕ್ಕು ಹಿಂದಕ್ಕೆ ಬಾಗಿದ್ದುವು. ಮುಂದೆ ಕ್ರಾಪು ಕಾಯಬೇಕೆನ್ನುವ ವಿದ್ಯಾರ್ಥಿಗಳ ಮೊದಲ ಲಕ್ಷಣ ಇದೆಂದು ಮುನಿಗಳು ಊಹಿಸಿದರು. ಹಿರಿಯರ ಹೆದರಿಕೆಗಾಗಿ ಬಾಚಿ ಜೈತಿಲ ತೆಗೆದಿಲ್ಲ ಇಷ್ಟೇ ಎಂದೂ ಭಾವಿಸಿದರು. ಆದರ ಶ್ರೇಯಾಂಸನ ವಿಷಯಕ್ಕೆ ಅವರಲ್ಲಿದ್ದ ಅಭಿಮಾನ ಕಡಿಮೆಯಾಗಲಿಲ್ಲ.

ಮುನಿಗಳ ಭಾವವನ್ನು ಪದ್ಮಪ್ಪನಿಗಿಂತ , ಬೇಗ ಸುಂದರವ್ವ ಗ್ರಹಿಸಿದ್ದಳು. ಅದರಿಂದ ಮುನಿಗಳಿಂದ ಮಾತು ಬರುವ ಮೊದಲೇ ತಾನು ಹೇಳಬೇಕೆಂದು ನುಡಿದಳು.

"ನಮ್ಮ ಶ್ರೇಯಾಂಸನಿಗೆ ವೇಳೆ ವೇಳೆಗೆ ಕೂದಲು ತೆಗೆದುಕೊಳ್ಳುವಂತೆ ಒಂದು ವ್ರತ ಕೊಟ್ಟು ಬಿಡಿರಿ !"

ಸ್ವಲ್ಪ ಹಾಸ್ಯದ ಸ್ವರದಲ್ಲಿ ಸುಂದರವ್ವನ ಮಾತಿತ್ತು.

"ಇದಕ್ಕೆಲ್ಲ ವ್ರತ ಉದ್ಯಾಪನ ಏತಕ್ಕೆ ಬೇಕು ?"

"ಹಾಗಾದರೆ ಮತ್ತಾವುದಾದರೂ ಒಂದು ವ್ರತ ಕೊಟ್ಟು ಬಿಡಿರಿ !"

ತನ್ನ ಮಾತು ನಾಲ್ಕು ಜನರಲ್ಲಿ ಬಿದ್ದುಹೋಯಿತಲ್ಲ ಎಂಬ ಅಭಿಮಾನಕ್ಕೆ ಒಳಗಾಗಿ ಸುಂದರವ್ವ ಸೋದರಳಿಯನಿಗೆ ವ್ರತ ಕೊಡಿಸುವ ಹಟಕ್ಕೆ ಇಳಿದಳು. ಸ್ವಾಮಿಗಳಿಗೂ ಇಂಥವರೇ ಬೇಕಾಗಿ ಇದ್ದರು. ಕೂಡಲೆ ಅವರು,

"ಯಾವ ವ್ರತ ತಕ್ಕೊಳ್ಳುವಿ ಶ್ರೇಯಾಂಸ ?"

ಎಂದು ಕೇಳೇಬಿಟ್ಟರು.

"ತಮಗೆ ಇಷ್ಟವೆನಿಸಿದ್ದನ್ನು ಕೊಡಿರಿ !"

ಶ್ರೇಯಾಂಸನ ಮಾತು ನಿಶ್ಚಿತ ಸ್ವರದಲ್ಲಿತ್ತು.

"ನಡೆಯಿಸಿಕೊಂಡು ಹೋಗುತ್ತೀಯಾ ?"

"ಅವಶ್ಯವಾಗಿ !"

"ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸುವೆಯಾ ?"

"ಆಗಲಿ !"

ಅಲ್ಲಿ ಕುಳಿತವರೆಲ್ಲರ ಹೃದಯಗಳು ಒಮ್ಮೆಲೇ ನಡುಗಿದವು. ಒಬ್ಬರ ಮುಖವನ್ನು ಒಬ್ಬರು ನೋಡತೊಡಗಿದರು. ಪದ್ಮಪ್ಪನ ಮುಖದಲ್ಲಿ ಯಾವುದೋ ಒಂದು ಅವ್ಯಕ್ತ ಆನಂದದ ತೆರೆ ತೇಲಿ ಹೋಯಿತು. ಅಭಿಮಾನದಿಂದ ಸೋದರಳಿಯನ ಕಡೆಗೊಮ್ಮೆ ನೋಡಿದ. ಪರಸಪ್ಪನ ಹೃದಯಕ್ರಿಯೆ ಒಂದು ನಿಮಿಷ ನಿಂತಂತೆ ಆಯಿತು. ಮುಖ ಮ್ಲಾನವಾಯಿತು. ಆದರೂ ಮೆಲ್ಲನೆ ಒಣಗಿದ ಕಂಠವನ್ನು ಸರಿಪಡಿಸಿಕೊಂಡು,

"ಮಹಾರಾಜರೆ !" ಎಂದು ನುಡಿದು ಸುಮ್ಮನಾದಳು. ಅವಳ ಬಾಯಿಂದ ಮುಂದಿನ ಶಬ್ದಗಳೇ ಹೊರಡಲಿಲ್ಲ.

ಎಲ್ಲರೂ ಹೊರಳಿ ಸುಂದರವ್ವನ ಕಡೆಗೆ ನೋಡತೊಡಗಿದರು.

"ಏನು ತಾಯಿ ?"

"ಶ್ರೇಯಾಂಸನ ಮದುವೆ ಆಗಿದೆ....!"

"ಅಹುದು: ಅದನ್ನೂ ಮಾಡಿ ಕೆಡಿಸಿದ್ದಾರೆ ಮಹಾರಾಜರೆ !"

ಪದ್ಮಪ್ಪ ತೊಂದರೆಯ ಸ್ವರದಲ್ಲಿ ನುಡಿದ.

"ಬ್ರಹ್ಮಚರ್ಯ ವ್ರತ ತಕ್ಕೊಳ್ಳುವಾಗ ನಿನ್ನ ಹೆಂಡತಿಯ ಒಪ್ಪಿಗೆಯೂ ಬೇಕಲ್ಲ !"

ಮಹಾರಾಜರು ಶ್ರೇಯಾಂಸನ ಕಡೆಗೆ ಹೊರಳಿ ಹೇಳಿದರು. ಶ್ರೇಯಾಂಸ ಅದಕ್ಕೆ ಪ್ರತಿಯಾಗಿ ಏನೂ ಹೇಳಲಿಲ್ಲ. ಸರಸವ್ವ ಕೆಳಗೆ ಕುಳಿತಳು. ಇದೇ ಸಂದರ್ಭವನ್ನು ಸಾಧಿಸಿ ಬಾಳಪ್ಪ,

"ಮತ್ಯಾವುದಾದರೂ ವ್ರತ ಕೊಟ್ಟು ಬಿಡಿರಿ !"

ಎಂದು ಸೂಚಿಸಿದ. ಸದ್ಯ ಬ್ರಹ್ಮಚರ್ಯ ವ್ರತದ ಮಾತು ನಿಂತರೆ ಅವನಿಗೆ ಸಾಕಾಗಿತ್ತು.

"ಈಗಿನ ಹುಡುಗರೇನು ಬೇಕಾಗಿದ್ದಲ್ಲಿ ಚಹ ಕುಡಿಯುವುದು, ಜುಟ್ಟು ಕಾಯುವುದು, ತತ್ತಿ ತಿನ್ನುವುದು ಎಲ್ಲ ಅನಾಚಾರಗಳನ್ನೂ ಮಾಡುವರು...."

ಶ್ರಾವಕರಲ್ಲಿ ಒಬ್ಬರು ದನಿ ಎಳೆದರು ಮಹಾರಾಜರು ಸ್ವಲ್ಪ ವಿಚಾರಿಸುತ್ತ ಮಾತನ್ನೆತ್ತಿದರು :

"ಶ್ರೇಯಾಂಸ ಈಗೆರಡು ದಿನ ಶಾಸ್ತ್ರಕ್ಕೆ ಎಲ್ಲಿ ಬರಲಿಲ್ಲ ನೀನು ?"

"ನನ್ನ ಗೆಳೆಯ ಕೆಲವು ಪುಸ್ತಕಗಳನ್ನು ಕಳುಹಿದ್ದ. ಬೇಗನೆ ಓದಿ ಕೊಡಬೇಕಾಗಿತ್ತು. ಅದಕ್ಕೆ ಆಶ್ರಮದ ಕಡೆಗೆ ಬರಲಿಕ್ಕೆ ಆಗಲಿಲ್ಲ...."

"ಯಾವ ಪುಸ್ತಕಗಳವು ?"

"ಕಲೋಪಾಸಕ...."

ಶ್ರೇಯಾಂಸನ ಮಾತನ್ನು ನಡುವೆಯೇ ತಡೆದು ಪದ್ಮಪ್ಪ ಹೇಳಿದ,

"ಇಂಥ ಪುಸ್ತಕಗಳನ್ನು ಓದಿಯೇ ಹಾಳಾಗುತ್ತಿದ್ದಾನೆ, ನಮ್ಮ

ಹುಡುಗ."

ಮಹಾರಾಜರು ತಮ್ಮಲ್ಲಿ ಆಹಾರ ಸ್ವೀಕರಿಸಿ ಹೋಗುವಾಗ ಅಸಂತುಷ್ಟರಾಗಿ ಹೋಗಬಾರದೆಂದು ಪದ್ಮಪ್ಪನ ಪ್ರಯತ್ನ. ಅದರಿಂದ ಅವರಿಗೆ ಬೇಡಾದ ವಿಷಯ ಎಲ್ಲಿ ಹೊರಬೀಳುವದೇನೋ ಎಂದು ಅವರಿಗೆ ಹೆದರಿಕೆ.

"ಕಥೆ ಕಾದಂಬರಿಗಳನ್ನು ಓದಬೇಡಪ್ಪ."

ಮಹಾರಾಜರೂ ಕರುಣೆಯಿಂದ ನುಡಿದರು.

"ಕಲೋಪಾಸಕ ಅಂಥದಲ್ಲ ಮಹಾರಾಜರೆ ! ವಿನಾಯಕರ ಧ್ವನಿ ವಿಶ್ವವ್ಯಾಪಕವಾಗಿದೆ...."

ಗ್ರಂಥದ ಮೊದಲ ಪುಟ ನೋಡಿದ್ದಷ್ಟಕ್ಕೆ ಇಷ್ಟು ಹೇಳಿದ. ಶ್ರೇಯಾಂಸ.

"ವಿನಾಯಕ ಯಾರು ?"

"ಅವರು ಆಕ್ಸಫರ್ಡಿಗೆ ಹೋಗಿ ಬಂದಿದ್ದಾರೆ....ಗೋಕಾಕ ಅಂತ ಅವರ ಅಡ್ಡ ಹೆಸರು...."

ತನಗೆ ವಿನಾಯಕರ ವಿಷಯದಲ್ಲಿ ಗೊತ್ತಿದ್ದ ಒಂದೆರಡು ಮಾತು ಗಳನ್ನು ಹೇಳಲಿಕ್ಕೆ ಹೋದ. ಅದು ಯಾರಿಗೂ ರುಚಿಸಲಿಲ್ಲ. ಆದರೂ ಮಹಾರಾಜರು ಹೇಳಿದರು :

"ಇಂದು ಶಾಸ್ತ್ರ ಕೇಳಲಿಕ್ಕೆ ಬಾ...."

ಹರಿಯುವ ಪ್ರವಾಹಕ್ಕೆ ಒಮ್ಮೆಲೇ ತಡೆಯೊಡ್ಡಿದರೆ ಒಡೆದು ಹೋಗುವದೆಂದು ಮಹಾರಾಜರಿಗೆ ಗೊತ್ತಿತ್ತು. ಶ್ರೇಯಾಂಸನ ಅಭ್ಯಾಸವನ್ನು ಕಂಡು ಅವರು ಈಗಾಗಲೇ ಮೆಚ್ಚಿದ್ದರು. ದಿನಾಲು ಅವರು ಆಶ್ರಮದಲ್ಲಿ ಶ್ರಾವಕರಿಗೆ ಶಾಸ್ತ್ರ ಹೇಳುತ್ತಿದ್ದರು. ಮಧ್ಯಾಹ್ನ ಮೂರು ಗಂಟೆಯಿಂದ ಒಂದೆರಡು ತಾಸು ಈ ಕಾರ್ಯಕ್ರಮ ನಡೆ ಯುತ್ತ ಇದ್ದಿತು. ಆಗ ನೂರಾರು ಜನರು ಅವರ ಉಪನ್ಯಾಸಕ್ಕೆ ಕೂಡುತ್ತಿದ್ದರು. ಅಂಥ ಸಂದರ್ಭದಲ್ಲಿ ಹಲವು ಸಲ ಶ್ರೇಯಾಂಸ

ಅಲ್ಲಿ ಹೋಗಿದ್ದ. ಉಪದೇಶವನ್ನೂ ಕೇಳಿದ್ದ. ಮುನಿಗಳ ಹತ್ತಿರ ಇರುವ ಭಗವದ್ ಜಿನಸೇನರ 'ಪಾರ್ಶ್ವಾಭ್ಯುದಯ'ವನ್ನು ನೋಡಿದ್ದ. ಆದರಿಂದ ಅವರ ಉಪನ್ಯಾಸ ಆರಂಭವಾಗುವ ಮುಂಚೆ ಒಂದು ದಿನ ಅವರ ಹತ್ತಿರ ಹೋಗಿ, 'ಪಾರ್ಶ್ವಾಭ್ಯುದಯ'ವನ್ನು ಇಸಿದುಕೊಂಡು ಓದಿದ್ದ. ಆಚಾರ್ಯರು ಕಾಲಿದಾಸನ ಮೇಘದೂತದಲ್ಲಿ ಪಾರ್ಶ್ವ ನಾಥನ ಚರಿತ್ರೆಯನ್ನು ಕೌಶಲ್ಯದಿಂದ ವರ್ಣಿಸಿದುದನ್ನು ಕಂಡು ಮೆಚ್ಚಿ ನುಡಿದಿದ್ದ.

"ಎಂಥ ರಸಘಟ್ಟಿಯಿದು ಮಹಾರಾಜರೆ ?"

"ಅದನ್ನು ಕಣ್ಣುತೆರೆದು ನೋಡುವ ಜನರೆಲ್ಲಿದ್ದಾರೆ?"

"ಏಕಿಲ್ಲ ಮಹಾರಾಜರೆ ?"

"ನೀನೇ ನೋಡಲ್ಲ. ಕಾಲಿದಾಸನನ್ನು ಓದಿದಂತೆ ಜಿನಸೇನ ರನ್ನು ಓದಿರುವೆಯಾ ? ಜಿನಸೇನರ ಕೃತಿಗಳ ಪರಿಚಯ ಎಷ್ಟು ಜನರಿಗೆ ಇವೆ ಭಾರತದಲ್ಲಿ ? ಅವರ 'ಪೂರ್ವಪುರಾಣ' ಒಂದು ರಸೋದಧಿ ಸಂಸ್ಕೃತ ಸಾಹಿತ್ಯದಲ್ಲಿ...."

"ಅಹುದು; ಆದಿಪುರಾಣವೊಂದು ಮಹಾಕಾವ್ಯ !" ಎಂದು ಶ್ರೇಯಾಂಸನು ಮಹಾಕವಿ ಪಂಪನ ಆದಿಪುರಾಣದ ರಸಸ್ಥಾನಗಳನ್ನು ಉಲ್ಲೇಖಿಸುತ್ತ ಒಂದರ್ಧ ತಾಸು ಮುನಿಗಳ ಸನ್ನಿಧಿಯಲ್ಲಿ ಉಪನ್ಯಾಸ ವನ್ನೇ ಕೊಟ್ಟಂತೆ ಮಾಡಿ ಮಾತು ಮುಗಿಸಿದ.

"ಸರಸ್ವತಿಯ ಪುತ್ರನಪ್ಪ ನೀನು"

ಎಂದು ಮಹಾವೀರ ಕೀರ್ತಿಗಳೂ ಮೆಚ್ಚಿಗೆಯನ್ನು ಸೂಚಿಸಿ ದ್ದರು. ಆದರಿಂದ ಜೈನಾಪುರದ ಶ್ರಾವಕರಲ್ಲಿ ಶ್ರೇಯಾಂಸನ ಪರಿಚಯ ಚೆನ್ನಾಗಿ ಉಳಿಯುವಂತೆ ಅವರಿಗೆ ಆಗಿದ್ದಿತು.

ಮುನಿಗಳು ಇಂದು ಅವರ ಮನೆಯಿಂದ ಎದ್ದುಹೋಗುವ ಮೊದಲು ಶ್ರೇಯಾಂಸನಿಗೆ ದಿನಾಲು ಸ್ವಾಧ್ಯಾಯ ಮಾಡುವ ವ್ರತವನ್ನು ಕೊಟ್ಟುಹೋದರು. ಇದೊಂದು 'ಭವ್ಯಜೀವಿ' ಎಂದು

ಅವರು ಭಾವಿಸಿದಂತಿತ್ತು. ಅದರಿಂದ ತಲೆ ಬಾಗಿಲವರೆಗೂ ಹೋಗಿ ಇದ್ದವರು ಮತ್ತೆ ನಿಂತು ಕೇಳಿದರು :

"ಇಂದು ಮುಂಜಾನೆಯಿಂದಲೂ ಎಲ್ಲಿ ಕಾಣಲಿಲ್ಲವಲ್ಲ ?"

"ನನ್ನೊಂದು ನಾಟಕವನ್ನು ಗುರುಗಳು ಪೇಟೆಯಲ್ಲಿ ನಾಲ್ಕು ಜನರಿಗೆ ಓದಿ ಹೇಳುತ್ತಿದ್ದರು !"

"ನಿನ್ನ ನಾಟಕ ?"

"ಅಹುದು 'ವಿಜಯ ಸಾಮ್ರಾಜ್ಯ' ಎಂಬ ನಾಟಕ....!"

"ಇಂಥ ನಾಟಕ ಕಾದಂಬರಿಗಳಲ್ಲಿ ನಿನ್ನ ಆಯುಷ್ಯನ್ನು ಹಾಕಬೇಡಪ್ಪ....!"

"ಆಚಾರ್ಯ ಹಸ್ತಿಮಲ್ಲನೂ ನಾಟಕಗಳನ್ನೇ ಬರೆದರಲ್ಲ "

ಮೃದುವಾಗಿಯೇ ನುಡಿದ ಶ್ರೇಯಾಂಸ. ಆದರೂ ಮಾತಿನ ಪೆಟ್ಟು ಬಲವಾಗಿಯೇ ಇದ್ದಿತು. ಅದು ಸ್ವಾಮಿಗಳಿಗಿಂತ ಪದ್ಮಪ್ಪನಿಗೇ ಹೆಚ್ಚಾಗಿ ತಗುಲಿರಬೇಕು.

"ಏನು ಮಾಡುವಿರಿ ! ನಡೆಯಿರಿ ಹುಡುಗನ ಮಾತು...."

ಎಂದು ಪದ್ಮಪ್ಪ ಬಿಸಿನೀರಿನಿಂದ ತುಂಬಿದ ಕಮಂಡಲನ್ನು ತಕ್ಕೊಂಡು ಮುನಿಗಳನ್ನು ಬಸದಿಗೆ ಕಳಿಸಿ ಬರಲಿಕ್ಕೆ ಮುಂದೆ ಆದ.

ಬಾಳಪ್ಪ ಪಂಡಿತನನ್ನು ಕರೆದುಕೊಂಡು ಊಟಕ್ಕೆ ಕೂಡಲು ಸಿದ್ಧನಾದ ಮನೆಯವರೆಲ್ಲ ಮುಂದಿನ ವ್ಯವಸ್ಥೆಗೆ ತೊಡಗಿದರು. ಪಂಡಿತನೇ ನುಡಿದ—

"ಪದ್ಮಪ್ಪ ಬರಲಿಲ್ಲಲ್ಲ !"

"ಈಗ ಬರತಾನಲ್ಲ. ಅಲ್ಲಿಯವರೆಗೆ ತಾಟು ಮಾಡಲಿ."

ಎಂದು ಬಾಳಪ್ಪ ನುಡಿದು, ಹೆಂಗಸರಿಗೆ ಪದ್ಮಪ್ಪನಿಗಾಗಿಯೂ ಮಣೆ ತಾಟುಗಳನ್ನು ಇಡಲಿಕ್ಕೆ ಹೇಳಿದ.

"ಅವರದೇನು ಉಪ್ಪಿಲ್ಲದ ಸಪ್ಪನ್ನದ ಊಟ .... ಅವರಿಗೂ ನಿಮಗೂ ಏನು ಸಂಬಂಧ? ನೀವು ಬಂದುಬಿಡಿರಿ. ಹೊತ್ತು

ಹೊರಳಿತು. ಅವರೇನು ಬಸದಿಯೊಳಗೆ ಯಾರಾದರೂ ದೊರಕಿದರೆ ಮಾತಾಡುತ್ತ ನಿಂತರೆ ನಿಲ್ಲುವವರೇ...." ಎಂದು ಸುಂದರಪ್ಪ ಮುಂದಾಗಿ ಕರೆದಳು.

ನಿಜವಾಗಿಯೂ ಸುಂದರಪ್ಪ ಅಂದಂತೆಯೇ ಆಯಿತು. ಪದ್ಮಪ್ಪ ಮುನಿಗಳೊಡನೆ ಬಸದಿಯನ್ನು ಪ್ರವೇಶಿಸಲಿಕ್ಕೂ ಜಿನಗೌಡರು ಬಸದಿಗೆ ಬರಲಿಕ್ಕೂ ಕೂಡಿತು. ಎಲ್ಲರೂ ದೇವರ ದರ್ಶನ ಮಾಡಿಕೊಂಡ ಮೇಲೆ ಮುನಿಗಳು 'ಸಾಮಾಯಿತ' ಮಾಡಲಿಕ್ಕೆ ಬಸದಿಯ ಹಿಂದಿನ ಮಗ್ಗುಲಿಗೆ ತೆರಳಿದರು. ಅವರು ದಿನಾಲು ಅಲ್ಲ ಬಿಸಲಲ್ಲಿ ನಿಂತು ಧ್ಯಾನ ಮಾಡುವುದು ಅವರ ಜೀವನ ಕ್ರಮವಾಗಿದ್ದಿತು.

"ಏಕೆ, ಗೌಡರಿಗೆ ಬಸದಿಗೆ ಬರಲಿಕ್ಕೆ ವೇಳೆಯಾಯಿತು ?"

ದರ್ಶನ ಮುಗಿಸಿಕೊಂಡು ಸಹಜ ಪದ್ಮಪ್ಪ ಕೇಳಿದ.

"ಮಹಾರಾಜರ ಆಹಾರ ಆಗದ ಹೊರತಾಗಿ ಊಟಾನೂ ಮಾಡುವಂತಿಲ್ಲ! ಈಗ್ಗೆ ಬಂದರೆ ಏನು ಅಂತ ಚಾವಡಿಯೊಳಗೇ ಕುಳಿತಿದ್ದೆ ಆಯಿತು. ಹೊತ್ತು ಹೊರಳಿದುದೇ ಗೊತ್ತಾಗಲಿಲ್ಲ..."

ಬೇಕೆಂತಲೇ ಧ್ವನಿ ಎತ್ತರಿಸಿ, ಸ್ವಾಮಿಗಳಿಗೆ ಕೇಳ ಬರಲೆಂದು ಮುಂಜಾನೆಯಿಂದ ಎರಡೇಸಲ ಫಲಾಹಾರ ಚಹಗಳನ್ನು ಸ್ವೀಕರಿಸಿದ ಜಿನಗೌಡರು ನುಡಿದರು. ನಿಜವಾಗಿಯೂ ಮುನಿಗಳ ಆಹಾರಕ್ಕಾಗಿ ವಿಲಂಬವಾಗಿರಲಿಲ್ಲ. ಚಾವಡಿಯಲ್ಲಿ ಒಬ್ಬ ಹವಾಲದಾರ ಬಂದುದಕ್ಕಾಗಿ ಅವರಿಗೆ ಇಂದು ಊಟಕ್ಕೆ ವೇಳೆಯಾಗಿದ್ದಿತು.

"ಇಂಥವರೆಲ್ಲ ಊರು ಆಳುವವರು. ನೀವು ಇದ್ದೀರೆಂದೇ ಧರ್ಮ ಕರ್ಮ ಎಲ್ಲ ನಮ್ಮೂರೊಳಗ ಉಳಿದದೆ. ಸುತ್ತಲಿನ ಹಳ್ಳಿಗಳಲ್ಲಿ ಹೋಗರಿ....ಬಸದಿಗಳನ್ನು ಉಡುಗುವವರಿಗೆ ಸಹ ದಿಕ್ಕಿಲ್ಲ...."

ಎಂದು ಪದ್ಮಪ್ಪ ನುಡಿದು, ಮನೆಯ ಕಡೆಗೆ ನಡೆದ. ಐದು ದಿನದ ಉಪವಾಸವಾದುದರಿಂದ ಅವನ ನಡಿಗೆಯಲ್ಲಿ ತೂಗಾಟವಿದ್ದಿತು.

ಮತ್ತೆ ಗೌಡರು ಪದ್ಮಪ್ಪನನ್ನು ಕೆಣಕಿ ಮಾತನಾಡಿಸಿದರು

"ಶ್ರೇಯಾಂಸ ಬರಲಿಲ್ಲ ಕಮಂಡಲು ತಕ್ಕೊಂಡು? ಮುಪ್ಪಿನವ ಸಾಗಿ ನೀನೇ ಬಂದೆ ಬಿಸಲಲ್ಲಿ?"

"ಅವನು ಮುಂಜಾನೆಯಿಂದಲೂ ಎಲ್ಲಿಗೋ ಹೋಗಿದ್ದ. ಈಗ ಮನೆಗೆ ಬಂದ. ಇನ್ನೂ ಸ್ನಾನ ಇಲ್ಲ....ಅದಕ್ಕ ನಾನೇ ಬಂದೆ...."

"ಅಕ್ಕಾಸಾನಿ ಮನೆಯ ಸಂಗತಿ...."

ಎಂದಿಷ್ಟೇ ನುಡಿದು ಗೌಡರು ತಮ್ಮ ಮನೆಯ ದಾರೀ ಹಿಡಿದರು. ಅವರ ಕೂಡ ಗಂಧರ್ವನ ನಾಟಕಕ್ಕೆ ಹೋಗಿ ಶ್ರೇಯಾಂಸ ಅವಿನಯ ತೋರಿಸಿದ್ದ. ಅದಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸುವ ಏರ್ಪಾಡು ಮಾಡಿದ ಶ್ರೇಯವನ್ನು ಹೊಂದಿ, ಜಿನ ಮಂದಿರದಿಂದ ಮನೆಗೆ ಮರಳಿದ್ದರು ಗೌಡರು. ಉಲ್ಹಾಸದ ನಗೆ ಅವರ ಮುಖದ ಮೇಲೆ ಲಾಸ್ಯವಾಡುತ್ತಿದ್ದಿತು.

ಗಂಧರ್ವ ಕಂಪನಿಯ 'ಮೃಚ್ಛಕಟಿಕ' ನಾಟಕವನ್ನು ನೋಡಿ ಬಂದಾಗಿನಿಂದಲೂ ಶ್ರೇಯಾಂಸನ ವಿಚಾರ ಚಕ್ರಕ್ಕೊಂದು ಹೊಸ ಗತಿಯೇ ಸಿಕ್ಕಂತಾಗಿತ್ತು. ಆ ನಾಟಕ ಮರಾಠಿ ಭಾಷೆಯಲ್ಲಿ ಇದ್ದಿತಾದರೂ ನಾಟಕದ ತಂತ್ರವೆಲ್ಲ ಅವನ ಕಣ್ಣಿಗೆ ಕಟ್ಟಿದಂತಾಗಿದ್ದಿತು. ಪ್ರವೇಶ ರಚನೆಯಲ್ಲಿ ಶೂದ್ರಕನು ತೋರಿದ ಚಾತುರ್ಯವನ್ನು ಕಂಡು ಬೆರಗುಗೊಂಡಿದ್ದ ಶ್ರೇಯಾಂಸ. ವಸಂತಸೇನೆಗೆ ಆರ್ಯ ಚಾರುದತ್ತನ ಪರಿಚಯವಾದ ಮೇಲೆ ಅವನ ವಿಷಯಕ್ಕೆ ಅವಳಲ್ಲಿ ಅನುರಾಗ ಹುಟ್ಟುವಂತೆ ಸಂಯೋಜಿಸಿದ ದೃಶ್ಯಗಳು ಅವನ ಮನಸ್ಸನ್ನು ಬಹಳ ಹಿಡಿದಿದ್ದುವು. ಆ ನಾಟಕದ ತಂತ್ರದ ಮಾನದಂಡದಿಂದ ತನ್ನ 'ವಿಜಯ ಸಾಮ್ರಾಜ್ಯ'ವನ್ನು ಪರೀಕ್ಷಿಸಿದ. ಅಲ್ಲಲ್ಲಿ ಕೆಲವು ಕುಂದು ಕೊರತೆಗಳು ಕಂಡರೂ ಒಟ್ಟಿನಲ್ಲಿ ತಾನು ಬರೆದ ನಾಟಕವೂ ಕೂಡ ತಂತ್ರ ಶುದ್ಧತೆಯುಳ್ಳದೆಂದು ಮನಗಂಡ. ಆದರೂ ಗುರುಗಳನ್ನು ಒಂದು ಮಾತನ್ನು ಕೇಳಬೇಕೆಂದು ವಿಚಾರಿಸಿ.

"ತಂತ್ರದ ದೃಷ್ಟಿಯಿಂದ 'ವಿಜಯ ಸಾಮ್ರಾಜ್ಯ' ಹೇಗೆನಿಸಿತು ಮಾಸ್ತರರೆ?"

"ತಂತ್ರದ ಕಟ್ಟುನಿಟ್ಟು ನನಗಾಗಿ ಇಲ್ಲ!"

"ಹಾಗೆಂದರೆ ಹೇಗೆ ಗುರುಗಳೆ?"

"ಇಲ್ಲ, ಸ್ಫೂರ್ತಿಯಿಂದ ಉಜ್ವಲಗೊಂಡ ಕೃತಿ ತನ್ನಿಂದ ತಾನೇ ತಂತ್ರವನ್ನು ಮೈಗೂಡಿಸಿಕೊಂಡು ರೂಪುಗೊಳ್ಳುತ್ತದೆ...."

ಗುರುಗಳ ಮಾತಿನಲ್ಲಿ ಶ್ರೇಯಾಂಸನಿಗೆ ಎಷ್ಟೋ ಸತ್ಯವಿರುವಂತೆ

ಕಂಡಿತು ತಾನು ನಾಟಕವನ್ನು ಬರೆಯುವ ಮೊದಲು ತಂತ್ರವನ್ನು ಕುರಿತು ವಿಚಾರಿಸಿರಲಿಲ್ಲ ಕೂಡ. ಆದರೂ ಅದು ನಾಟಕದ ತಂತ್ರವನ್ನು ಬಿಟ್ಟು ದೂರ ಸರಿದಿರಲಿಲ್ಲ. ಅಂದರೂ ಸಾಹಿತ್ಯದ ವಿವಿಧಾಂಗಗಳ ರಚನೆಯ ಕ್ರಮವನ್ನು ಅಭ್ಯಾಸಿಸುವುದು ಅವಶ್ಯವೆಂದು ಅವನಿಗೆ ತೋರಿತು. ಅಂದಿನಿಂದ ಅವನ ವಾಚನದ ದೃಷ್ಟಿಯಲ್ಲಿ ಒಂದು ನವೀನ ಕ್ರಾಂತಿಯಾಯಿತು.

ಗಂಧರ್ವನ ನಾಟಕವು ಶ್ರೇಯಾಂಸನ ದೃಷ್ಟಿಯಲ್ಲಿ ಈ ಕ್ರಾಂತಿಯನ್ನು ತಂದಿದ್ದರೂ ಕೆಲವು ವಿಷಯಗಳಲ್ಲಿ ಆ ಕಂಪನಿಯ ನಾಟಕವು ಅವನಿಗೆ ಅಸಹ್ಯ ವೇದನೆಯನ್ನು ಉಂಟುಮಾಡಿತ್ತು. ಬಾಲಗಂಧರ್ವ ಅರವತ್ತು ವರ್ಷದ ಮುದುಕ. ಅವನೇ ವಸಂತ ಸೇನೆಯ ಮಾಡಬೇಕೆಂದಿರುವ ಹಟ. ಇದರಿಂದ ನಾಟಕದ ಕಳೆಯೇ ಕೆಟ್ಟುಹೋಗಿತ್ತು. ಮೂವತ್ತು ವರ್ಷದ ತರುಣ ಚಾರುದತ್ತನನ್ನು ಅರವತ್ತು ವರ್ಷದ ಮುದುಕಿ ವಸಂತಸೇನೆ ಮೋಹಿಸುವುದು, ಅವಳಲ್ಲಿ ಅವನಿಗೆ ಅನುರಾಗ ಹುಟ್ಟುವುದು ಎಲ್ಲವೂ ಅಸಹ್ಯವಾಗಿತ್ತು. ಕೊಬ್ಬಿನಿಂದ ಉಬ್ಬಿದ ಹೊಟ್ಟೆಯನ್ನು ಬಿಗಿದುಕೊಂಡು ಕೆಮ್ಮುತ್ತ ರಂಗದ ಮೇಲೆ ಬಂದು ನಿಲ್ಲುವ ವಸಂತಸೇನೆಯನ್ನು ಕಂಡರೆ ಯಾರಿಗೆ ತಾಳ್ಮೆ ಉಳಿದೀತು? ಆದರೂ ಕಂಪನಿಯ ಹಿಂದಿನ ಹೆಸರಿನ ಮೇಲೆ ಮಹಾರಾಷ್ಟ್ರಿಗರು ದುಡ್ಡು ತೆತ್ತು ನಾಟಕಗಳನ್ನು ನೋಡುತ್ತಿದ್ದರು. ಇದನ್ನು ಕಂಡು ಶ್ರೇಯಾಂಸನಿಗೆ ಮಹಾರಾಷ್ಟ್ರಿಗರ ಅಭಿರುಚಿಯ ಬಗ್ಗೆ ಅಸಹ್ಯವಾಗುತ್ತಿದ್ದರೂ ಕಲಾವಿದರಲ್ಲಿರುವ ಅವರ ಅಭಿಮಾನವನ್ನು ಮೆಚ್ಚಿಕೊಂಡಿದ್ದ. ಹಾಗೆಯೇ ಕನ್ನಡಿಗರಲ್ಲಿ ಕಲಾವಿದರ ಬಗ್ಗೆ ಆದರ ಅಭಿಮಾನಗಳು ಇಲ್ಲದುದನ್ನು ನೆನೆದು ಕೊರಗುತ್ತಿದ್ದನು.

ಇದಕ್ಕೆ ತಕ್ಕ ಅನುಭವವೊಂದು ಮೊನ್ನೆಯೇ ಶ್ರೇಯಾಂಸನಿಗೆ ಬಂದಿದ್ದಿತು.

ಆತ್ಮಾರಾಮರಿಗೆ ಶ್ರೇಯಾಂಸನು ಬರೆದ ನಾಟಕವನ್ನು ಎಷ್ಟು

ಜನರ ಮುಂದೆ ಓದಿ ಹೇಳಿದರೂ ಸಮಾಧಾನವಿಲ್ಲ. ತನ್ನ ಶಿಷ್ಯನು ಬರೆದ ನಾಟಕ, ಒಳ್ಳೆಯ ನಾಟಕ, ತನ್ನ ಶಿಕ್ಷಣ ಫಲಿಸಿತು ಮೊದಲಾದ ಭಾವನೆಗಳೆಲ್ಲ ಸೇರಿ ಅವರಿಗೆ ನಾಟಕವನ್ನು ನಾಲ್ಕು ಜನರು ಕೂಡಿದಲ್ಲೆಲ್ಲ ಓದಿ ತೋರಿಸುವಂತೆ ಮಾಡಿದ್ದುವು. ಇಂದೇನೋ ಪೇಟೆಯಲ್ಲಿ ಒಂದು ಅಂಗಡಿಯಲ್ಲಿ ನಾಲ್ಕು ಜನ ಸೇರಿದ್ದನ್ನು ಕಂಡರು ಆತ್ಮಾರಾಮರು. ಕೂಡಲೆ ತಮ್ಮ ಮನೆಯಿಂದ ನಾಟಕವನ್ನು ತರಿಸಿದರೇ. ಶ್ರೇಯಾಂಸನಿಸೂ ಬರಹೇಳಿದರು ಓದಲಿಕ್ಕೆ ಆರಂಭಿಸಿದರು.

"ಅವನೇ ಓದಲಿ ಅಲ್ಲ ಮಾಸ್ತರರೆ !"

ಅಲ್ಲಿ ಕುಳಿತ ಲೋಕಲ್ ಬೋರ್ಡ ಮೆಂಬರೊಬ್ಬರು ನುಡಿದರು.

"ಬೇಡ ನಾನೇ ಓದಿ ಹೇಳುವೆ"

ಕನ್ನಡಕವನ್ನು ಹಣೆಯಿಂದ ಕಣ್ಣಿಗೆ ಇಳಿಸಿದರು ಆತ್ಮಾರಾಮರು.

"ಯಾರು ಬರೆದದ್ದರಿ ನಾಟಕ?"

ಪ್ರಸಿದ್ಧ ಹತ್ತಿಯ ವ್ಯಾಪಾರಿಯೊಬ್ಬ ತೆಕ್ಕೆಗೆ ಒರಗಿಕೊಂಡೇ ಕೇಳಿದ

"ನಮ್ಮ ಶ್ರೇಯಾಂಸ ಬರೆದದ್ದು"

ಅಭಿಮಾನದಿಂದ ಮಾಸ್ತರರು ನುಡಿದರು.

"ನಿಮ್ಮ ಶಿಷ್ಯರೇನರಿ ಅವರು ?"

ಇನ್ನೊಬ್ಬ ವ್ಯವಹಾರಿ, ಅಪಹಾಸ್ಯದ ರಾಗವೆಳೆದ.

"ನೀನೂ ನನ್ನ ಶಿಷ್ಯನೇ ಅಲ್ಲ! ಹಿಂಗು ಜೀರಿಗೆ ಮಾರಿ ಮಾರಿ ಸಾಕಾಗಿ ಹೋಯಿತು. ನನ್ನ ಶಿಷ್ಯರೆಂತ ಹೇಳಿಕೊಳ್ಳಲಿಕ್ಕೂ ನಾಚಿಕೆ. ಏನು ಮಾಡಿರುವೆ ಹೇಳು. ಶೂರ ಜನರ ಓತದ ಕಾರ್ಯವನ್ನು? ಇನ್ನೂ ಇವರು ಲೋಕಲ್ ಬೋರ್ಡ ಮೆಂಬರ್ ಆದರೂ ಆದರು...."

"ಇರಲರಿ, ನಾಟಕ ಓದರಿ ನೋಡೋಣ...."

ಆತ್ಮಾರಾಮರ ಮಾತನ್ನು ತಡೆದು ಇನ್ನೊಬ್ಬಾತ ನಾಟಕ

ಕೇಳುವ ಉತ್ಸುಕತೆಯಿಂದ ಹೇಳಿದ.

ಆತ್ಮಾರಾಮರು ಓದಲಿಕ್ಕೆ ಆರಂಭಿಸಿದರು. ಒಂದೆರಡು ಪ್ರವೇಶಗಳು ಮುಗಿಯುವವರೆಗೆ ನಾಟಕದ ವಾಚನ ಸ್ವಲ್ಪ ಸಪ್ಪೆಯಾಗಿದ್ದಿತು. ಇನ್ನೂ ಆತ್ಮಾರಾಮರ ತಲೆಯಲ್ಲಿ ಆ ವರ್ತಕರು ಮಾತನಾಡಿದ ವಿವಿಧ ಮಾತುಗಳು ಸುತ್ತುತ್ತಿದ್ದುವು. ಕ್ರಮೇಣ ಅವು ಅಳಿದು ನಾಟಕದಲ್ಲಿ ಅವರು ಒಂದಾಗಲಿಕ್ಕೆ ತುಸು ವೇಳೆ ಹತ್ತಿತು. ಆಮೇಲೆ ಅವರ ವಾಣಿಯು ನಿರರ್ಗಳವಾಗಿ ಹರಿಯಹತ್ತಿತು. ಮುಖದ ಮೇಲೆ ಪಾತ್ರಗಳ ಭಾವಗಳೆಲ್ಲ ಸ್ಪಷ್ಟವಾಗಿ ಮೂಡಹತ್ತಿದುವು. ಎಲ್ಲರ ಕಣ್-ಮನಗಳನ್ನೆಲ್ಲ ಸೆರೆಹಿಡಿಯಿತು ನಾಟಕ. ಓದುವುದರಲ್ಲಿ ಕೇಳುವುದರಲ್ಲಿ ತನ್ಮಯರಾದರು ಅಲ್ಲಿದ್ದವರೆಲ್ಲರು!

ಆ ಎರಡು ತಾಸುಗಳು ಹೇಗೆ ಸರಿದುವೆಂಬುದು ಯಾರಿಗೂ ಗೊತ್ತಾಗಲಿಲ್ಲ. ನಾಟಕವನ್ನು ಓದಿ ಮುಗಿಸಿ ಆತ್ಮಾರಾಮರು ಕನ್ನಡಕವನ್ನು ಹಣೆಗೆ ಏರಿಸಿದಾಗ ಒಂದು ದೊಡ್ಡ ಮಳೆ ಸುರಿದು ಒಮ್ಮೆಲೇ ನಿಂತಂತೆ ಆಗಿತ್ತು ಅಂಗಡಿಯ ವಾತಾವರಣ. ಎಲ್ಲರೂ ತಮ್ಮ ಸಂಸಾರದ ಚಿಂತೆಗಳನ್ನು ಮರೆತು ಬಾಯ್ದೆರೆದು ಕುಳಿತಿದ್ದರು. ಎರಡು ಮಿನಿಟಿಗೊಂದು ಬೀಡಿಯನ್ನು ಹೊತ್ತಿಸುವ ಆ ಕಿರಾಣಿ ಅಂಗಡಿಕಾರನೂ ಕೂಡ ಇಲ್ಲಿಯವರೆಗೆ ಬೀಡಿಯನ್ನೇ ಸೇದುವುದನ್ನು ಮರೆತಿದ್ದ. ಎಲ್ಲರೂ ಆರು ನೂರು ವರ್ಷಗಳ ಹಿಂದಿನ ಕರ್ನಾಟಕದಲ್ಲಿ ವಿಹರಿಸುತ್ತಿದ್ದರು. ಹುಕ್ಕ ಬುಕ್ಕ ವಿದ್ಯಾರಣ್ಯರು ಅವರ ಬಗೆಗಣ್ಣೆದುರು ಬಂದು ನಿಂತಿದ್ದರು. ತುಂಗಭದ್ರೆ, ಹಂಪೆ, ಮಾಲ್ಯವಂತ ಪರ್ವತ ಇವೆಲ್ಲ ಅವರ ದೃಷ್ಟಿಪಥದೆದುರಿಗೆ ಹಾದುಹೋದುವು ಇನ್ನೂ ಆ ಲೋಕದಲ್ಲಿಯೇ ಸಂಚರಿಸುವಂತಿದ್ದರು. ಮೌನವಾಗಿದ್ದರು.

"ಹೇಗೇನಿಸಿತು ನಾಟಕ?" ಆತ್ಮಾರಾಮರೇ ಮೌನವನ್ನು ಮುರಿದರು.

"ಅದ್ಭುತವಾಗಿದೆ!" ಎಂದರು ಲೋಕಲ್ ಬೋರ್ಡ ಮೆಂಬರರು.

"ಅದಕ್ಕೇ ನಿಮಗೆ ಓದಿ ಹೇಳಬೇಕೆಂದು ಎನಿಸಿತು."

ಸ್ವಲ್ಪ ಸದಭಿಮಾನದಿಂದಲೇ ನುಡಿದರು ಆತ್ಮಾರಾಮ ಮಾಸ್ತರರು....

ಇಷ್ಟರಲ್ಲಿ ಕೆಳಗೆ ಇಟ್ಟ ನಾಟಕದ ಹಸ್ತಪ್ರತಿಯನ್ನು ಹತ್ತಿಯ ವ್ಯವಹಾರಿಗಳು ಕೈಗೆ ತೆಗೆದುಕೊಂಡು ನಿರೀಕ್ಷಿಸುತ್ತಿದ್ದರು. ಅವರ ನೋಟದ ಭಾವವನ್ನು ಅರಿತ ಇನ್ನೊಬ್ಬ ಅಂಗಡಿಕಾರರು ಕೇಳಿದರು :

"ಏನು ನೋಡುತ್ತಿರುವಿರಿ ?"

"ಅಕ್ಷರ ಚನ್ನಾಗಿ ಇದ್ದಂತೆ ಕಾಣುವದಿಲ್ಲ"

ನಿರಾಶೆಯಿಂದ ನುಡಿದ ಆ ಹತ್ತಿಯ ವ್ಯಾಪಾರಿ.

"ಒಳ್ಳೆಯದಿದೆಯಲ್ಲ ಬಣಜಿಗರ ಲೆಕ್ಕ? ನೃತ್ಯ ಹೇಗಿದೆ ಎಂದು ಕೇಳಿದರೆ ಪೀತಾಂಬರ ಉಟ್ಟದ್ದು ಚೆನ್ನಾಗಿರಲಿಲ್ಲ... ಅಂತ....ಏನು ರಸಿಕತೆ ಹೇಳಲಿ ?"

ಮೆಂಬರರೇ ಹಾಸ್ಯದ ಸ್ವರದಲ್ಲಿ ಮಾತನಾಡಿ, ಆತ್ಮಾರಾಮರ ಕೆಲಸವನ್ನು ಮಾಡಿದರು. ಶ್ರೇಯಾಂಸನಿಗೂ ಒಂದು ಕ್ಷಣ ಇವರ ಮುಂದೆ ನಾಟಕವನ್ನು ಓದದೆ ಇದ್ದರೇನೇ ಚೆನ್ನಾಗಿತ್ತು ಎನಿಸಿತು.

ಆದರೆ ಈ ಭಾವನೆಯು ಬಹಳ ಹೊತ್ತು ಉಳಿಯಲಿಲ್ಲ. ಇನ್ನೊಬ್ಬ ವ್ಯವಹಾರಿಯು ಕೂಡಲೆ ಆಡಿದ ಮಾತಿನಿಂದ ಆ ಮಾತಿನ ಮೇಲೆ ಸ್ವಚ್ಛ ಪ್ರಕಾಶಬಿತ್ತು.

"ಅವರು ಜಮಾ ಖರ್ಚು ಬರೆಯಲಿಕ್ಕೆ ಅಕ್ಷರ ಯೋಗ್ಯ ಅವಯೋ ಇಲ್ಲೋ ನೋಡುತ್ತಿದ್ದಾರೆ! ನಾಟಕದ ಮಾತು ಆಗಲೇ ಮುಗಿದು ಬಿಟ್ಟಿದೆಯಲ್ಲ. ಬಾಳಪ್ಪ ಏನೋ ಅವರ ಗಿರಣಿಯೊಳಗೆ ಲೆಕ್ಕ ಬರೆದುಕೊಳ್ಳಲಿಕ್ಕೆ ಮಗನನ್ನು ಇಡಬೇಕಂತ ವಿಚಾರಿಸುತಿದ್ದ...."

"ಹೀಗದೆಯೋ ?"

"ಇಲ್ಲದಿದ್ದರೆ ಇಷ್ಟು ಹೊತ್ತು ಕುಳಿತಾನಪ್ಪ ಈತ, ತನ್ನ ಗಿರಣಿ ಯೊಳಗಿನ ಕೆಲಸ ಬಿಟ್ಟು ?"

ಎಂದು ನಗೆಯಾಡಿದ ಇನ್ನೊಬ್ಬ.

"ಈ ಹಂಗಾಮಿಗೆ ನನಗೂ ಒಬ್ಬ ಹುಡುಗ ಬೇಕಾಗಿದಾನರೀ. ಶ್ರೇಯಾಂಸ ಹೇಗೆ ಲೆಕ್ಕದೊಳಗೆ....ಹತ್ತಿಯ ಬಿಲ್ಲು ಗಿಲ್ಲು ಸರಿಯಾಗಿ ಮಾಡಬಹುದಲ್ಲವೇ ?"

ಮಾಸ್ತರರ ಸರಟೀಫಿಕೇಟಕ್ಕಾಗಿ ಹತ್ತಿಯ ವ್ಯವಹಾರಿ ಮಾತನ್ನು ಮುಂದರಿಸಿದ:

ಆತ್ಮಾರಾಮರು ಇಲ್ಲಿಯವರೆಗೆ ತಡೆದುಕೊಂಡಿದ್ದರು. ಇನ್ನು ಸುಮ್ಮನಿರಲಿಕ್ಕೆ ಆಗಲಿಲ್ಲವರಿಗೆ. ತಟ್ಟನೆ ಉತ್ತರ ಕೊಟ್ಟರು....

"ಹತ್ತಿಯ ಲೆಕ್ಕ ಮಾಡುವ ಹುಡುಗ ಅಲ್ಲ ಶ್ರೇಯಾಂಸ! ಲೋಕದ ಲೆಕ್ಕ ನೋಡಿ ನಿಮ್ಮಂಥವರ ಮುಂದಿಡುವವ ಅವ. ತಿಳೀತಾ ?"

ಎಂದು ಸ್ವಲ್ಪ ಸಿಡುಕಿನಿಂದಲೇ ನುಡಿದು ಅತ್ಮಾರಾಮರು ಎದ್ದರು. ಅವರ ಜೊತೆಯಲ್ಲಿಯೇ ಶ್ರೇಯಾಂಸನೂ ಎದ್ದು ಅಂಗಡಿಯಿಂದ ಹೊರಗೆ ಬಂದ. ಅಲ್ಲಿ ಕುಳಿತ ಕೆಲವು ಜನ ವ್ಯವಹಾರಿಗಳು,

"ಮೂವತ್ತು ವರ್ಷ ಹುಡುಗರಲ್ಲಿಯೇ ಕಳೆದಿದ್ದಾರೆ ಪಾಪ ಮಾಸ್ತರರು! ಈಗೇನೋ ಪೆನಶನ್ ಬರತದ....ಸಂಸಾರದ ಚಿಂತೇನಿಲ್ಲ. ವ್ಯವಹಾರ ಹೇಗೆ ಗೊತ್ತಾಗಬೇಕು.... ?"

ಎಂದು ಭಾವಿಸಿದ್ದರು. ಆದರೆ ಲೋಕಲ್ ಬೋರ್ಡಿನ ಸದಸ್ಯರು ಮಾತ್ರ ಹುಡುಗನಿಗೆ ಪ್ರೋತ್ಸಾಹ ಸಿಕ್ಕರೆ ಪ್ರಸಿದ್ಧಿಗೆ ಬರುವನೆಂದು ಬಗೆದಿದ್ದರು. ಅದನ್ನೇ ಯೋಚಿಸುತ್ತ ಅವರು ಎದ್ದು ಮನೆಗೆ ಊಟಕ್ಕೆ ತೆರಳಿದರು.

ಬೋರ್ಡಿನ ಸದಸ್ಯರ ಈ ಭಾವನೆಯ ಲಾಭವು ಶ್ರೇಯಾಂಸನಿಗೆ ಮುಂದಿನ ಬಾಳಿನಲ್ಲಿ ಆಗುವಂತಿತ್ತು. ಪ್ರಸಂಗ ಬಂದರೆ ಅದರ ಉಪಯೋಗವನ್ನು ಮಾಡಿಕೊಳ್ಳಬೇಕೆಂದು ಯೋಚಿಸಿಯೇ ಆತ್ಮಾರಾಮರು ಅಂದು ಅವರ ಎದುರಿಗೆ ನಾಟಕವನ್ನು ಓದಿದ್ದರು. ಯಾವಾಗಲೂ

ಒಂದು ಕಲ್ಲಿನಿಂದ ಎರಡು ಕಾಯಿಗಳನ್ನು ಕೆಡಹುವ ಯುಕ್ತಿ ಅವರದು.

ಶ್ರೇಯಾಂಸನ ಮನೆಯವರು ಹೆಚ್ಚಿನ ಅಭ್ಯಾಸಕ್ಕಾಗಿ ಅವನನ್ನು ಹಾಯ್‌ಸ್ಕೂಲಿಗೆ ಕಳಿಸುವಂತಿರಲಿಲ್ಲ. ಇಂಗ್ಲೀಷ ಕಲಿಸುವುದರಿಂದ ಹುಡುಗರ ಆಚಾರ ವಿಚಾರಗಳೆಲ್ಲ ಕೆಟ್ಟುಹೋಗುವವೆಂದು ಪದ್ಮಪ್ಪನ ಅಭಿಪ್ರಾಯವಾಗಿತ್ತು. ಬಾಳಪ್ಪನಿಗಂತೂ ಒಕ್ಕಲತನವನ್ನು ಮಾಡದ ಮಗನು ಎಲ್ಲಿಯಾದರೂ ದುಡಿದು ನಾಲ್ಕು ದುಡ್ಡು ಗಳಿಸಿದರೆ ಸಾಕಿತ್ತು. ಮನೆಯ ಹೆಂಗಸರಿಗೆ ಶ್ರೇಯಾಂಸನು ಕಣ್ಣೆದುರಿಗೇ ಇರಲಿ, ಹೆಂಡತಿ ಬರುವಳು ನಾಲ್ಕು ಹುಡುಗರನ್ನು ಹೆತ್ತು ಸಂಸಾರಿಯಾಗಲಿ ಎಂಬ ಹಂಬಲ. ಇಂಥದರಲ್ಲಿ ಶ್ರೇಯಾಂಸನ ಎಂಥ ಹಟವೂ ಉಪಯೋಗ ಬೀಳಲಿಲ್ಲ. ಆತ್ಮಾರಾಮರ ತಿಳುವಳಿಕೆಯ ಮಾತೂ ಫಲಿಸಲಿಲ್ಲ. ಊರಲ್ಲಿ ಶ್ರೇಯಾಂಸನನ್ನು ಮುಂದಿನ ಅಭ್ಯಾಸಕ್ಕೆ ಕಳಿಸಿರೆಂದು ಹೇಳುವವರೂ ದೊರಕಲಿಲ್ಲ. ಗೌಡರೊಬ್ಬರು ಹಾಗೆ ಹೇಳಿದ್ದರೆ ಏನಾದರೂ ಉಪಯೋಗವಾಗಬಹುದಿತ್ತು. ಅವರು ಮೇಲಿಂದ ಮೇಲೆ ಹೇಳುತ್ತಿದ್ದುದು ಇದನ್ನೇ—

"ಹುಡುಗ ಹಾದಿಯನ್ನು ಬಿಡುವ. ಯಾವುದಾದರೊಂದು ಉದ್ಯೋಗದಲ್ಲಿ ತೊಡಕಿಸಿರಿ. ಸುಮ್ಮನೆ ಹೊಲದ ಸುತ್ತ ತಿರುಗಿ ಬಂದರೂ ಆದೀತು...."

ಅವರಿಗೂ ಮನೆಯಲ್ಲಿ ಚಿಕ್ಕಪುಟ್ಟ ಬರವಣಿಗೆಗೆ ಶ್ರೇಯಾಂಸ ಬೇಕಾಗುತ್ತಿದ್ದ. ಅದರಿಂದ ಆತ ಪರಊರಿಗೆ ಹೋಗಿರಬಾರದು, ತನ್ನ ಮಕ್ಕಳಿಗೆ ಪಾಠ ಹೇಳಲಿಕ್ಕೆ ಇದ್ದಿರಬೇಕು, ಪುಕ್ಕಟೆ ಕೆಲಸಕ್ಕೆ ಆಳು ಸಿಕ್ಕಿರಬೇಕು, ತನ್ನ ಮರ್ಯಾದೆಗೆ – ವಿಲಾಸಕ್ಕೆ– ಯಾವುದಕ್ಕೂ ಆತಂಕವಾಗಿರಬಾರದು ಎಂದವರ ಹವಣಿಕೆಯಿತ್ತು.

ಈ ಚಕ್ರವ್ಯೂಹವನ್ನು ಭೇದಿಸಿ ಹೊರಗೆ ಹೋಗುವಷ್ಟು ಸಾಮರ್ಥ್ಯ, ಸಂಸ್ಕಾರಗಳು ಹಳ್ಳಿಯಲ್ಲಿ ಬೆಳೆದ ಶ್ರೇಯಾಂಸನಿಗೆ ಇರಲಿಲ್ಲವೇನೋ! ಅದರಂತೆ ಹೆಚ್ಚಿನ ಸಾಹಸಮಾಡುವ ಶಕ್ತಿಯೂ

ಆತ್ಮಾರಾಮ ಮಾಸ್ತರರಲ್ಲಿ ಇರಲಿಲ್ಲ. ಆದರಿಂದ ತಮ್ಮೂರಲ್ಲಿಯ ಲೋಕಲ್ ಬೋರ್ಡ ಸದಸ್ಯರನ್ನು ಹಿಡಿದು, ಶ್ರೇಯಾಂಸನನ್ನು ಎಲ್ಲಿಯಾದರೂ ಒಂದು ಕನ್ನಡ ಶಾಲೆಯಲ್ಲಿ ಶಿಕ್ಷಕನನ್ನಾಗಿ ಮಾಡಿಬಿಟ್ಟರೆ ತೀರಿತೆಂದು ಅವರು ಭಾವಿಸಿದ್ದರು. ಆ ಪ್ರಯತ್ನದಲ್ಲಿಯೂ ಅವರು ಇದ್ದರು.

ಇದರ ಕಲ್ಪನೆಯು ಬಾಳಪ್ಪನಿಗೆ ಇರಲಿಲ್ಲ. ಇದ್ದರೂ ಪರವೂರಿಗೆ ಮಗನನ್ನು ಕೆಲಸದ ಮೇಲೆ ಕಳಿಸಲಿಕ್ಕೆ ಒಪ್ಪುತ್ತಿದ್ದನೋ ಇಲ್ಲವೋ ಏನೋ? ಆದರೂ ಊರೊಳಗೆಯೇ ಯಾವುದಾದರೊಂದು ಕೆಲಸ ಸಿಕ್ಕರೆ ಚೆನ್ನಾಗುವುದೆಂದು ಆತ ಯತ್ನಿಸುತ್ತಿದ್ದ. ಹತ್ತಿಯ ಗಿರಣಿಯ ಒಡೆಯರು, ಶ್ರೇಯಾಂಸನನ್ನು ನೌಕರಿಗೇನೋ ಇಟ್ಟುಕೊಳ್ಳಲಿಕ್ಕೆ ಒಪ್ಪಿದ್ದರು. ಆದರೆ ಅವರ ಮನೆಯಲ್ಲಿ ದಿನಾಲು ನಾಲ್ಕಾರು ಕೊಡ ನೀರನ್ನು ತಂದುಹಾಕುವ ಕೆಲಸವನ್ನೂ ಶ್ರೇಯಾಂಸ ಮಾಡಬೇಕಾಗುತ್ತಿದ್ದಿತು. ಇದಕ್ಕೆ ಮಾತ್ರ ಬಾಳಪ್ಪನ ಒಪ್ಪಿಗೆ ಇರಲಿಲ್ಲ.

"ನನ್ನ ಮಗ ಅನ್ಯರ ಮನೆಯಲ್ಲಿ ನೀರು ಹಾಕಬೇಕೆ? ಅಂಥದು ಏನು ಆಗಿದೆ ನಮಗೆ? ಇನ್ನೂ ನಾಲ್ಕು ವರ್ಷ ತಿಂದು ತಿರುಗಾಡಲಿ, ನನ್ನ ಜೀವದ ಮೇಲೆ........"

ಎಂದು ಆಗಾಗ ಅಭಿಮಾನದಿಂದ ಹೇಳಿಕೊಳ್ಳುವ. ಆದಕ್ಕೆ ಸುಂದರವ್ವನೂ ಕೂಡ,

"ಹೂವು ಮಾರುವಲ್ಲಿ ಹುಲ್ಲು ಮಾರುವ ಕೆಲಸ ಮಾಡೀಯಪ್ಪಾ ಮತ್ತೆ!"

ಎಂದು ತಮ್ಮನನ್ನು ಮೇಲಿಂದ ಮೇಲೆ ಎಚ್ಚರಿಸುತ್ತಿದ್ದಳು.

"ನನಗೆ ಅಷ್ಟೂ ತಿಳಿಯೂದಿಲ್ಲೇನು ಬಿಡು! ಇವಕ್ಕಾಗಿಯೇ ನಾನು ಏಳನೆಯ ಇಯುತ್ತೆಯ ತನಕ ಸಾಲೆ ಕಲಿಶಿಲ್ಲ....? ನಾವೇನೋ ಅಂಥಾ ಕೆಲಸ ಇಂಥಾ ಕೆಲಸ ಮಾಡಿದೆವು. ಪದ್ಮಪ್ಪ ಬಸದಿಗೆ ಸುಣ್ಣ ಹಚ್ಚಲಿಕ್ಕೆ ಹೋಗತಿದ್ದ....ಅಂತ ಶ್ರೇಯಾಂಸ ಹೋಗಲಿಕ್ಕೆ ಆದೀತೆ?"

"ಅದೇನು, ದೇವರ ಕೆಲಸೇ ಅದೆ ಬಿಡು!" ಸುಂದರವ್ವನ ಸಮಾಧಾನವಿದು.

"ಇದ್ದರೇನಾಯಿತು? ಉಳಿದವರೆಲ್ಲ ಕಚ್ಚಿ ಕೈಯೊಳಗೆ ಹಿಡಿದು ಕೊಂಡು ಬಾಜೀರಾಯನ ಡೌಲು ಇಟ್ಟು ಹೇಳುವವರು. ನಾವಷ್ಟೇ ಏಕೆ ಮಾಡಬೇಕು? ಅವರಿಗಿಲ್ಲೇನು ದೇವರು?"

"ಅದೆಲ್ಲ ಏನು ಮಾಡುವಿ ಬಿಡು! ಅವರವರ ಭಕ್ತಿ, ಸೇವೆ ಅವರವರ ಸಂಗಡ. ಶ್ರೇಯಾಂಸನ ಸಂಗತಿ ಏನು ಹೇಳು?"

"ನಮ್ಮ ಶ್ರೇಯಾಂಸನಿಗೆ ತೆಕ್ಕೆಗೆ ಕೂತ ಲೆಕ್ಕ ಬರೆಯೂ ಕೆಲಸ ಕೊಡುವರಾದರೆ ಕಳಿಸುವೆ. ಇಲ್ಲದೆ ನೀರು ತಾ; ಹತ್ತಿ ಚೀಲಾ ಸುರುವು; ಮನೆಯೊಳಗಿನ ಕೆಲಸ ಮಾಡು ಅಂದರೆ ನಾನೇನೂ ನೌಕರಿಗೆ ಇಡುವವನಲ್ಲ. ಇಷ್ಟು ಕಲಿತು, ಪುರಾಣ ಪುಸ್ತಕ ಓದಿ, ಗೌಡನ ಜೋಡಿ ಶಾಸ್ತ್ರ ಹೇಳುವಂಥ ಮಗನನ್ನ ಅಲ್ಲದ ಅಲಸಕ್ಕೆ ಹಚ್ಚಿದರೆ ಜನ ಏನೆಂದೀತು? ಹೇಸಿಗೆ ಅಂಜಿ ಉಟ್ಟದ್ದು ಕಳಿಯೋದೈತೇನು?"

ಪತಿಯ ಈ ವಾದಸರಣಿಯು ಪತ್ನಿಯ ಮನಸಿಗೆ ಸಂಪೂರ್ಣ ಒಪ್ಪಿಗೆ ಯಾಗಿದ್ದಿತು. ನಡುನಡುವೆ ಅವಳೂ ಅನ್ನುತ್ತಿದ್ದಳು.

"ಇನ್ನೂ ನನ್ನ ಮನೆಯೊಳಗೆ ನನ್ನ ಮಗ ನೀರು ಹೊತ್ತಿಲ್ಲ. ನನ್ನ ಕೈಕಾಲೊಳಗೆ ಶಕ್ತಿ ಇರುವ ತನಕ ಅವನ ಹೆಗಲ ಮ್ಯಾಲೆ ಕೊಡವನ್ನು ಕೊಡುವವಿಲ್ಲ ನಾನು.... ಹೀಗಿದ್ದಾಗ ಇನ್ನೊಬ್ಬರ ಮನೆ ಯೊಳಗೆ ನೀರು ತರಲಿಕ್ಕೆ ಕಳಸಲಿ ನಾ? ನನ್ನ ಜೀವ ಇರುವ ತನಕ ಇದೇನೂ ಆಗದ ಮಾತು. ನಾವೆಲ್ಲರೂ ಕೂತು ತಿಂದರೂ ನಾವು ಸಾಯುವವರೆಗೆ ಅಂಥಾ ಹೊತ್ತೇನು ಬರಲಿಕ್ಕಿಲ್ಲ....!"

ಮನೆಯವರ ವಿಚಾರಗಳೆಲ್ಲ ಹೀಗಿದ್ದರೂ ಶ್ರೇಯಾಂಸನ ವಿಚಾರ ಬೇರೆಯೇ ಆಗಿತ್ತು. ಎಲ್ಲಿಯಾದರೂ ನಾಲ್ಕು ದುಡ್ಡು ಸಿಗುವ ಕೆಲಸ ವೊಂದು ಸಿಕ್ಕರೆ ಸಾಕಾಗಿತ್ತು. ದತ್ತಮೂರ್ತಿಯು ತನಗೆ ಗೌಡರ ಕಡೆಯಿಂದ ಪುಸ್ತಕಗಳನ್ನು ಕಳಿಸಿಕೊಟ್ಟು, ಕಾಗದ ಬರೆದಿದ್ದರೂ

ಅವನಿಗೆ ಉತ್ತರ ಬರೆಯುವದಾಗಿರಲಿಲ್ಲ. ಶ್ರೇಯಾಂಸ ಅಷ್ಟು ಕೆಲಸದಲ್ಲಿ ಮಗ್ನನಾಗಿದ್ದನೆಂದಲ್ಲ. ಕಾಗದ ಬರೆಯಲಿಕ್ಕೆ ಮೂರು ದುಡ್ಡುಗಳಿರಲಿಲ್ಲ. 'ಹಿರಿಯರ ಹತ್ತಿರ ಕೇಳಬೇಕೆ? ಊಟಕ್ಕೆ ಹಾಕುವೆವು, ಅರಿವೆ ಕೊಂಡುಕೊಡುವೆವು, ನಿನ್ನ ಕೈಯಲ್ಲಿ ದುಡ್ಡು ಏತಕ್ಕೆ ಬೇಕು?' ಎಂದವರ ಪ್ರಶ್ನೆ. ಇನ್ನು ಎಲ್ಲದಕ್ಕೂ ಗುರುಗಳ ಹತ್ತರ ಕೇಳುವದೆಂದರೆ ಮನಸ್ಸು ಒಪ್ಪದು. ಹೀಗಾಗಿ ಶ್ರೇಯಾಂಸ ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಕ್ಕಿದ್ದ. ಗೆಳೆಯ ದತ್ತಮೂರ್ತಿಯ ಕಡೆಗೆ ಒಂದು ದಿನ ನಡೆಯುತ್ತಾದರೂ ಹೋಗಿಬರಲೇ? ಎಂದು ಯೋಚಿಸುತ್ತಿದ್ದ. ಇಪ್ಪತ್ತೆರಡು ಮೈಲು ನಡೆಯುವದೇನು ಅಷ್ಟು ಬಿಗಿಯೆನಿಸಲಿಲ್ಲ ಅವನಿಗೆ. ಆದರೆ ಒಂದೆರಡು ರೂಪಾಯಿ ಗಳಿಸುವುದು ಮಾತ್ರ ಬಿಗಿಯಾಗಿದ್ದಿತು. ಇದೇ ವಿಚಾರಗಳಲ್ಲಿ ದಿನಗಳನ್ನು ನೂಕುತ್ತಿರುವಾಗ ಒಂದು ದಿನ ಮುಂಜಾನೆ ಸಾವುಕಾರರ ಮನೆಯಿಂದ ಶ್ರೇಯಾಂಸನಿಗೆ ಕರೆಬಂದಿತು. ಶ್ರೇಯಾಂಸ ಕಾರಣವನ್ನು ಕೇಳುವ ಮೊದಲೇ ಬಾಳಪ್ಪ ಮುಂದಾಗಿ ಕೇಳಿದ.

"ಸಾವುಕಾರ ಯಾಕೆ ಕರೆಯಿಸಿದ್ದಾರೆ?"

"ನನಗೇನೂ ಗೊತ್ತಿಲ್ಲರಿ!" ಸಾವುಕಾರರ ಆಳು ಹೇಳಿದ.

"ವಕೀಲರು ಬಂದಾರೇನೋ ಊರಿಂದ?" ಶ್ರೇಯಾಂಸ ಉತ್ಸುಕತೆಯಿಂದ–ನಡುವೆ ಪ್ರಶ್ನೆಹಾಕಿದ.

"ಅಹುದು; ನಿನ್ನೇ ಬಂದಾರೆ...."

"ಅವರೇ ಕರೆಯಿಸಿರಬೇಕು...."

ಶ್ರೇಯಾಂಸ ತಂದೆಗೆ ಹೇಳಿದ. ವಕೀಲರು ತನ್ನ ಮಗನನ್ನು ಯಾಕೆ ಕರೆಯಿಸಿರಬೇಕೆಂಬುದು ಬಾಳಪ್ಪನಿಗೆ ಹೊಳೆಯದಾಯಿತು. ದೊಡ್ಡವರಲ್ಲಿ ಮಗನು ಹೋಗಿ ಬರುವ ಸಂದರ್ಭ ಬರುತ್ತಿದ್ದುದನ್ನು ಕಂಡು ಸ್ವಲ್ಪ ಸಂತಸವೂ ಆಗಿತ್ತು. ಶ್ರೇಯಾಂಸ ದಿನಾಲು ಗೌಡರ ಮನೆಗೆ ಹೋಗಿ ಬರುತ್ತಿದ್ದ. ಓಲೇಕಾರರೂ ಶ್ರೇಯಾಂಸನ ಮಾತನ್ನು

ಓಲೈಸುತ್ತಿದ್ದರು. ಊರೊಳಗಿನ ಲೋಕಲ್ ಬೋರ್ಡಿನ ಮೆಂಬರರೂ ತನ್ನ ಮಗನ ವಿಷಯವನ್ನು ಒಂದೆರಡು ಸಲ ಪ್ರೀತಿಯಿಂದ ಕೇಳಿದ್ದರು. ಈಗ ವಕೀಲರು ಕರೆಯಲಿಕ್ಕೆ ಕಳಿಸಿದ್ದಾರೆ. ಹೀಗೆ ಊರೊಳಗಿನ ಮುಖಂಡರ ಸಂಬಂಧವೆಲ್ಲ ಒಂದಿಲ್ಲೊಂದು ರೀತಿಯಿಂದ ಶ್ರೇಯಾಂಸನಿಗೆ ಇತ್ತು. ಮೇಲೆ ಮಹಾವೀರ ಕೀರ್ತಿ ಮುನಿಗಳು ಬೇರೆ 'ಅದು ಭವ್ಯ ಜೀವ!' ಎಂದು ಆದರದಿಂದ ಹೇಳಿದ್ದರು. ಇದನ್ನು ಸ್ವತಃ ಬಾಳಪ್ಪ ಕಿವಿಯಿಂದ ಕೇಳಿದ್ದ. ಅದರಿಂದ ಈಗೀಗ ಮಗನ ವಿಷಯಕ್ಕೆ ಸ್ವಲ್ಪ ಸಹಾನುಭೂತಿ ಅವನ ಮನಸ್ಸಿನಲ್ಲಿ ಉಂಟಾಗಿತ್ತು. ಆದರಿಂದಲೇ ಪ್ರೀತಿಯಿಂದ ಬಾಳಪ್ಪ ಮಗನಿಗೆ ಕೇಳಿದ;

"ವಕೀಲರು ಏನು ಕೆಲಸ ತೆಗೆದರೋ ನಿನ್ನ ಕಡೆಗೆ?"

ಸ್ವಲ್ಪ ಉಲ್ಲಾಸದಲ್ಲಿಯೂ ಇತ್ತು ಮಾತು.

"ಏನಾದರೂ ಪುಸ್ತಕ ತಂದಿರಬೇಕು...."

ಶ್ರೇಯಾಂಸನ ಈ ಮಾತು ಕೇಳಿ ಬಾಳಪ್ಪನ ಮುಖ ಗಂಭೀರ ವಾಯಿತು ಹಣೆಯ ಮೇಲೆ ಗಂಟುಗಳು ಕಂಡವು. ಇವರೆಲ್ಲರೂ ಕೂಡಿ ತನ್ನ ಮಗನನ್ನೇ ಕೆಡಿಸುವ ಯೋಚನೆ ನಡೆಯಿಸಿರುವಂತೆ ಅವನಿಗೆ ಭಾಸವಾಯಿತು. ಈ ಪುಸ್ತಕಗಳ ಹುಚ್ಚೇ ತನ್ನ ಮಗನನ್ನು ಹಾಳುಮಾಡಿತೆಂದು ಆತ ಪೂರ್ಣ ನಂಬಿದ್ದ. ಅದರಿಂದ,

"ಇನ್ನೂ ಎಷ್ಟುದಿನ ಹೀಗೇ ಪುಸ್ತಕ ಓದುತ್ತ ಹೋಗುವುದಪ್ಪಾ?"

ಎಂದು ಕೇಳಿದ ಬಾಳಪ್ಪ. ಸಿಟ್ಟು ಅಸಹನೆಗಳು ಆ ಧ್ವನಿಯಲ್ಲಿ ಒಡಮೂಡುತ್ತಿದ್ದುವು. ಆದರೆ ಅದು ಶ್ರೇಯಾಂಸನ ಗಮನಕ್ಕೆ ಬರಲಿಲ್ಲ. ಅವನು,

"ಹಾಗೇ ಓದುತ್ತಲೇ ಇರುವುದು...." ಎಂದ.

"ಹೊಟ್ಟೆಯ ಉದ್ಯೋಗ?"

"ಅದನ್ನೂ ಮಾಡುವುದು!"

"ಮೊದಲು ಅದನ್ನ ಮಾಡನ್ನು ವಕೀಲರಿಗೆ. ಆಮೇಲೆ ಪುಸ್ತಕ

ಕೊಡು ಅನ್ನು. ಅವರಿಗೇನು ಬೇಕಾದ ಹಾಗೆ ದುಡ್ಡು ಸಿಗತದ ಉಳಿದ ವೇಳೆಯೊಳಗೆ ಓದತಿರತಾರ. ಹುಚ್ಚರ ಹಾಗೆ ಅವರದು ನೋಡಿ, ನೀನೂ ಕೈಯೊಳಗೆ ಪುಸ್ತಕ ಹಿಡಿದು ತಿರುಗುವಿ. ಬಿಳಿ ಜನರನ್ನ ನೋಡಿ ನಮ್ಮ ಜನರೂ ಚಹ ಕುಡಿಯುವಂತೆ."

ಬಾಳಪ್ಪನ ಮಾತು ಇನ್ನೂ ಎಷ್ಟು ಹೊತ್ತು ಸಾಗುತ್ತಿದ್ದಿತೋ ! ಆದರೆ ಶ್ರೇಯಾಂಸ ಅಲ್ಲಿಂದ ಕಾಲ್ದೆಗೆದುದಕ್ಕೆ ಅದು ನಿಲ್ಲಬೇಕಾಯಿತು.

ಶ್ರೇಯಾಂಸ ವಕೀಲರನ್ನು ಕಂಡಾಗ ಅವರು ಇದೀಗ ಚಹ ಕುಡಿದು ಅಟ್ಟವನ್ನು ಏರಿದ್ದರು. ಅವರನ್ನು ಏನೋ ಒಂದು ಸಲಹೆ ಕೇಳಲಿಕ್ಕೆ ಅವರ ರೈತನೊಬ್ಬ ಬಂದಿದ್ದ. ಅವನಿಗೆ ಶಾಂತರೀತಿಯಿಂದ ತಿಳಿಸಿ ಹೇಳುತ್ತ ಕುಳಿತಿದ್ದರು. ಶ್ರೇಯಾಂಸ ಅವರ ತಂದೆಯವರನ್ನು ಕೇಳಿ, ಅಟ್ಟಕ್ಕೆ ಏರಿದ. ಕೈಯಲ್ಲಿ ಎರಡು ಮೂರು ಪುಸ್ತಕಗಳೂ ಇದ್ದುವು.

ಶ್ರೇಯಾಂಸನು ವಕೀಲರಿಗೆ ಅಷ್ಟು ನಿಕಟ ಪರಿಚಯದ ಹುಡುಗ ನಲ್ಲ. ಆದರೂ ಕನ್ನಡ ಓದುವದೆಂದರೆ ವಕೀಲರಿಗೆ ತುಂಬ ಪ್ರೀತಿ, ಅಭಿಮಾನ. ಇಂಥ ತರುಣರಲ್ಲಿ ಕನ್ನಡದ ಬಗ್ಗೆ ಪ್ರೇಮವನ್ನು ಹುಟ್ಟಿಸಲಿಕ್ಕೆ ಅವರು ಯಾವಾಗಲೂ ಸಿದ್ಧರು. ಕನ್ನಡವನ್ನು ತುಂಬ ಓದಿಕೊಂಡವರು. ದಾಸ ಸಾಹಿತ್ಯವನ್ನು ಚೆನ್ನಾಗಿ ಅಭ್ಯಾಸಮಾಡಿ, ಒಂದು ಪ್ರಬಂಧವನ್ನೂ ಬರೆದಿದ್ದರು. ಮನೆತನದಿಂದ ಬಹು ಸಿರಿವಂತ ರಾದುದರಿಂದ ನ್ಯಾಯಪಕ್ಷಪಾತಿಗಳಾಗಿ ವಕಾಲತ್ತು ನಡೆಯಿಸು ತ್ತಿದ್ದರು. ನಗರವಲ್ಲಿ ಮನೆಮಾಡಿಕೊಂಡಿದ್ದರೂ ತಮ್ಮ ಹಳ್ಳಿಗೆ ಪ್ರತಿ ರವಿವಾರ ಬಂದು ರೈತರಿಗೆ ಕಾಯದೆಯ ಸಲಹೆ ಸಹಕಾರಗಳನ್ನು ನೀಡುತ್ತಿದ್ದರು. ಇಂಥವರು ಶ್ರೇಯಾಂಸನನ್ನು ಕಂಡೊಡನೆಯೇ ಎದ್ದು ಬಂದು ಕೈಹಿಡಿದು ಕರೆದುಕೊಂಡು ಹೋಗಿ ಜಾಜಮುದ ಮೇಲೆ ಹತ್ತಿರ ಕುಳ್ಳಿರಿಸಿಕೊಂಡರು. ಅವರ ಕೂಡ ಮಾತನಾಡುತ್ತಿರುವ ರೈತ ಶ್ರೇಯಾಂಸನ ಕಡೆಗೊಮ್ಮೆ ವಕೀಲರ ಕಡೆಗೊಮ್ಮೆ ಬೆರಗಿನಿಂದ

ನೋಡಿದ.

"ಸ್ವಲ್ಪ ಇವರ ಕೂಡ ಮಾತನಾಡುವೆ. ಆಮೇಲೆ ನೀವು ಬರೆದುದನ್ನು ನೋಡೋಣ...."

ಎಂದು ವಕೀಲರು ಶ್ರೇಯಾಂಸನಿಗೆ ಹೇಳಿದರು. ಮತ್ತೆ

"ನಿಮಗೆ ಸ್ವಲ್ಪ ಅವಕಾಶವಿದೆಯಲ್ಲವೇ ?"

ಎಂದೂ ವಿನಯದಿಂದ ಕೇಳಿದರು.

"ಹೋ ! ಬೇಕಾದಷ್ಟು. ನಿಮ್ಮ ಮಾತಿನಲ್ಲಿ ನಾನು ವ್ಯತ್ಯಯ ತಂದೆನೇನೋ !" ಎಂದ ಶ್ರೇಯಾಂಸ.

"ಅದೇನಿಲ್ಲ...."

ಎಂದು ವಕೀಲರು ಆ ರೈತನೊಡನೆ ಮಾತಿಗೆ ಆರಂಭಿಸಿದರು. ವಕೀಲರ ನಯ ವಿನಯಗಳು ಶ್ರೇಯಾಂಸನ ಮನಸ್ಸಿನ ಮೇಲೆ ತುಂಬ ಪರಿಣಾಮವನ್ನು ಮಾಡಿದುವು. ಅವರ ವಿಶಾಲ ಅಟ್ಟವನ್ನು ನೋಡುತ್ತ ಭ್ರಾಂತನಾಗಿ ಕುಳಿತ. ನೀರಡಿಸಿದ ಪಥಿಕನಿಗೆ ದಾರಿಯಲ್ಲಿ ಅಕಸ್ಮಾತ್ ಉಸುಬಿನ ಬಯಲಿನಲ್ಲಿ ಸೀನೀರಿನ ಸೆಲೆಯೊಂದು ಸಿಕ್ಕಂತಾಗಿತ್ತು.

ತುಸು ಹೊತ್ತಿನಲ್ಲಿ ಆ ರೈತನ ಕೂಡ ಮಾತು ಮುಗಿಸಿ ವಕೀಲರು ಕಳಿಸಿದರು. ಹಾಗೆಯೇ ಅವನನ್ನು ಕೆಳಗೆ ಪಡಸಾಲೆಯ ವರೆಗೆ ಕಳಿಸುತ್ತ

"ಈಗ ಬಂದೆ ಶ್ರೇಯಾಂಸ"

ಎಂದು ಹೇಳಿ ಹೋದವರು ಎರಡು ಚಹದ ಕಪ್ಪುಗಳನ್ನು ಕೈಯ್ಯಲ್ಲಿ ಹಿಡಿದುಕೊಂಡೇ ಅಟ್ಟವನ್ನು ಪ್ರವೇಶಿಸಿದರು. ಶ್ರೇಯಾಂಸನಿಗೆ ಒಂದು ಕಪ್ಪು ಕೊಟ್ಟು ತಾವೊಂದು ಬಾಯಿಗೆ ಹಚ್ಚಿದರು. ಇಬ್ಬರೂ ಚಹವನ್ನು ಕುಡಿದು, ಹಾಯಾಗಿ ಕುಳಿತು ಮಾತಿಗೆ ಆರಂಭಿಸಿದರು.

"ನಾಳಿನ ಜೂನಕ್ಕೆ ಬರುವಿರಲ್ಲ ಹಾಯ್‌ಸ್ಕೂಲಿಗೆ?"

"ಮನೆಯವರು ಕಳಿಸಿಕೊಡುವಂತೆ ತೋರುವದಿಲ್ಲ!"

"ದತ್ತಮೂರ್ತಿ ಹೇಳುತ್ತಿದ್ದನಲ್ಲ ನೀವು ಬರುವಿರೆಂದು !"

"ನನ್ನ ವಿಚಾರವಿತ್ತು. ಆದರೆ ಅದಕ್ಕೆ ಹಿರಿಯರ ಒಪ್ಪಿಗೆ ಇಲ್ಲ...."

"ಏಕೆ, ದುಡ್ಡಿನ ತೊಂದರೆಯೋ?"

"ಅದೇನಿಲ್ಲ, ಅವರಿಗೆ ಕಲಿಸುವ ಇಚ್ಛೆಯೇ ಇಲ್ಲ...."

"ಯಾರ ಕಡೆಯಿಂದಾದರೂ ಹೇಳಿಸಿ ನೋಡಿದಿರಾ?"

"ಅದೆಲ್ಲ ಆಗಿದೆ!"

"ನಾನೊಮ್ಮೆ ಹೇಳಿ ನೋಡಲೇ?"

"ಉಪಯೋಗವಾಗುವಂತೆ ಕಾಣದು...."

"ನೀವು ಆ ಆಶೆಯನ್ನೇ ಬಿಟ್ಟುಬಿಟ್ಟಿರಾ?"

"ಬಿಡಬೇಕಾಯಿತು. ಮಾಸ್ತರರಿಂದ ಹೇಳಿಸಿದೆ, ಗೌಡರಿಂದೂ ಹೇಳಿಸಿದೆ. ಮತ್ತೂ ನಾಲ್ಕಾರು ಜನರಾದರು. ಯಶ ಸಿಕ್ಕಲಿಲ್ಲ. ನಾನೇ ಸತ್ಯಾಗ್ರಹ ಹೂಡಿದೆ. ಫಲ ಸಿಕ್ಕಲಿಲ್ಲ...."

ಶ್ರೇಯಾಂಸನನ್ನೊಮ್ಮೆ ನಿಟ್ಟಿಸಿದರು ವಕೀಲರು. ಅವರ ಮುಖದಿಂದ ಬಿಸಿಯುಸಿರೊಂದು ಹೊರಟುಹೋಯಿತು. ಸ್ವಲ್ಪ ನಿಧಾನವಾಗಿ,

"ಆಯಿತು ದೈವ" ಎಂದರು.

ಯಾಕೋ ಈ ಮಾತು ಶ್ರೇಯಾಂಸನಿಗೆ ಸೇರಲಿಲ್ಲ. ಮನೆಯಿಂದ ಹೊರಟು ಬರಲಿಕ್ಕೆ ವಕೀಲರು ಬೋಧಿಸಬಹುದೆಂದು ಆತ ಇಷ್ಟರಲ್ಲಿಯೇ ತರ್ಕಿಸಿದ್ದ. ಯಾರಾದರೂ ಒಬ್ಬರು ಹಾಗೆ ಸಲಹೆ ಕೊಡುವವರು ಸಿಕ್ಕಿದ್ದರೆ ಹಾಗೆ ಮಾಡಲಿಕ್ಕೂ ಅವನ ಮನಸ್ಸು ತವಕಗೊಂಡಿತ್ತು. ಆದರೆ ವಕೀಲರಿಂದಲೂ ಅಂಥ ಸಲಹೆ ಸಿಕ್ಕಲಿಲ್ಲ. ಅದರಿಂದ ನಿರಾಶನಾದ. ಅದರಲ್ಲಿಯೇ ತಿರುಗಿ ತನ್ನ ಮನಸ್ಸಿಗೆ ಕೇಳಿಕೊಂಡ.

'ನಾನು ವಕೀಲರ ಕಡೆಗೆ ಏತಕ್ಕೆ ಬಂದಿದ್ದೆ?

ದತ್ತಮೂರ್ತಿಯ ಪುಸ್ತಕಗಳನ್ನು ಕೊಡಲಿಕ್ಕೆ....

ಆಮೇಲೆ ಅಸಮಾಧಾನವೇಕೆ?

ನನ್ನ ಶಿಕ್ಷಣದ ವಿಚಾರ ಇವರೇಕೆ ಎತ್ತಬೇಕು?

ಎತ್ತಿದರೇನಾಯಿತು ?

ಕೇಳಿದಂತೆ ಕೊನೆ ಮುಟ್ಟಿಸಬೇಕು. ಇಲ್ಲದಿದ್ದರೆ ಕೇಳಲೇ ಬಾರದು....

ಇದೆಲ್ಲಿಯ ನ್ಯಾಯ ?'

"ನೋಡೋಣ, ಏನು ಬರೆದಿರುವಿರಿ ?"

ವಕೀಲರ ಮಾತು ಶ್ರೇಯಾಂಸನನ್ನು ಹೊರಗಿನ ಲೋಕಕ್ಕೆ ಎಳೆಯಿತು. ಆದರೂ ಮನದ ಉದ್ವೇಗವನ್ನು ತಡೆದುಕೊಂಡು ಮಾತನಾಡಬೇಕಾದರೆ ತುಸು ಹೊತ್ತು ಉರುಳಿತು.

"ಒಂದು ನಾಟಕವನ್ನು ಬರೆಯಲು ಯತ್ನಿಸಿರುವೆ"

"ಕೆಲವು ಭಾಗ ಓದಿರಿ ನೋಡೋಣ...."

ಶ್ರೇಯಾಂಸ ಓದಲಿಕ್ಕೆ ಆರಂಭಿಸಿದ. ಓದು ಸರಾಗವಾಗಿ ಸಾಗಿತು. ಸ್ವಲ್ಪ ಭಾಗ ಓದಿಸಿ ಕೇಳಬೇಕೆಂದಿದ್ದ ವಕೀಲರೂ ನಾಟಕ ದಲ್ಲಿ ತನ್ಮಯರಾಗಿಬಿಟ್ಟರು. ಎರಡು ತಾಸುಗಳು ಹೇಗೆ ಕಳೆದುವೆಂಬುದು ಅವರಿಗೆ ತಿಳಿಯದೆ ಹೋಯಿತು. ವಿದ್ಯಾರಣ್ಯ, ಹುಕ್ಕ, ಬುಕ್ಕ ಮೊದಲಾದ ಪಾತ್ರಗಳನ್ನು ಒಗೆಗಣ್ಣಿನೆದುರಿಗೆ ತಂದು ನಿಲ್ಲಿಸಿದಂತೆ ಆಯಿತು. ಒಂದು ಐತಿಹಾಸಿಕ ಚಿತ್ರಪಟವನ್ನು ಕಾಣುತ್ತಿದ್ದಂತೆ ಅವರಿಗೆ ಭಾಸವಾಯಿತು ನಾಟಕ ಮುಗಿದೊಡನೆಯೆ ಇಬ್ಬರೂ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ವಕೀಲರು ಎಲ್ಲಿಯೋ ದೃಷ್ಟಿಯನ್ನು ನೆಟ್ಟು ಕುಳಿತಿದ್ದರು. ಶ್ರೇಯಾಂಸ ಇನ್ನೂ ಭಾವಾವೇಶದಲ್ಲಿದ್ದ.

ತುಸು ಹೊತ್ತಿನಲ್ಲಿ ಕೆಳಗಿನ ಪಡಸಾಲೆಯೊಳಗಿನ ಗಡಿಯಾರದಲ್ಲಿ ಹನ್ನೆರಡು ಹೊಡೆಯಿತು. ಅದು ಅವರು ಭಾವಸಮಾಧಿಯಿಂದ ಹೊರಗೆ ಬರಲಿಕ್ಕೆ ಎಚ್ಚರಿಕೆಯ ಗಂಟೆಯಾಗಿ ಪರಿಣಮಿಸಿತು. ವಕೀಲರು ಸಾವಕಾಶವಾಗಿ ನುಡಿದರು :

"ಚೆನ್ನಾಗಿದೆ ನಾಟಕ....!"

"ಇದನ್ನು ಮೊದಲು ದತ್ತಮೂರ್ತಿ ಬರೆಯಲು ತಕ್ಕೊಂಡಿದ್ದ.

ಅದನ್ನು ನಾನು ತಕ್ಕೊಂಡು ಮುಗಿಸಿದೆ...."

"ಅವನು ಎಷ್ಟು ಬರೆದಿದ್ದ ?"

"ಒಂದೆರಡು ಪ್ರವೇಶ ಬರೆದಿದ್ದ. ಆದರೆ ಅದನ್ನೂ ನಾನು ಮಾರ್ಪಡಿಸಿಕೊಂಡು ಆರಂಭದಿಂದಲೇ ಬರೆದುಬಿಟ್ಟೆ...."

"ಒಳ್ಳೆಯದಾಯಿತು ?"

"ತಮ್ಮ ಸ್ಪಷ್ಟವಾದ ಅಭಿಪ್ರಾಯ ನನಗೆ ಬೇಕು...."

"ಅದನ್ನೇ ಹೇಳುವೆ ತಡೆಯಿರಿ !"

ಎಂದು ವಕೀಲರು ತುಸು ಹೊತ್ತು ಸುಮ್ಮನೆ ಕುಳಿತು ವಿಚಾರಿಸಿದರು. ಮೂಗಿನ ತುದಿಯ ಮೇಲೆ ದೃಷ್ಟಿಯನ್ನಿಟ್ಟು ಧ್ಯಾನಸ್ಥರಾದರು. ಹಣೆಯ ಮೇಲೆ ಕೈಯಾಡಿಸಿಕೊಂಡು ಏನನ್ನೋ ನೆನಿಸಿಕೊಳ್ಳುವಂತೆ ತೋರಿತು. ಕೈಬೆರಳಿನ ಒಂದು ಭಾಗವನ್ನು ತಮ್ಮ ತುಟಿಗಳ ಮಧ್ಯದಲ್ಲಿಟ್ಟು ಅದುಮಿದರು. ಕೊನೆಗೆ ಏನೂ ಬಗೆಹರಿಯದಂತಾಯಿತು ಶ್ರೇಯಾಂಸನ ಕಡೆಗೆ ಹೊರಳಿ,

"ನಿಮ್ಮ ವಿದ್ಯಾರಣ್ಯರನ್ನು ಇದೇ ಊರಲ್ಲಿ ಎಲ್ಲಿಯೋ ನೋಡಿದಂತಾಗಿದೆ........ರೂಪು ಕಣ್ಣೆದುರಿಗೆ ಸುಳಿಯುತ್ತಿದೆ. ಹೆಸರು ಗೊತ್ತಾಗದು...."

"ನನ್ನ ನಾಟಕದೊಳಗಿನ ವಿದ್ಯಾರಣ್ಯ !"

"ಹೋ ! ನಿಮ್ಮ ನಾಟಕದೊಳಗಿನ ವಿದ್ಯಾರಣ್ಯರೇ. ಗಿಡ್ಡ ಆಳು, ದುಂಡು ಮೈ, ಸ್ವಲ್ಪ ಉದ್ದ ಮುಖ, ತಲೆಯಲ್ಲಿ ಉದ್ದ ಚಂಡಿಕೆ, ಹೆಚ್ಚಾಗಿ ಮೈಮೇಲೆ ಅಂಗಿ ಇರುವದಿಲ್ಲ. ಧೋತರ ಹೊತ್ತುಕೊಂಡಿರುತ್ತಾರೆ. ಹಣೆಯ ಮೇಲೆ ಶ್ರೀಗಂಧದ ಬೊಟ್ಟು....ಸ್ಟೇಶನ್ ದಾರಿಯಲ್ಲಿ ಮುಂಜಾನೆ ಹೋಗತಿರತಾರೆ...."

"ಅವರೆ ?....ನಮ್ಮ ಪದ್ಮಪ್ಪ ಮಾಮಾ....!"

"ಹೋ ! ಅವರೇ ಇರಬೇಕು. ಆಶ್ರಮದ ಕಡೆಗೆ ಹೋಗತಿರತಾರೆ, ಸ್ವಾಮಿಗಳ ಸಂಗಡ ಇರತಾರೆ...."

"ಅಹುದು!"

ಶ್ರೇಯಾಂಸನ ಈ ಮೂರಕ್ಷರಗಳಲ್ಲಿ ಮೂರು ಲೋಕದೊಳಗಿನ ಆಶ್ಚರ್ಯವೆಲ್ಲ ಒತ್ತಟ್ಟಿಗೆ ಸೇರಿದಂತಿತ್ತು. ನಾಟಕ ಬರೆಯುವಾಗಿನ ಇರುಳೆಲ್ಲ ತನ್ನ ಕಣ್ಣೆದುರಿಗೆ ಪದ್ಮಪ್ಪ ಸುಳಿಯುತ್ತಿದ್ದುದರ ಅರಿವು ಈಗ ಅವನಿಗೂ ಆಯಿತು. ಆ ಅವ್ಯಕ್ತಭಾವದ ರೂಪನ್ನು ಇವರು ಕಂಡರಲ್ಲ! ಇದರಲ್ಲೇನು ಚಮತ್ಕಾರ ಎಂದು ತನ್ನನ್ನು ತಾನೇ ಕೇಳಿಕೊಂಡ. ಮನದಲ್ಲಿಯೇ ವಕೀಲರಿಗೆ ಕೃತಜ್ಞತೆಯನ್ನು ಅರ್ಪಿಸಿದ. ಹೃದಯದೊಳಗಿನ ಭಾವವನ್ನು ಆಡಿ ತೋರಿಸಲಿಕ್ಕೆ ಮಾತು ಸಮರ್ಥವಾಗಲಿಲ್ಲ.... ಸುಮ್ಮನೆ ಕುಳಿತ.

ಬಹಳ ಹೊತ್ತಿನ ಮೇಲೆ

"ನಾನು ಹೋಗಿ ಬರಲೆ?" ಎಂದ.

"ಇಲ್ಲಿಯೇ ಊಟಮಾಡಿಕೊಂಡು ಹೋಗಬಹುದಲ್ಲ!"

"ಬೇಡ, ಮನೆಗೇ ಹೋಗುವೆ. ಈಗ ಉಣ್ಣಿಸಿದ ಊಟವೇ ಹೆಚ್ಚಾಗಿದೆ...."

"ನೀವು ಉಣ್ಣಿಸಿದ್ದೇ?"

ನಗೆಯಲ್ಲಿ ಮಾತು ತಿರುವಿದರು ವಕೀಲರು.

ಶ್ರೇಯಾಂಸ ಸುಮ್ಮನಾದ.

ಎದ್ದು ಬರುವಾಗ ಶ್ರೇಯಾಂಸನ ಕೈಗೆ ವಕೀಲರು ಆನಂದ ಕಂದರ 'ರಾಜಯೋಗಿ', ಮುಗಳಿಯವರ 'ಬಾಳುರಿ', ವಿನಾಯಕರ 'ಇಜ್ಜೋಡು', ಶರತ್‌ಚಂದ್ರರ 'ದೇವದಾಸ', ದೇವುಡು ಅವರ 'ಅಂತರಂಗ'ಗಳನ್ನು ಕೊಟ್ಟರು. ಅವುಗಳನ್ನು ಭಕ್ತಿಯಿಂದ ಸ್ವೀಕರಿಸಿದ ಶ್ರೇಯಾಂಸ....

ಅಟ್ಟದ ಮೆಟ್ಟಲುಗಳನ್ನು ಕೆಳಗೆ ಇಳಿಯುತ್ತ ಬರುವಾಗ ವಕೀಲರು,

"ನಿಮ್ಮ ನಾಟಕ ಪ್ರಕಟವಾಗಬೇಕು. ಆದರೆ ನಮ್ಮಲ್ಲಿಯ

ಪ್ರಕಾಶಕರು ಅಪರಿಚಿತರ ಪುಸ್ತಕಗಳನ್ನು ಪ್ರಕಟಿಸುವಷ್ಟು ಸುಧಾರಿಸಿದವರಲ್ಲ...." ಎಂದು ನಿರಾಶೆಯಿಂದಲೇ ನುಡಿದರು.

ವಕೀಲರ ಮಾತಿನ ಅರ್ಥ ಶ್ರೇಯಾಂಸನಿಗೆ ಕೂಡಲೆ ಹೊಳೆಯಲಿಲ್ಲ !

"ಇನ್ನಾವಾಗ ಪುನಃ ಭೆಟ್ಟಿ ?" ವಕೀಲರೇ ಕೇಳಿದರು.

"ಮುಂದಿನ ರವಿವಾರ ಬರುವಿರಲ್ಲ ?"

"ಇನ್ನೂ ನಿಶ್ಚಯವಾಗಿಲ್ಲ. ಬಂದರೆ ತಿಳಿಸುವೆ. ನಡುವೆ ನಿಮಗೆ ಮತ್ತೆ ಬೇರೆ ಪುಸ್ತಕ ಬೇಕಿದ್ದರೆ ಬರೆಯಿರಿ. ಕಳಿಸಿಕೊಡುವೆ...."

"ಹೂಂ !"

ವಕೀಲರು ತಲೆಬಾಗಿಲಲ್ಲಿ ನಿಂತು ಶ್ರೇಯಾಂಸನನ್ನು ಬೀಳ್ಕೊಟ್ಟರು.

"ಹೋಗಿ ಬರುವೆ ನಮಸ್ಕಾರ !" ಕೃತಜ್ಞತೆಯಿಂದ ವಂದಿಸಿ ಶ್ರೇಯಾಂಸ ಸಾಗಿದ. ಸ್ವಲ್ಪ ದೂರ ಹೋಗಿ ಹೊರಳಿ ನೋಡಿದ. ವಕೀಲರು ಇನ್ನೂ ಬಾಗಿಲಲ್ಲಿಯೇ ನಿಂತಿದ್ದರು.

ನನ್ನ ಪುಸ್ತಕ ಪ್ರಕಟವಾಗುವುದೆ ?

ಹೀಗೆ ಬರೆದದ್ದನ್ನೆಲ್ಲ ಮುದ್ರಿಸುವರೆ ?

ಅದರಲ್ಲೂ ನನ್ನಂಥವನು ಬರೆದದ್ದನ್ನು! ಜನರಿಗೆ ಓದಲಿಕ್ಕೆ!

ಆನಂದಕಂದ, ವಿನಾಯಕ, ಶರಚ್ಚಂದ್ರರಂತೆಯೇ ನಾನೂ ಬರೆಯುತ್ತಿದ್ದೇನೆಯೇ ?

ಅವರೆಲ್ಲಿ ? ನಾನೆಲ್ಲಿ ?

ಏನೋ ಒಂದು ಹೊಸ ಲೋಕವೇ ಇಂದು ಶ್ರೇಯಾಂಸನ ಎದುರಿಗೆ ತೆರೆದಂತಾಗಿತ್ತು.

ದಾರಿಯ ಕೂಟದಲ್ಲಿ ಹೊರಳುವಾಗ ಮತ್ತೊಮ್ಮೆ ಹಿಂದಿರುಗಿ ನೋಡಿದ ಶ್ರೇಯಾಂಸ.

ವಕೀಲರು ಬಾಗಿಲಲ್ಲಿಯೇ ನಿಂತಿದ್ದರು.

೧೬

ಈ ವರ್ಷದ ವರ್ಷಾಯೋಗದಲ್ಲಿ 'ಭರತೇಶ ವೈಭವ'ವನ್ನು ಬಸದಿಯಲ್ಲಿ ಓದುವದೆಂದು ಊರ ಪ್ರಮುಖರಲ್ಲಿ ನಿರ್ಣಯವಾಗಿತ್ತು. ಅದನ್ನು ಓದಿ ಹೇಳುವ ಹೊಣೆಯು ಶ್ರೇಯಾಂಸನ ಮೇಲೆಯೇ ಇತ್ತು. ಇತ್ತೀಚಿಗೆ ಅವನು ಪುರಾಣ ಹೇಳುವ ರೀತಿಯನ್ನು ಬಹುಜನ ಶ್ರಾವಕರು ಮೆಚ್ಚಿಕೊಂಡಿದ್ದರು. ಅದರಿಂದ ಪುರಾಣ ಕೇಳುವದಕ್ಕೆ ಹೆಂಗಸರೂ ಗಂಡಸರೂ ಎಲ್ಲರೂ ಬಸದಿಯಲ್ಲಿ ನೆರೆಯುತ್ತಿದ್ದರು. ಶ್ರಾವಣಮಾಸದಲ್ಲಿ ಊರೊಳಗಿನ ಬಸವೇಶ್ವರ ದೇವಾಲಯದಲ್ಲಿ ಅಯ್ಯನವರು 'ಚೆನ್ನಬಸವ ಪುರಾಣ'ವನ್ನು ಆರಂಭಿಸುತ್ತಿದ್ದರು. ಆದರೆ ಎಷ್ಟೋ ಜನ ವೀರಶೈವರು ಅದನ್ನು ಬಿಟ್ಟು 'ಭರತೇಶ ವೈಭವ'ವನ್ನು ಕೇಳಲಿಕ್ಕೆ ಬಸದಿಗೆ ಬರುತ್ತಿದ್ದರು. ಅಷ್ಟು ಶ್ರೇಯಾಂಸನ ವಾಕ್ ಪ್ರವಾಹವು ಶ್ರೋತ್ರ ಸಮುದಾಯವನ್ನು ಆನಂದಸಾಗರಕ್ಕೆ ತೇಲಿಸಿಕೊಂಡು ಹೋಗುತ್ತಿದ್ದಿತು. ಪುರಾಣದ ಜೊತೆಗೆ ಶ್ರೇಯಾಂಸನು ಇಂದಿನ ಸಾಮಾಜಿಕ ರಾಜಕೀಯ ವಿಷಯಗಳನ್ನೂ ಬೆರಸಿ, ಮನೋಹರವಾಗುವಂತೆ. ಬುದ್ಧಿಗೆ ಅನ್ನ ದೊರಕುವಂತೆ ಅಡೆ ತಡೆಗಳಿಲ್ಲದೆ ವಿವರಿಸುತ್ತಿದ್ದನು. ಕೇಳುವವರು ನಡುನಡುವೆ ನಗುವನ್ನು ಬೀರುತ್ತಿದ್ದರು, ವಿಚಾರಕ್ಕೆ ಒಳಗಾಗುತ್ತಿದ್ದರು. ಈ ರೀತಿ ಬಸದಿಯೊಳಗಿನ ಪುರಾಣವೊಂದು ಸಾರ್ವಜನಿಕರಿಗೆ ಪ್ರಿಯವಾದ ಕಾರ್ಯಕ್ರಮವಾಗಿತ್ತು. ಅದರಂತೆ ಅದು ಶ್ರೇಯಾಂಸನಿಗೆ ಒಂದಿಷ್ಟು ಸಮಾಜದಲ್ಲಿ ಗೌರವದ ಸ್ಥಾನವನ್ನು ಕಲ್ಪಿಸಿಕೊಟ್ಟದ್ದಿತು.

ಜಿನಗೌಡರು ಈಗೀಗ ದಿನಾಲು ಪುರಾಣಕ್ಕೆ ಬರುತ್ತಿರಲಿಲ್ಲ.

ಆದರೂ ಬಂದಾಗಲೆಲ್ಲ ಶ್ರಾವಕರ ಸಮುದಾಯದಲ್ಲಿಯೇ ಕುಳಿತು ಕೊಳ್ಳಬೇಕಾಗುತ್ತಿದ್ದಿತು. ಗೌಡರು–ಊರ ಪ್ರಮುಖರು. ಆದುದರಿಂದ ಅವರಲ್ಲಿ ಸ್ವಲ್ಪ ಹಿರಿಯ ಸ್ಥಾನವಿರುತ್ತಿದ್ದಿತು. ಪುರಾಣಿಕನಾದ ಶ್ರೇಯಾಂಸನ ಮಗ್ಗುಲಲ್ಲಿಯೇ ಕುಳ್ಳಿರುತ್ತಿದ್ದರು. ಒಂದೊಂದು ಸಲ ತಾವೇ ಅಧ್ಯಕ್ಷರಾಗಿದ್ದು. ಈ ಕಾರ್ಯಕ್ರಮುವನ್ನು ನಡೆಯಿಸಿಕೊಡು ತ್ತಿದ್ದೇನೆಂದು ತಮ್ಮಲ್ಲಿ ತಾವೇ ಭಾವಿಸಿಕೊಳ್ಳುತ್ತಿದ್ದರು ಗೌಡರು! ಶ್ರೇಯಾಂಸನಿಗೆ ತಾನೇ ಈ ಸ್ಥಾನವನ್ನು ಕಲ್ಪಿಸಿಕೊಟ್ಟುದಲ್ಲವೆ, ಎಂದು ತಮ್ಮಲ್ಲಿ ಅಂದುಕೊಳ್ಳುತ್ತಿದ್ದರು. ಆದರೂ ಶ್ರೇಯಾಂಸ ಪುರಾಣದ ಅರ್ಥವನ್ನು ವಿವರಿಸುತ್ತಿದ್ದಾಗ ನಡುನಡುವೆ ತಾವೂ ಬಾಯಿಹಾಕಿ ಏನನ್ನಾದರೂ ವಿವರಿಸಲು ಯತ್ನಿಸುವರು. ಇದರಿಂದ ಶ್ರೇಯಾಂಸನು ಏನೋ ತಪ್ಪುಮಾಡುತ್ತಿದ್ದುದನ್ನು ತಾವು ಸರಿಪಡಿಸುತ್ತಿದ್ದೇವೆಂದು ಅವರು ತೋರಿಸಿಕೊಳ್ಳುತ್ತಿದ್ದರು. ಆದರೆ ಶ್ರೇಯಾಂಸ ಅವರು ಹೇಳುವವರೆಗೆ ಸುಮ್ಮನಿದ್ದು, ಅವರು ವಿವರಿಸಿದ ತಪ್ಪನ್ನೆಲ್ಲ ತಿದ್ದಿ ಕೊಂಡು ಮುಂದೆ ಸಾಗುತ್ತಿದ್ದನು. ಹಿರಿಯರೆಂದು ಅವರ ಮಾತಿಗೆ ಎಲ್ಲಿಯೂ ಅಡ್ಡಬರುತ್ತಿರಲಿಲ್ಲ. ಆದರೆ ಗೌಡರಲ್ಲಿಯೂ ಶ್ರೇಯಾಂಸ ನಲ್ಲಿಯೂ ಒಳಗೊಳಗೇ ಸ್ಪರ್ಧೆಯುಂಟಾಗದಿರಲಿಲ್ಲ. ಈ ಮನೋ ವೃತ್ತಿಯಿಂದ ಪುರಾಣದ ರಸಭಂಗವಾಗತೊಡಗಿತು. ಇದು ಶ್ರಾವಕ ರಿಗೂ ರುಚಿಸದಾಯಿತು. ಗೌಡರು ಬಸದಿಗೆ ಪುರಾಣಕ್ಕೆ ಬಾರದ ದಿನ ಬಹು ಸರಾಗವಾಗಿ ಕಾವ್ಯ ಪಠಣ ಸಾಗುವದು. ಶ್ರೇಯಾಂಸನು ಭರತೇಶನ ಜೀವನದಲ್ಲಿ ಒಂದಾಗಿ–ಕಾವ್ಯವಾಚನದಲ್ಲಿ ತನ್ಮಯನಾಗಿ ಅರ್ಥ ವಿವರಿಸುವ. ಅದನ್ನು ಕೇಳುತ್ತ ಕೇಳುತ್ತ ಶ್ರಾವಕರೂ ಮೈಮರೆಯುವರು. ನಾಲ್ಕಾರು ಸಾವಿರ ವರ್ಷಗಳ ಹಿಂದಿನ ರಾಜ ವೈಭವವನ್ನೆಲ್ಲ ಅನುಭವಿಸಿದಂತೆ ಆನಂದಗೊಳ್ಳುವರು. ಪದ್ಮಪ್ಪನಂತೂ ತನ್ನಳಿಯನ ಚಾತುರ್ಯಕ್ಕೆ ಮಾರುಹೋಗಿದ್ದ. ಅದರಂತೆ ಭರತೇಶನ ಭೋಗದಲ್ಲಿರುವ ಯೋಗವೂ ಅವನ ಮನಸ್ಸನ್ನು ಸೆಳೆದಿದ್ದಿತು. ಆಗೆಲ್ಲ

ಶ್ರೇಯಾಂಸನ ಜೀವನದೊಳಗಿನ ಅನೇಕ ತಪ್ಪುಗಳನ್ನು ಆತ ಕ್ಷಮಿಸಿ ಬಿಡುತ್ತಿದ್ದ. ಶ್ರೇಯಾಂಸನು ವ್ರತ ನಿಯಮಗಳಿಗೆ ನಡೆಯದಿದ್ದುದು ಆಗಾಗ ಅವನಿಗೆ ನೋವನ್ನುಂಟುಮಾಡುತ್ತಿದ್ದಿತು. ಈಗ ಅದು ಸ್ವಲ್ಪ ಮಾಯವಾಗುತ್ತಿದ್ದಿತು. ಆತ್ಮದ ಸತ್ವ ಹಿರಿದಾಗಿದ್ದರೆ–ಕಾಲಲಬ್ಧಿ ಹೊಂದಿದ ಮೇಲೆಯೂ ಕೂಡ ಜೀವಿಗಳು ಭೋಗದಲ್ಲಿ ಇರಬಹುದು. ಅಂಥ ಜೀವಿಗಳಲ್ಲಿ ಶ್ರೇಯಾಂಸನ ಆತ್ಮ ಒಂದಾಗಿರ ಬಾರದೇಕೆ ಎಂದು ವಿಚಾರಿಸುವ. ಅವನನ್ನು ಆದರದಿಂದ ಕಾಣುವ. ಅವನ ಪುರಾಣ ಕಥನವನ್ನು ಮೆಚ್ಚುವ. ಪ್ರತಿದಿನದ ಪುರಾಣ ಮುಗಿದ ಮೇಲೆ ಮರುದಿನ ಮತ್ತೆ ಪುರಾಣ ಯಾವಾಗ ಆರಂಭ ವಾದೀತೋ ಎಂದು ಆತುರಗೊಳ್ಳುವನು.

ಇಂದು 'ತತ್ವೋಪದೇಶ ಸಂಧಿ' ಆರಂಭವಾಗಿದ್ದಿತು. ಶ್ರೇಯಾಂಸ ಕಾವ್ಯದೊಳಗಿನ ಪದ್ಯಗಳನ್ನು ಸರಾಗವಾಗಿ ಓದಿ ಅರ್ಥ ವಿವರಿಸುತ್ತಿದ್ದ. ಜಿನಗೌಡರೂ ಹತ್ತಿರ ಕುಳಿತಿದ್ದರು.

ಧಾರಿಣಿಯೊಳಗೆ ಸ್ತ್ರೀಪುರುಷರಗಲಿ ಬ್ರಹ್ಮ- |
ಚಾರಿತನವ ತೋರಬಹುದು ||
ಸೇರಿದ್ದು ಮನವ ತಡೆವುದುರೆ ಖಡ್ಗದ |
ಧಾರೆಯ ನಡೆ ತಾಸಿವಲ್ತೆ ||
ಮೊದಲು ವ್ರತವ ಕೊಂಡು ಮತ್ತೆ ನಲ್ಲನ ಕಂಡು |
ಮುದದೋರೆ ಲೋಕಜನಗಳ ||
ಬೆದರಿಕೆಗಾಗಿ ನೈರಿಸಿವರೆ ದೊರೆಗಳ |
ಕುದುರೆಯ ಬ್ರಹ್ಮಚರ್ಯವದು ||
ತುಂಬಿದೆಲ್ಲರ ಮುಂದೆ ವ್ರತವೆಂದುಕೊಂಡು ಮ |
ತ್ತಂಬುಜಮುಖಿಯರ ಕಂಡು ||
ಕುಂಬಳ ಕಾಯಂತೆ ಮನದೊಳು ಕೊಳೆವುತ |
ಡಂಬಕರಿಹರದು ವ್ರತವೆ ||

ಹೀಗೆ ಒಂದೊಂದೇ ಪದಗಳನ್ನು ಶ್ರೇಯಾಂಸ ಓದಿ ಅರ್ಥ ವಿವರಿಸುತ್ತಿದ್ದ. ಶ್ರಾವಕರೆಲ್ಲರೂ ತಲೆದೂಗುತ್ತಿದ್ದರು, ಭರತೇಶನ ಸಂಯಮಕ್ಕೆ. ಡಂಬಕರ ನೀತಿ ರೀತಿಗಳನ್ನು ವಿವರಿಸುತ್ತ ಶ್ರೇಯಾಂಸ ವೇಶ್ಯೆಯರ ಮನೆಯಲ್ಲಿ ಕಾಲಕಳೆಯುವ ವ್ರತಿಕರೆಷ್ಟೋ ನಮ್ಮ ಜನರಲ್ಲಿ.... ಎಂದು ಮೊದಲಾಗಿ ಹೇಳಿ ಗೌಡರ ಕಡೆಗೆ ನೋಟ ವೊಂದನ್ನು ಸ್ವಾಭಾವಿಕವಾಗಿ ಬೀರಿದ. ಅವನ ಮಾತು ನೋಟಗಳು ಉದ್ದೇಶಪೂರ್ವಕವಿರದಿದ್ದರೂ ಜಿನಗೌಡರಿಗೆ ಅವು ತನ್ನನ್ನೇ ಉದ್ದೇಶಿಸಿ ಹೇಳಿದುವು ಎಂದು ಭಾಸವಾಯಿತು. ಅದರಲ್ಲಿ ಜನರೂ ಕೂಡ ಅದೇ ಕಾಲಕ್ಕೆ ನಸುನಗೆಯೊಂದನ್ನು ಬೀರಬೇಕೇ ? ಅದೂ ಜಿನಗೌಡರನ್ನು ಕೆರಳಿಸಿತು. ಹಾಗೆಯೇ ಮೊನ್ನೆ ಮೊನ್ನೆ ನಡೆದ ಪ್ರಸಂಗವೊಂದು ಅವರ ಮನೋನಯನದ ಎದುರಿಗೆ ಸುಳಿದುಹೋಯಿತು.

ಅಕ್ಕಾಸಾನಿಯ ಮನೆಯಲ್ಲಿ ಜಿನಗೌಡ ವೀಳ್ಯೆಯನ್ನು ಸ್ವೀಕರಿಸುತ್ತ ಹರಟೆ ಹೊಡೆಯುವ ಕಾಲಕ್ಕೆ ಅನಿರೀಕ್ಷಿತವಾಗಿ ಶ್ರೇಯಾಂಸ ಅಲ್ಲಿ ಪ್ರವೇಶಿಸಿದ್ದ.

"ಏನು ಕೆಲಸವಿತ್ತು ?"

ಬೇಸರದ ದನಿಯಲ್ಲಿಯೇ ಅಕ್ಕಾಸಾನಿ ಶ್ರೇಯಾಂಸನನ್ನು ಕೇಳಿದಳು. ಅದಕ್ಕೆ ಶ್ರೇಯಾಂಸ ಉತ್ತರ ಹೇಳುವ ಮೊದಲೇ ಜಿನಗೌಡ ನುಡಿದ,

"ಏನಾದರೂ ನಿನ್ನ ಮಗಳ ಕಡೆಗೆ ಕೆಲಸವಿರಬೇಕು...."

ತುಸು ಕೊಂಕುದನಿ ತೋರಿತು ಗೌಡರ ಮಾತಿನಲ್ಲಿ. ಆದರೆ ಅದನ್ನು ವಿರೋಧಿಸಿ ಶ್ರೇಯಾಂಸ ನುಡಿದ,

"ಇಲ್ಲ; ತಮ್ಮ ಕಡೆಗೇ ಕೆಲಸವಿತ್ತು !"

"ನನ್ನ ಕಡೆಗೆ ?"

"ಅಹುದು."

"ಏನದು ?"

"ಪಾಯಸಾಗರ ಮುನಿಗಳು ಒಬ್ಬ ಮನುಷ್ಯನನ್ನು ಕಳಿಸಿದ್ದಾರೆ....ಜುಗುಳದಿಂದ. ಆದಿಪುರಾಣ, ಮಹಾಬಂಧಗಳು ಬೇಕಾಗಿವೆಯಂತೆ. ಅಲ್ಲಿಯ ಶ್ರಾವಕರಿಗೆ ಓದಿ ಹೇಳುವರಂತೆ...."

"ಜುಗುಳದಲ್ಲಿ ವರ್ಷಾಯೋಗವೇನು. ಪಾಯಸಾಗರ ಸ್ವಾಮಿಗಳದು ?"

ಅಕ್ಕಾಸಾನಿ ಶ್ರೇಯಾಂಸನ ಮಾತನ್ನು ನಡುವೆಯೇ ತಡೆದು ಗೌಡರಿಗೆ ಕೇಳಿದಳು.

"ಅಹುದು."

"ಒಮ್ಮೆ ಹೋಗಿ ಬರೋಣ ನಡೆಯಿರಿ, ದರ್ಶನಕ್ಕೆ...."

ಅಕ್ಕಾಸಾನಿಯ ಮಾತನ್ನು ಕೇಳಿಕೊಂಡು ಗೌಡರು ಸುಮ್ಮನಾದರು. ಮನದಲ್ಲಿಯೇ ವಿಚಾರಿಸತೊಡಗಿದರು. 'ಮುನಿಗಳ ದರ್ಶನಕ್ಕೆ ಹೋಗುವದೆಂದರೆ ಅದೇನು ನಾಟಕ ಸಿನೇಮಾಗಳಿಗೆ ಹೋದಂತೆಯೇ ? ಸಂಗಡ ಇವರನ್ನು ಹೇಗೆ ಕರೆದುಕೊಂಡು ಹೋಗುವುದು ? ಮಹಾರಾಜರು ಏನೆಂದಾರು ? ಜನ ಏನೆಂದೀತು ? ವಿಚಾರದ ಕೊನೆಯೊಡನೆಯೇ ಅಕ್ಕಾಸಾನಿಯ ಮುಖದ ಕಡೆಗೆ ನೋಡಿದರು ಗೌಡರು. ತಮ್ಮ ಇಪ್ಪತ್ತು ವರ್ಷಗಳ ಸಂಬಂಧವೆಲ್ಲ ಅವರಿಗೆ ನೆನಪಾಯಿತು. ಪ್ರಣಯ ಪ್ರೇಮಗಳೆಲ್ಲ ಮನದೆದುರಿಗೆ ಬಂದು ನಿಂತುವು. ತನ್ನನ್ನೇ ನೆಚ್ಚಿ ಬಾಳಿದ ಅವಳು ವೇಶ್ಯೆಯ ಕುಲದಲ್ಲಿ ಹುಟ್ಟಿದರೇನಾಯಿತು ? ಒಬ್ಬ ಗೃಹಿಣಿಯಂತೆ ಬಾಳಿದಳಲ್ಲವೇ ? ಇಂಥವಳಿಗೆ ಈಗ ಮುನಿಗಳ ದರ್ಶನದ ಅಪೇಕ್ಷೆಯಾದರೆ ತಪ್ಪೇನು ? ಅಂಥ ಪುಣ್ಯವನ್ನು ಸಂಪಾದಿಸಲು ನಾನೇಕೆ ಅವಕಾಶವನ್ನು ಕಲ್ಪಿಸಿಕೊಡಬಾರದು ? – ಯಾಕೆ ಕೊಡಬಾರದು ?'

ಆದರೆ ಜಿನಗೌಡರ ಮನಸ್ಸು ಈ ವಿಚಾರಕ್ಕೆ ಒಪ್ಪಿಗೆಯನ್ನೇ ಕೊಡಲಿಲ್ಲ. ಇವಳನ್ನು ಸಂಗಡ ಕರೆದುಕೊಂಡು ಹೋದರೆ ಧರ್ಮಿಷ್ಠರಲ್ಲಿ ತನ್ನ ಸ್ಥಾನಕ್ಕೆ ಚ್ಯುತಿ ಬರುವದೆಂದು ಆತ ಭಾವಿಸಿದ್ದರು. ಇಂಥ

ಸಂದರ್ಭದಲ್ಲಿ ಅಕ್ಕಾಸಾನಿ ಮುನಿಗಳ ದರ್ಶನಕ್ಕೆ ಹೋಗುವ ಹಟ ಹಿಡಿದರೆ....? ಈ ಪ್ರಶ್ನೆಯು ಅವರ ಎದೆಯನ್ನೇ ನಡುಗಿಸಿತು. ಇಷ್ಟೇ ಅಲ್ಲ, ಅವರ ಮನಸ್ಸಿನ ಓಟ ಇನ್ನೊಂದು ದಿಸೆಯಲ್ಲಿ ಓಡು ವಂತೆಯೂ ಮಾಡಿತು. ಇಲ್ಲಿ ಬಂದು, ಅಕ್ಕಾಸಾನಿಯ ಎದುರಿಗೆ ಈ ಸುದ್ದಿಯನ್ನುಸುರಿದ ಶ್ರೇಯಾಂಸನ ಮೇಲೆಯೇ ಗೌಡರು ಕೆರಳಿದರು.

"ಹೂಂ! ಹೊತ್ತಿಲ್ಲದ ಹೊತ್ತಿನೊಳಗೆ ಇಲ್ಲದ್ದೊಂದು ತಕ್ಕೊಂಡು ಬರುವೆ ಆಯ್ತು!"

ಎಂದು ಕೆರಳಿ ನುಡಿದರು ಗೌಡರು.

"ಅವನಿಗೇ ಕೊಡಲಿಕ್ಕೆ ಹೇಳಿಬಿಡೋಣ ಬೇಕಾದರೆ...."

ಅಕ್ಕಾಸಾನಿ ಸಮಾಧಾನ ಹೇಳಿದಳು.

"ಅವನೇನು ಕೊಡುವ? ಅವನಿಗೇನು ತಿಳಿಯುವುದು?"

ಎಂದು ಎದ್ದರು ಗೌಡರು, ಹಣೆಗೆ ಹದಿನಾರು ಗಂಟು ಹಾಕಿದ್ದರು.

"ಮಧ್ಯಾಹ್ನದ ಚಹದ ಹೊತ್ತಾಗಿತ್ತು...."

ಮೆಲ್ಲನೆ ಅಕ್ಕಾಸಾನಿ ದನಿ ಎಳೆದಳು. ಅತ್ತ ಲಕ್ಷ ಕೊಡದೆ ಗೌಡರು,

"ಇಲ್ಲಿ ನಾನಿರುವುದು ನಿನಗೇನು ಗೊತ್ತು?"

ಎಂದು ತುಸು ಗಂಭೀರವಾಗಿಯೇ ಕೇಳಿದರು, ಶ್ರೇಯಾಂಸನ ಕಡೆಗೆ ಹೊರಳಿ. ಆದರೆ ಇಷ್ಟರಲ್ಲಿ ಶ್ರೇಯಾಂಸ ಅಲ್ಲಿಂದ ಕಣ್ಮರೆ ಯಾಗಿದ್ದ. ಲಲಿತೆಯ ಕೋಣೆಯನ್ನು ಸೇರಿದ್ದ. ಒಳಗೆ ಕಪ್ಪು ಬಸಿಗಳ ಸದ್ದು ಕೇಳಿಸಿತು. ಇದೆಲ್ಲ ಗೌಡರಿಗೆ ಸಹನವಾಗಲಿಲ್ಲ. ತಾನಿಲ್ಲಿ ಇರುವಾಗಲೇ ಶ್ರೇಯಾಂಸನ ಈ ಆದರಾತಿಥ್ಯವೆಂದರೆ....! ವತನದಾರ ಗೌಡನ ಎದುರಿಗೆ ಈ ಕೂಲಿಕಾರರ ಕುನ್ನಿಗೆ ಇಂಥ ಮರ್ಯಾದೆಯೇ? ಎಂದೇನೇನೋ ಮನದಲ್ಲಿಯೇ ಅಂದುಕೊಂಡರು,

ಸ್ಪಷ್ಟವಾಗಿ ಆಡಲಿಕ್ಕಾಗದೆ.

“ಇದೇನು ಹುಡುಗಾಟಿಗೆ ?”

ಕೆರಳಿ ನುಡಿದರು ಗೌಡರು. ಸಿಟ್ಟಿನ ಭರದಲ್ಲಿ ದನಿ ತಡೆ ತಡೆದು ಹೊರಬಿದ್ದಿತು.

“ಏನೋ ಹುಡುಗರು....”

ಅಕ್ಕಾಸಾನಿಯ ಮಾತನ್ನು ನಡುವೆಯೇ ತಡೆದು ಗುಡುಗಿದರು ಗೌಡರು,

“ನಿನ್ನ ಕಣ್ಣಿಗೆ ಹುಡುಗರು! ಆ ಯಜಮಾನನ ಕಣ್ಣಿಗೆ ಹುಡುಗ ಅಲ್ಲ? ಸುಮ್ಮನೆ ಇಲ್ಲಿ ಹೊಟ್ಟೆಗೆ ಬಟ್ಟೆಗೆ ಕೊಟ್ಟು ಇಟ್ಟಿದಾನೇನು ಅವ? ನಾಳೆ ಒಯ್ದು ತನ್ನ ಊರೊಳಗೆ ಇಟ್ಟುಕೊಂಡುಬಿಟ್ಟ ಅಂದರೆ ಕುಳಿತಿ ಹಲ್ಲು ಕಿಸಿದುಕೊಂಡು. ಐನೂರು ರೂಪಾಯಿ ಕೊಟ್ಟು ಏಕೆ ಜುಲುಪ್ಪೆ ಹಚ್ಚಿಕೊಂಡಿದ್ದಾನು ಆ ಗೌಡ? ಇಷ್ಟೂ ತಿಳೀಬಾರದು ನಿನಗೆ ?”

ಇಷ್ಟು ಮಾತುಗಳನ್ನು ರಭಸದಿಂದ ಆಡಿ ಗೌಡರು ಕಾಲಲ್ಲಿ ಮೊಚ್ಚಿಗಳನ್ನು ಸಿಕ್ಕಿಸಿಕೊಂಡು ಕಟ್ಟೆಯನ್ನು ಇಳಿದು ಹೊರಟರು. ಅಕ್ಕಾಸಾನಿಗೂ ಅವರ ಸಿಟ್ಟನ್ನು ಕಂಡು ಏನೂ ಮಾತನಾಡಲಿಕ್ಕೆ ಆಗಲಿಲ್ಲ. ಒಳಗೆ ಲಲಿತೆ ಶ್ರೇಯಾಂಸರಿಬ್ಬರೂ ಸಪ್ಪಳಿಲ್ಲದೆ ಸುಮ್ಮನಿದ್ದರು. ಎಲ್ಲಿ ಜೋರಾಗಿ ಉಸುರಾಡಿಸಿದರೂ ಗೌಡರು ತಿರುಗಿ ಬಯ್ಯುವರೇನೋ ಎಂದು ಲಲಿತೆ ಉಸುರು ಬಿಗಿಹಿಡಿದುಕೊಂಡು, ಬಾಗಿಲು ಸಂದಿಯೊಳಗಿಂದ ಗೌಡರು ಹೋಗುವುದನ್ನು ನಿರೀಕ್ಷಿಸುತ್ತಿದ್ದಳು. ಶ್ರೇಯಾಂಸ ಹೆದರಿ ಇದೇನಾಯಿತು ಎಂದುಕೊಳ್ಳುತ್ತಿದ್ದ. ಗೌಡರಲ್ಲಿಯ ಪುಸ್ತಕಗಳ ಉಪಯೋಗ ಸುತ್ತಲಿನ ಹಳ್ಳಿಯವರಿಗೂ ಆಗಲೆಂದು ಬಯಸಿ ಇಲ್ಲಿಗೆ ಬಂದರೆ ಅದೆಂಥ ಅಪವಾದ ನನ್ನನ್ನು ಆವರಿಸಿತೀಗ ಎಂದೇನೇನೋ ವಿಚಾರಿಸುತ್ತಲಿದ್ದ.

ಗೌಡರು ಕಣ್ಮರೆಯಾದ ಕೂಡಲೆ ಅಕ್ಕಾಸಾನಿಯು ಸಿಟ್ಟಿನ

ಸ್ವರದಲ್ಲಿಯೇ ಕಿರುಚಿದಳು.

"ಲಲಿತಾ !"

ತನ್ನ ಆರ್ಭಟೆಗೆ ಏನೂ ಉತ್ತರ ಬರದಿರಲು ಇನ್ನಿಷ್ಟು ಕೆರಳಿ ನುಡಿಯತೊಡಗಿದಳು :

"ಗೌಡರು ಏನೆಂದರು ಕೇಳಿದೆ ಏನು ?"

"ಎಲ್ಲರೂ ಅವರಂತೆಯೇ ಇರುವದಿಲ್ಲ !"

ಮೆಲ್ಲನೆ ಲಲಿತೆಯ ತುಟಿಗಳಿಂದ ಮಾತು ಜಾರಿತು.

"ಗರತಿ ಮಗಳ ನೀ ಹೇಳುವಾಕೆ...."

"ನನ್ನ ಸಲುವಾಗಿ ಹೇಳಲಿಲ್ಲ ನಾನು...."

"ಹೂಂ ! ತಾಯಿಗೆ ಬುದ್ಧಿ ಕಲಿಸುವಾಕೆ ಆದೆ ನೀನೊಬ್ಬಾಕೆ.... ಚಿಲುವಿ !"

ಎಂದು ಸಿಟ್ಟಿನಿಂದ ಎದ್ದು ಅಕ್ಕಾಸಾನಿ ತನ್ನ ಕೋಣೆಯನ್ನು ಸೇರಿದಳು.

ಪಡಸಾಲೆಯು ತೆರವಾದುದನ್ನು ಕಂಡು ಶ್ರೇಯಾಂಸ ಮೆಲ್ಲನೆ ಎದ್ದು ಮನೆಗೆ ಹೊರಡಲು ಸಿದ್ಧನಾದ....

ನೀರು ತುಂಬಿದ ಕಣ್ಣುಗಳಿಂದ ಲಲಿತೆ ಶ್ರೇಯಾಂಸನ ಹತ್ತಿರ ಸರಿದು,

"ಹೋಗುವಿರಾ ?" ಎಂದಳು....

"..............."

"ಕೋಪವೇ ?"

"ಯಾರ ಮೇಲೆ ?"

"ನನ್ನ ಮೇಲೆ....!"

"ನಿನ್ನ ಮೇಲೆ ಸಿಟ್ಟಾಗಲು ಕಾರಣ ?"

ಮೌನವಾಗಿ ಶ್ರೇಯಾಂಸನ ಮುಖದ ಕಡೆಗೆ ನೋಡಿದಳು ಲಲಿತೆ. ತುಟಿಗಳು ಅದುರಿದುವು. ಮಾತು ಸ್ಫುಟವಾಗಲಿಲ್ಲ.

"ನೀನು ನೊಂದುಕೊಳ್ಳಬೇಡ....ಲಲಿತಾ !"

ಶ್ರೇಯಾಂಸನೇ ಸಮಾಧಾನ ಹೇಳಹೋದ.

"ಕ್ಷಮಿಸುವಿರಾ ಹಾಗಾದರೆ ?"

"ಯಾರನ್ನು, ಗೌಡರನ್ನು !"

ಲಲಿತೆಯ ಮೊಗದಲ್ಲಿ ಮಂದಹಾಸವೊಂದು ಮೂಡಿತು. ನಂದನದ ಮಲ್ಲಿಗೆಯ ಮುಗುಳಲ್ಲವದು ! ಉದುರಿಬಿದ್ದ ಪಾರಿಜಾತ ಪುಷ್ಪ !

"ಹೋಗಿ ಬರುವೆ...."

"ಯಾವಾಗ ಬರುವಿರಿ ?"

"ಬರುವೆ !"

ಎಂದಿಷ್ಟೇ ಹೇಳಿ ಶ್ರೇಯಾಂಸ ಅಲ್ಲಿಂದ ಹೊರಬಿದ್ದ. ಆ ಪ್ರಸಂಗ ದಿಂದ ಅವರಿಬ್ಬರಲ್ಲಿ ಚಿಕ್ಕಂದಿನಿಂದಲೂ ಬೆಳೆದು ಬಂದ ಸಲಿಗೆ ಅದೆಂತೋ ಮಾಯವಾಗಿ ಬಿಟ್ಟಿತು. ಲಲಿತೆ ಇನ್ನೊಬ್ಬರ ವಸ್ತು. ಅವಳ ಕೂಡ ಮಾತನಾಡುವುದೂ ಒಂದು ಅಪರಾಧ. ಜನರ ಕಣ್ಣಿಗೆ ಇದು ಸರಿಯಾಗಿ ಕಾಣದು ಎಂದು ಶ್ರೇಯಾಂಸನಿಗೆ ವಿಚಾರ ಬಂದುದೂ ಅಂದೇ ಮೊದಲು. ಆದರಿಂದ ಇತ್ತೀಚೆಗೆ ಅಕ್ಕಾಸಾಸಿಯ ಮನೆಯ ಕಡೆಗೆ ಹೋಗುವದನ್ನೇ ಬಿಟ್ಟಿದ್ದ. ಇಷ್ಟೇ ಅಲ್ಲ, ಅವರ ಮನೆಯ ಮುಂದಿನಿಂದ ಹಾಯ್ದು ಹೊರಟರೆ ಲಲಿತೆ ಎಲ್ಲಿಯಾದರೂ ಕಂಡು ಕರೆಯಬಹುದೆಂದು ಆತ ಆತ್ಮಾರಾಮ ಮಾಸ್ತರರ ಮನೆಗೆ ಹೋಗಬೇಕಾದರೂ ಬೇರೆ ದಾರಿಯಿಂದಲೇ ಹೋಗುವ ತನ್ನ ಓದು ಬರಹ ಸಾಗಿಸುವ.

ಇದರಿಂದ ಜಿನಗೌಡರ ಮನಸ್ಸಿಗೆ ಸಮಾಧಾನವಾಗಿತ್ತು. ಆದರೆ ಲಲಿತೆಯ ಮನಸ್ಸಿಗೆ ಶಾಂತಿಯಿಲ್ಲ. ಒಂದೆರಡು ಸಲ ಆತ್ಮಾರಾಮ ಮಾಸ್ತರರ ಮನೆಗೆ ಹೋಗಿ, ಶ್ರೇಯಾಂಸ ನೋಡಲು ಸಿಕ್ಕುವನೇನೋ ಎಂದು ಅವಳು ಹೆಸಣಿಸಿದಳು. ಆದರೆ ಅವಳ ಆಶೆ ಸಫಲವಾಗಲಿಲ್ಲ.

ಗುರುಗಳಿಗೆ ಬಾಯಿಬಿಟ್ಟು ಕೇಳಲಿಕ್ಕೂ ಸಂಕೋಚ ಅವಳಿಗೆ. ಅವರೂ ಎಲ್ಲಿಯಾದರೂ ತಪ್ಪು ತಿಳಿದುಕೊಂಡುಬಿಟ್ಟರೆ ಎಂಬ ಹೆದರಿಕೆಯೂ ಅವಳಿಗೆ ಇತ್ತು. ಆದರೂ ಏನೋ ತೂಕ ಹಾಕಿ, ಒಮ್ಮೆ ಕೇಳಿದಳು,

"ಶ್ರೇಯಾಂಸನ 'ವಿಜಯ ಸಾಮ್ರಾಜ್ಯ' ಓದಲು ಕೊಡುವಿರಾ?"

"ವಿಜಯ ಸಾಮ್ರಾಜ್ಯದ ಸುದ್ದಿ ನಿನ್ನ ಕಿವಿಗೆ ಹೇಗೆ ಬಿತ್ತು ?"

ಆತ್ಮಾರಾಮರು ಉತ್ಸುಕತೆಯಿಂದಲೇ ಕೇಳಿದರು. ತನ್ನ ಶಿಷ್ಯನ ಬರವಣಿಗೆಯ ಮಾತು ಎಲ್ಲೆಲ್ಲೂ ಹರಡಿದುದಕ್ಕೆ ಅವರಿಗೆ ಸಂತಸ.

"ಮೊನ್ನೆ ಗೌಡರು ಕೋರ್ಟಿಗೆ ಹೋಗಿದ್ದರು....ಅಲ್ಲಿ ಯಾರೋ ಹೇಳುತ್ತಿದ್ದರೆಂದು ಅವರು ಅವ್ವನ ಮುಂದೆ ಹೇಳುತ್ತಿದ್ದರು !"

ಏನೋ ಕಲ್ಪಿಸಿ ಹೇಳಿ, ಪಾರಾಗಲು ಯತ್ನಿಸಿದಳು ಲಲಿತೆ.

"ಯಾರು ಜಿನಗೌಡರೇ ?"

ಲಲಿತೆ ಸುಮ್ಮನಾದಳು, ಗೋಣು ತಗ್ಗಿಸಿದಳು. ಹೆಣ್ಣುಮಗಳ ಸ್ವಾಭಾವಿಕ ಲಜ್ಜೆಯೆಂದು ಭಾವಿಸಿದರೇನೋ ಆತ್ಮಾರಾಮರು. 'ವಿಜಯ ಸಾಮ್ರಾಜ್ಯ' ನಾಟಕದ ಪ್ರತಿಯನ್ನು ಅವಳ ಕೈಗೆ ತಂದು ಕೊಡುತ್ತ,

"ಎಲ್ಲಿಯಾದರೂ ಇಟ್ಟು ಮರೆತೀಯಾ ಮತ್ತೆ ? ಓದಿ ಬೇಗನೆ ತಂದುಕೊಡು !"

ಎಂದು ಹೇಳಿದರು. ಗೆಲುವಿನ ನಗೆಯಿಂದ ಲಲಿತೆಯ ಮುಖ ವನ್ನೊಮ್ಮೆ ನೋಡಿದರು.

ಲಲಿತೆ ನಾಟಕದ ಪ್ರತಿಯನ್ನು ಕೈಗೆ ತೆಗೆದುಕೊಂಡು, ತಾನು ಗೆದ್ದೆನೆಂದು ಹೊರಗೆ ಬಂದಳು.

'ವಿಜಯ ಸಾಮ್ರಾಜ್ಯ'ವನ್ನು ಸಂಪಾದಿಸಿ ಲಲಿತೆಯೇನೋ ಶ್ರೇಯಾಂಸನನ್ನು ಸೆರೆಹಿಡಿದೆನೆಂದು ಭಾವಿಸಿದ್ದರೂ ಅದನ್ನು ಓದಿದ

ಮೇಲೆ ಅವಳ ಮನಸ್ಸನ್ನೇ ಅದು ಸೆರೆಹಿಡಿದುಬಿಟ್ಟಿತ್ತು. ಒಮ್ಮೆ ಅಲ್ಲ, ಹತ್ತು ಸಲ ಓದಿದಳು ನಾಟಕವನ್ನು. ಆದರೂ ಅವಳಿಗೆ ತೃಪ್ತಿಯಿಲ್ಲ. ತಾಯಿಗೆ ಓದಿ ತೋರಿಸಿದಳು, ಗೌಡರಿಗೆ ಓದಿ ಹೇಳಿದಳು....ಅವರೂ ನಾಟಕಕಾರರನ್ನು ಕುರಿತು ಹೊಗಳಿದರು. ಆದರೆ ಅವರಿಗೆ, ಅವಳು ಶ್ರೇಯಾಂಸನೇ ಅದರ ಲೇಖಕನೆಂದು ಮಾತ್ರ ಹೇಳಲಿಲ್ಲ. ತಲೆಯನ್ನು ಕಂಡು ಸಂತಸಪಡಲಿಕ್ಕೆ ಅದರ ಕರ್ತೃವಿನ ಪರಿಚಯದ ಅವಶ್ಯಕತೆಯೇನು? ಅದನ್ನು ಹೇಳಿದ್ದರೆ ಗೌಡರು ಈ ಕೃತಿಯನ್ನು ಮೆಚ್ಚುತ್ತಿದ್ದರೇ? ಇಲ್ಲ; ಎಂದೂ ಇಲ್ಲ.

ಹಾಗಾದರೆ ಕಲೆಗಾರನ ಹೆಸರೇ ಅಳಿಯಬೇಕೇ?

ಕಲೆಗಾರನಿಗೂ ಕಲೆಗೂ ಸಂಬಂಧವೇ ಇಲ್ಲವೇ?

ಇದೆ; ಕಲೆಗಾರನಿಗಿಂತ ಕಲಾಕೃತಿ ದೊಡ್ಡದು....ಇಷ್ಟೇ.

ಅವನು ದೊಡ್ಡವನೆಂದೇ ಕೃತಿ ದೊಡ್ಡದಾಗುವದಲ್ಲವೆ?

ಕೃತಿಯ ದೊಡ್ಡಗುಣವನ್ನು ತಂದು ಲೋಕ ಅವನು ಗುಣವನ್ನು ಮೆಚ್ಚಬೇಕಲ್ಲ !:

ಅದಕ್ಕೆ ಸಮಾಜದೊಳಗಿನ ವ್ಯಕ್ತಿಗಳ ಸ್ಥಾನ ಮಾನಗಳು ಅಡ್ಡಿ ಬರುವವು!

ಬರಬೇಕೇ?

ಸಮಕಾಲೀನರಲ್ಲಿ ಈ ತೊಡಕುಗಳು ಇರತಕ್ಕವೇ. ಕಲೆಗಾರನ ಭೌತಿಕ ದೇಹ ಕಣ್ಮರೆಯಾಗಿ....ಅವನ ಆತ್ಮ ಪ್ರದರ್ಶನದಂತಿರುವ ಕಲಾಕೃತಿಗಳು ಮಾತ್ರ ಉಳಿದಾಗ ಅವು ಅಖಂಡ ಲೋಕವನ್ನೇ ಬೆಳಗಲಿಕ್ಕೆ ಸಮರ್ಥವಾಗುವವು....

ಆಗ ಅವುಗಳನ್ನು ಅರ್ಥ ಮಾಡಿಕೊಳ್ಳಲಿಕ್ಕೆ ಮತ್ತೆ ಕಲಾಜೀವಿಯ ಜೀವನದ ಅವಶ್ಯಕತೆ ಬೀಳುವುದು....ರಸಿಕರಿಗೆ.

ಕೈಯೊಳಗಿದ್ದುದನ್ನು ಕಳೆದುಕೊಂಡು ಹುಡುಕಿದಂತಲ್ಲವೇ ಇದು!

ಇದೊಂದು ಲೋಕದ ರೀತಿ....

ಹೀಗೆ ಏನೇನನ್ನೊ ವಿಚಾರಿಸುತ್ತಾ ಲಲಿತೆ ಗಾದಿಯ ಮೇಲೆ ಹೊರಳಾಡುತ್ತಿದ್ದಳು. ಎದೆಯ ಮೇಲೆ ನಾಟಕದ ಹಸ್ತಪ್ರತಿ ಇತ್ತು. ರಾತ್ರಿ ಹನ್ನೆರಡು ಹೊಡೆದಿತ್ತು.

"ಲಲಿತಾ !" ಎಂದು ಕೂಗಿದಳು ತಾಯಿ.

"ಹೂಂ ! ಬಂದೆ. !"

"ಬಂದರು ನೋಡು ಗೌಡರು ! ಕೈಯೊಳಗಿನ ಪುಸ್ತಕ ಇಟ್ಟು ಬಾ ಹೊರಗೆ. ಅದೇನು ಪುಸ್ತಕ ಹೊಟ್ಟೆಗೆ ಬಟ್ಟೆಗೆ ಕೊಡುವುದೇನು ?"

"ಇರಲಿ, ಸುಮ್ಮನಿರೇ ತಾಯಿ ಬಂದೆನಲ್ಲ !"

ಎಂದು ಲಲಿತೆ ಒಯ್ಯಾರದಿಂದ ಪಡಸಾಲೆಗೆ ಬಂದಳು. ತಲೆಬಾಗಿಲಿನಿಂದ ಒಳಗೆ ಬರುವವರ ಕಡೆಗೊಮ್ಮೆ ನೋಡಿ, ಅವರ ಸ್ವಾಗತದ ಚಟುವಟಿಕೆಯಲ್ಲಿ ಮೈಮುರಿತಂತೆ ತೋರಿಸಿದಳು. ನೋಡಿದವರಿಗೆ ಚೇತನದ ಚಿಲುಮೆಯಂತೆ ತೋರುತ್ತಿದ್ದಳಾಗ ಲಲಿತೆ !

ಚೆಂದೂರಿನ ಗೌಡರು ಬೆಳಗಾಂವಿಯ ನಾಲ್ವಾರು ಜನ ಪ್ರಸಿದ್ಧ ವಕೀಲರನ್ನು ಕರೆದುಕೊಂಡು ಅವಳಲ್ಲಿ ಬಂದಿದ್ದರು. ಸಹಕಾರಿ ಬ್ಯಾಂಕೊಂದನ್ನು ಅವರೆಲ್ಲರೂ ಕೂಡಿ ಬೆಳಗಾಂವಿಯಲ್ಲಿ ಆರಂಭಿಸಿದ್ದರು. ಅದರ ಶಾಖೆಗಳನ್ನು ಹಳ್ಳಿ ಹಳ್ಳಿಗಳಲ್ಲಿಯೂ ಸ್ಥಾಪಿಸಿ, ವ್ಯವಸ್ಥಿತ ರೀತಿಯಿಂದ ಬಡ್ಡಿಯ ವ್ಯವಹಾರವನ್ನು ಸಾಗಿಸುವ ಯೋಚನೆಯಲ್ಲಿದ್ದರು. ಅದಕ್ಕಾಗಿ ಅವರು ಜೈನಾಪುರದಲ್ಲಿ ಒಂದು ಸಾರ್ವಜನಿಕ ಸಭೆಯನ್ನು ಇಟ್ಟು, ಸಂಘದ ಪ್ರಚಾರ ಮಾಡಲಿಕ್ಕೆ ಬಂದಿದ್ದರು ಅಲ್ಲಿಯ ವ್ಯವಸ್ಥೆಯನ್ನೆಲ್ಲ ಮಾಡುವ ಹೊಣೆಯನ್ನು ಚೆಂದೂರಿನ ಗೌಡರೇ ಹೊತ್ತಿದ್ದರು. ಅಕ್ಕಾಸಾನಿಯ ಮನೆಯು ಅವರದೇ ಆದುದರಿಂದ ಅವರಿಗೆ ಯಾವ ತೊಂದರೆಯೂ ಇರಲಿಲ್ಲ. ಅಲ್ಲದೆ ಊರ ಗೌಡರಾದ ಜಿನಗೌಡರೂ ವ್ಯವಸ್ಥೆಗೆ ಮುಂದಾಗಿ ನಿಂತಿದ್ದರು. ಹೀಗಿರುವುದರಿಂದ ಅವರ ತಿನಿಸು ಉಣಿಸುಗಳಿಗೇನೂ ಕೊರತೆ ಆಗಲಿಲ್ಲ. ಆದರೆ ಅವರು

ಮಾಡಬೇಕಾದ ಪ್ರಚಾರ ಕಾರ್ಯಕ್ಕೇನೇ ಅಂದು ಏಟು ಬಿದ್ದಿತ್ತಾದ್ದರಿಂದ ಬಲೆಯಲ್ಲಿ ಬಿದ್ದ ಹಂಸಗಳಂತೆ ಚಡಪಡಿಸುತ್ತಿದ್ದರು. ಆ ಗುಂಪಿನಲ್ಲಿ ಯಾವಾಗಲೂ ಅದೇ ಮಾತೇ ಮಾತಾಗಿದ್ದಿತು.

"ಸನದ ಸಂಪಾದಿಸಿದ ಸುಲಿಗೆಗಾರ ಎಂದನಲ್ಲ ಈತ!"

ಎಂದರು ಸಭೆಯ ಅಧ್ಯಕ್ಷ ಪದವನ್ನು ಸ್ವೀಕರಿಸಿದ ಪ್ರಸಿದ್ಧ ವಕೀಲರು.

"ತಲೆ ತಿರುಕ ಹುಡುಗ ಇದ್ದಾನಾಯಿತು"

ಇನ್ನೊಬ್ಬ ವಕೀಲರು ಸಮಾಧಾನ ಹೇಳಿದರು.

"ಆದರೆ ನಮ್ಮ ತಲೆ ತಿರುಗಿಸಿದನಲ್ಲ!"

ಇನ್ನೊಬ್ಬರು ಮಾತನ್ನು ನಗೆಯಲ್ಲಿ ತೇಲಿಸಲು ಯತ್ನಿಸಿದರು.

"ನಗುವ ವಿಷಯ ಅಲ್ಲರೀ ಇದು! ಮೂರು ನಾಲ್ಕು ಸಾವಿರ ಜನರಲ್ಲಿ ಒಬ್ಬ ಹುಡುಗ ಹೀಗೆ ನಮ್ಮ ಯೋಜನೆಗಳ ಬುಡವನ್ನೇ ಅಲ್ಲಾಡಿಸಿ ಬಿಡಬೇಕೆಂದರೆ...."

ಅಧ್ಯಕ್ಷರು ಗಂಭೀರವಾಗಿ ನುಡಿದರು

"ನೀವೂ ತುಂಬ ವಿವರಿಸಿ – ಬಿಂಬಿಸಿ – ಮಾತನಾಡಿದಿರಲ್ಲ, ಹಿಂದಿನಿಂದ..."

ಇನ್ನೊಬ್ಬರ ನುಡಿಯಿದು.

"ಆದರೂ ಜನರ ಮೇಲೆ ಪರಿಣಾಮವಾಗಲಿಲ್ಲ....!"

"ಹೇಗೆನ್ನುವಿರಿ ?"

"ಅಷ್ಟು ತಿಳಿಯುವುದಿಲ್ಲೇನು ?"

"ಹೋಗುವಾಗ ಜನರು ಹಾದಿಯಲ್ಲಿಯೂ ಕೂಡ ಅವನ ಮಾತುಗಳನ್ನೇ ಎತ್ತಿ ಚರ್ಚಿಸುತ್ತ ನಡೆದಿದ್ದರು...."

"ಇಂಥವರಿಗೆ ಸಭೆಯಲ್ಲಿ ಮಾತನಾಡಲಿಕ್ಕೇ ಅವಕಾಶ ಕೊಡಬಾರದು ನೀವು! ನಮ್ಮ ಇಷ್ಟು ಜಾಹಿರಾತು....ಪ್ರಕಟನೆಗಳೆಲ್ಲ ನಿಷ್ಫಲವಾದವು ನೋಡಿ!"

"ಜಿನಗೌಡರ ಮುಖಾಂತರ ಚೀಟಿ ಬಂತು ಅಂತ ಹತ್ತು ನಿಮಿಷ ಕೊಟ್ಟೆ. ಅವನು ಅರ್ಧ ತಾಸು ಜಡಿವೇ ಬಿಟ್ಟ. ನನ್ನ ಗಂಟೆಯು ಬೆಲೆ ಇದ್ದರಲ್ಲವೇ ಅವನಿಗೆ ?

ಅಧ್ಯಕ್ಷರು ಕಳವಳದಿಂದ ನುಡಿದರು.

"ಜಿನಗೌಡರು ಕರೆದು ತಂದು ಚೆಲೋ ಆರತಿ ಮಾಡಿ ಕಳಿಸಿದರು ತಮ್ಮೂರಲ್ಲಿ !"

ಇನ್ನೊಬ್ಬರು ಜಿನಗೌಡರ ಮೇಲೆ ಮಾತು ಹೊರಳಿಸಿದರು.

"ಪಾಪ! ಅವರಿಗಾದರೂ ಏನು ಗೊತ್ತು, ತಮ್ಮಲ್ಲಿಯ ಹುಡುಗನೂ ಮಾತನಾಡುವ ಎಂದು ಉಬ್ಬಿನಿಂದ ಚೀಟಿ ಅಧ್ಯಕ್ಷರ ಕೈಗೆ ಕೊಟ್ಟರು !"

ಎಂದು ಚೆಂದೂರಿನ ಗೌಡರು ಜಿನಗೌಡರ ಮೇಲಿನ ಕಲಂಕ ವನ್ನು ತೊಡೆಯುಲು ಯತ್ನಿಸಿದರು. ಜಿನಗೌಡ ಮಾವನಲ್ಲವೆ ಅವರಿಗೆ ?

ಇಷ್ಟೆಲ್ಲ ಮಾತು ಕತೆಗಳು ನಡೆದಿದ್ದರೂ ಲಲಿತೆಗೆ ಏನೂ ಅರ್ಥ ವಾಗದು. ಆದರೂ ಮಾತಿನ ಕಡೆಗೆ ಪೂರ್ಣ ಲಕ್ಷ್ಯ ಅವಳು ಇಟ್ಟಿದ್ದಳು. ನಡು ನಡುವೆ ಶ್ರೇಯಾಂಸನ ಚಿತ್ರವೂ ಅವಳ ಕಣ್ಣೆದು ರಿಗೆ ಒಮ್ಮೆ ಸುಳಿದು ಹೋಯಿತು. ಆದರೆ ಅವನಾಗಿರಲಿಕ್ಕಿಲ್ಲ ಎಂದು ಒಮ್ಮೆ ಭಾವಿಸಿದಳು. ಈ ತೂಗಾಟದಲ್ಲಿಯೇ ತನ್ನ ಚೆಂದೂರಿನ ಗೌಡರಿಗೆ ಕೇಳಿಯೇ ಬಿಟ್ಟಳು.

"ಏನಾಯಿತು ಸಭೆಯಲ್ಲಿ ?"

"ಏನಿಲ್ಲ ; ಸಭೆ ಬಹಳ ಚೆನ್ನಾಗಿ ಸಾಗಿದ್ದಿತು, ಮೂರು ನಾಲ್ಕು ಸಾವಿರ ಜನರು ಕೂಡಿದ್ದರು, ಮೂರು ನಾಲ್ಕು ಜನ ವಕೀಲರೂ ಸಾಲಕೊಡುವ ಸಹಕಾರಿ ಯೋಜನೆಯನ್ನು ಬಹು ಚೆನ್ನಾಗಿ ವಿವರಿಸಿ ದ್ದರು....ಆದರೆ ಶ್ರೇಯಾಂಸ ಅಂತ ತಲೆ ತಿರುಕ ಹುಡುಗ ಇದ್ದಾನಲ್ಲ ಅವನು ಮಾತಾಡಿ ನಮ್ಮ ಸಭೆಯನ್ನೆಲ್ಲ....ಕೆಡಿಸಿ ಬಿಟ್ಟ ! ನೂರಾರು

ರೂಪಾಯಿ ಖರ್ಚು ಮಾಡಿಕೊಂಡು ಇಲ್ಲಿ ಬಂದುದೆಲ್ಲ ವ್ಯರ್ಥ ವಾಯಿತು...." ಎಂದು ತನ್ನ ಪ್ರಿಯೆಗೆ ವಿವರಿಸಿದ ಚೆಂದೂರಿನ ಪಟೇಲ.

ಇದಾವುದರ ಕಡೆಗೂ ಲಕ್ಷ್ಯವಿಲ್ಲದೆ ತನ್ನ ಮನೆಗೆ ಬಂದ ಅತಿಥಿ ಗಳ ಸತ್ಕಾರ ಚೆನ್ನಾಗಿ ಆಗಬೇಕೆಂದು ಯತ್ನಿಸುತ್ತಿದ್ದಳು ಅಕ್ಕಾಸಾನಿ. ಅವಳು ಅಡುಗೆಯ ಮನೆಯಲ್ಲಿ ಫಲಹಾರದ ಸಿದ್ಧತೆಯಲ್ಲಿ ಆದುದನ್ನು ಕಂಡು, ಮಗಳಿಗೆ ಅತಿಥಿಗಳನ್ನು ಫಲಹಾರಕ್ಕೆ ಎಬ್ಬಿಸಲು ಸೂಚಿ ಸಿದಳು. ಚೆಂದೂರಿನ ಗೌಡ ಅವಸರದಲ್ಲಿಯೇ ಒಳಗೆ ಹೋಗಿ ಇನ್ನೊಮ್ಮೆ ವ್ಯವಸ್ಥೆಯನ್ನು ನಿರೀಕ್ಷಿಸಿ ಬಂದ ಅಷ್ಟರಲ್ಲಿ ಗೆಲುವಿನ ಮುಖದಲ್ಲಿ ಲಲಿತೆ ಅಭ್ಯಾಗತರನ್ನು ಹೋಗಿ ಸಂದರ್ಶಿಸಿದ್ದಳು.

ಪಾಪ! ಅವಳ ಉತ್ಸಾಹವನ್ನು ಕಂಡು ನಗರದಿಂದ ಹಳ್ಳಿಗೆ ಬಂದ ವಕೀಲ ಮಹಾಶಯರು ತಮ್ಮ ಗೌರವಕ್ಕಾಗಿ ಎಂದು ಭಾವಿಸಿದರೇನೋ! ಆದರೆ...

ಮರುದಿನ ಊರಲ್ಲೆಲ್ಲ ಶ್ರೇಯಾಂಸನ ಮಾತುಗಾರಿಕೆಯ ಗೌರವವೇ ನಡೆದಿದ್ದಿತು. ಎದುರಿಗೆ ಬಂದವರೆಲ್ಲ ನಾಲ್ಕು ಮಾತು ಮಾತನಾಡಿಸಿ ಶ್ರೇಯಾಂಸನನ್ನು ಅಭಿನಂದಿಸುತ್ತಿದ್ದರು. ಇಲ್ಲಿಯ ವರೆಗೆ ಕೇವಲ ಪುರಾಣಿಕನೆನಿಸಿದ್ದ ಶ್ರೇಯಾಂಸ ಈ ಪ್ರಸಂಗದಿಂದ ಸಾರ್ವಜನಿಕ ವ್ಯಕ್ತಿಯಾದ. ಹಲವು ಜನ ಒಕ್ಕಲಿಗರು ತಂಬಾಕು ಸೇದಲಿಕ್ಕೆ ಕುಳಿತಲ್ಲಿ ತಮ್ಮ ತಮ್ಮಲ್ಲಿ ಮಾತನಾಡಿಕೊಂಡರು.

"ಬಡವರ ಮನೆಯಲ್ಲಿ ಹುಟ್ಟಿದರೂ ಶ್ರೇಯಾಂಸ ಒಬ್ಬ ಊರಿಗೆ ಒಳ್ಳೇ ಹೆಸರು ತರುವಂಥವನಾಗತಾನು...."

"ಈಗ ಬೆಳಗಾಂವಿಯ ತನಕ ಹೋಯ್ತಲ್ಲೋ ಅವನ ಹೆಸರು! ಒಳ್ಳೆ ಒಳ್ಳೆ ಕುರ್ಚಿ ಮೇಲೆ ಕೂಡುವ ವಕೀಲರಿಗೇ ನೀರು ಕುಡಿಸಿಬಿಟ್ಟ ನಿನ್ನೆ....ಸುಮ್ಮನೆ ಅಲ್ಲ!"

"ಆದರೆ ನಮ್ಮೂರೊಳಗೆ ಜನ ಮುಂದೆ ಬರುವದಕ್ಕೇ ಕೊಡುವ

ದಿಲ್ಲೋ !"

"ಈ ನಾಲ್ಕಾರು ಜನ ಮುದುಕರು ಹೋದರೆ ತೀರಿತಲ್ಲ....ಹಿಂದೆ ಯಾರು ಇದ್ದಾರೆ ಊರ ಹಾಳಿಗೆ ಹಚ್ಚುವವರು...."

ಒಕ್ಕಲಿಗರ ಈ ಮಾತುಗಳು ಸಟೆಯಾಗಿರಲಿಲ್ಲ. ನಾಲ್ಕಾರು ಜನ ಹಿರಿಯರು ಸೇರಿ ಆರೇಳು ಸಾವಿರ ಜನರಿರುವ ಊರನ್ನೇ ಆಳುತ್ತಿದ್ದರು. ಊರಲ್ಲಿ ಅವರು ಮಾಡಿದ್ದಕ್ಕೇ ಪ್ರಾಧಾನ್ಯ. ಅವರೆಲ್ಲರೂ ಸಿರಿವಂತರಾಗಿದ್ದರು. ಸಾಮ-ದಾನ-ದಂಡ-ಭೇದಗಳಲ್ಲೆಲ್ಲ ನುರಿತ ಹಿರಿಯರವರು. ಮೇಲಾಗಿ ಊರಲ್ಲಿ ಕಳ್ಳರ-ಕೊಲೆಗಡಕರ-ಪುಂಡರ ಗುಂಪುಗಳನ್ನು ಕಟ್ಟಿಕೊಂಡು ತಮ್ಮ ಕಾರ್ಯಕವನ್ನು ಸಾಗಿಸುತ್ತಿದ್ದರು. ಅದರಿಂದ ಅವರನ್ನು ವಿರೋಧಿಸಿ ಊರ ಸಾರ್ವಜನಿಕರಲ್ಲಿ ಯಾರೂ ಯಶವನ್ನು ಸಂಪಾದಿಸುವಂತಿರಲಿಲ್ಲ. ಹೀಗಿದ್ದೂ ಕೂಡ - ಇದನ್ನಾವುದನ್ನೂ ಅರಿಯದೆ-ಮೊನ್ನಿನ ಸಭೆಯಲ್ಲಿಯ ಪ್ರಸಂಗದಿಂದ ಶ್ರೇಯಾಂಸ ಆ ಹಿರಿಯರ ಮನಸ್ಸನ್ನು ನೋಯಿಸಿದ್ದ. ಸ್ವಾಭಾವಿಕವಾಗಿಯೇ ಆತ ಬಡವರ ಹಿತ ದೃಷ್ಟಿಯಿಂದ ಮಾತನಾಡಿದ್ದ. ಮುಂಚಿತ ಸಿದ್ಧಗೊಳಿಸಿಟ್ಟುಕೊಂಡ ಭಾಷಣವಲ್ಲದಿದ್ದರೂ ಕೂಡ ಒಳ್ಳೇ ಸ್ಫೂರ್ತಿಯುತವಾಣಿಯಾಗಿತ್ತದು. ಸಂಘಟಿತ ರೀತಿಯಿಂದ ಬಡ್ಡಿಯ ವ್ಯವಹಾರವನ್ನು ಆರಂಭಿಸಬೇಕೆಂದಿದ್ದ ಊರಪ್ರಮುಖರಿಗೆ ಅದೊಂದು ದೊಡ್ಡ ಏಟಾಗಿತ್ತು. ಅದರಿಂದ ಶ್ರೇಯಾಂಸನನ್ನು ಬಗ್ಗುಬಡಿಯುವ ಯೋಚನೆಯಲ್ಲಿ ಅವರು ತೊಡಗಿದರು.

ಓದು ಬರಹಗಳಲ್ಲಿಯೇ ಮಗ್ನನಾಗಿದ್ದ-ಆದರ್ಶವಾದಿಯಾದ ಶ್ರೇಯಾಂಸನಿಗೆ ಇದಾವುದರ ಅರಿವೇ ಇರಲಿಲ್ಲ. ತನಗೆ ಸರಿಕಂಡದ್ದನ್ನು ಹೇಳುವುದು, ಮಾಡುವುದು ಅವನ ಸ್ವಭಾವವಾಗಿದ್ದಿತು. ಅದರಿಂದ ಯಾರ ಮನ ನೊಂದೀತು, ಯಾರ ಸ್ಥಾನ ಮಾನಗಳಿಗೆ ಕುಂದು ತಗಲೀತು ಎಂಬುದರ ವಿಚಾರವೇ ಅವನಿಗೆ ಬರುತ್ತಿರಲಿಲ್ಲ. ಊರ ರಾಜಕಾರಣದ ಕಲ್ಪನೆಯೂ ಅವನಿಗೆ ಇರಲಿಲ್ಲ. ಒಳ್ಳೆಯ ಕೆಲಸ

ಮಾಡುವುದು, ಊರಲ್ಲಿ ಸಾರ್ವಜನಿಕ ಕೆಲಸಗಳನ್ನು ನಡೆಯಿಸುವುದು ಇತ್ಯಾದಿಗಳೆಲ್ಲ ಇವನ ಧ್ಯೇಯಗಳಾಗಿದ್ದುವು. ಅದಕ್ಕಾಗಿ ತಾನು ಸಾಲೆಯನ್ನು ಬಿಟ್ಟಿದ್ದರೂ ಏಳನೆಯ ತರಗತಿಯ ವಿದ್ಯಾರ್ಥಿಗಳಿಗೆ ಕನ್ನಡ ಪಾಠ ಹೇಳುವನು. ವಿದ್ಯಾರಣ್ಯ, ಮಹಾವೀರ, ಬಸವಣ್ಣ ಮೊದಲಾದವರ ಜಯಂತಿಗಳನ್ನು ಆಚರಿಸುವನು. ಊರೊಳಗಿನ ಹಳೆಯ ಪುಸ್ತಕಗಳನ್ನೆಲ್ಲ ಕೂಡಹಾಕಿ ಒಂದು ಚಿಕ್ಕ ವಾಚನಾಲಯ ವನ್ನು ಏರ್ಪಡಿಸಿದ್ದ. ಅದಕ್ಕೆ ಊರ ಹಿರಿಯರಿಂದಲೇ ಕೂಡಿದ ಒಂದು ಸಂಚಾಲಕ ಸಮಿತಿಯನ್ನು ಏರ್ಪಡಿಸಿದ್ದ. ಇದಕ್ಕೆಲ್ಲ ಪ್ರಮು ಖರು ತಮ್ಮ ಒಪ್ಪಿಗೆಯನ್ನು ಕೊಟ್ಟಿದ್ದರು. ಆಗಾಗ ಹುಡುಗರನ್ನು ಕಟ್ಟಿಕೊಂಡು ವಂತಿಗೆಯನ್ನು ಕೂಡಿಸಲಿಕ್ಕೆ ಹೋದರೆ ಊರಲ್ಲಿ ಹತ್ತೆಂಟು ರೂಪಾಯಿಗಳು ಕೂಡುತ್ತಿದ್ದುವು. ಅದರಿಂದಲೇ ಮಹಾ ಪುರುಷರ ಜಯಂತಿಗಳೂ ವಾಚನಾಲಯವೂ ನಡೆಯಬೇಕು. ಅದರ ಲ್ಲಿಯೇ ಸ್ವಲ್ಪ ದುಡ್ಡು ಉಳಿಸಿ "ಬೆಳಕು" ಎಂಬ ಕೈ ಬರಹದ ಮಾಸಿಕ ಒಂದನ್ನು ಆರಂಭಿಸಿದ್ದ ಶ್ರೇಯಾಂಸ. ಅದಕ್ಕೆ ಸಂಪಾದಕರಾಗಿರಲು ತನ್ನ ಗುರುಗಳಾದ ಆತ್ಮಾರಾಮರನ್ನು ಕೇಳಿಕೊಂಡಿದ್ದ. ಅವರ ಹೆಸರಿ ನಿಂದ ಸಂಪಾದಕೀಯ ಲೇಖನವನ್ನೂ ಎಲ್ಲವನ್ನೂ ಶ್ರೇಯಾಂಸನೇ ಬರೆಯುತ್ತಿದ್ದನು.

ಮೊನ್ನಿನ ಸಭೆಯ ತರುವಾಯ 'ಬೆಳಕು' ಪತ್ರಿಕೆಯ ಸಂಪಾದಕೀಯವು ಸ್ವಲ್ಪ ಬಿಸಿ ಬಿಸಿಯಾಗಿಯೇ ಇದ್ದಿತು. ಸಭೆಯ ಉದ್ದೇಶ ಕಾರ್ಯಕ್ರಮಗಳನ್ನು ಕುರಿತು ಟೀಕೆ ಟಿಪ್ಪಣಿಗಳನ್ನು ಶ್ರೇಯಾಂಸ ಬರೆದಿದ್ದ. ಊರಲ್ಲಿಯ ಬಡವರ ಸಂಘಟನೆಯ ಸೂಚನೆ ಯನ್ನೂ ಮಾಡಿದ್ದ. ಸಾಲಕೊಡುವ ಸಂಘವನ್ನು ಕಟ್ಟುವದಕ್ಕಿಂತ ಕೂಲಿಕಾರರ ಅಂಗಡಿಯೊಂದನ್ನು ಅವರ ಹಣದಿಂದಲೇ ಆರಂಭಿಸುವ ಯೋಜನೆಯನ್ನು ಹಾಕಿದ್ದ. ಅದನ್ನು ಜನತೆಯ ಮುಂದೆಯೂ ಇಟ್ಟಿದ್ದ. ಪ್ರತಿಯೊಬ್ಬ ಕೂಲಿಯವನೂ ಒಂದೊಂದೇ ರೂಪಾಯಿ

ಕೊಟ್ಟರೆ ಅವರ ಜೀವನಕ್ಕೆ ಅತ್ಯವಶ್ಯವಾದ ವಸ್ತುಗಳ ಒಂದು ಚಿಕ್ಕ ಅಂಗಡಿ ಅವರ ಭಾಂಡವಲದಲ್ಲಿ ಪಡೆಯುವಂತಿದ್ದಿತು. ಇದನ್ನು ಮಾಡಿದರೆ ಜನಸಾಮಾನ್ಯರ ಹಿತವೂ ಆಗುವುದು. ತನಗೊಂದು ಉದ್ಯೋಗವನ್ನು ಕಲ್ಪಿಸಿಕೊಂಡಂತಾಗುವದೆಂದು ಆತ ಭಾವಿಸಿದ್ದ. ಆದರಿಂದ ಕೂಡಲೆ ಆ ಯೋಜನೆಯನ್ನು ಕೈಯಲ್ಲಿ ತಕ್ಕೊಂಡುಬಿಟ್ಟ.

ಈ ಸಂಘದ ಅಂಗಡಿಯ ಯೋಜನೆಯಿಂದ ಊರ ವ್ಯಾಪಾರಿಗಳೂ ಶ್ರೇಯಾಂಸನಿಗೆ ಪ್ರತಿಕಕ್ಷಿಗಳಾಗಿ ನಿಂತರು. ಈಗಾಗಲೇ ಊರಲ್ಲಿ ಗೌಡರೂ, ಸಾವುಕಾರರೂ ಸೇರಿ ಒಂದು ಕಂಪನಿಯ ಅಂಗಡಿಯನ್ನು ನಡೆಯಿಸಿದ್ದರು. ಗೌಡತಿಯ ವರ್ಚಸ್ಸಿನಿಂದ ಅದರ ವ್ಯಾಪಾರವೂ ಚೆನ್ನಾಗಿಯೇ ಸಾಗುತ್ತಿದ್ದಿತು. ಒಂದಕ್ಕೆರಡು ಬೆಲೆ ಕೊಟ್ಟು ಜನಸಾಮಾನ್ಯರು ವಸ್ತುಗಳನ್ನು ಕೊಳ್ಳುತ್ತಿದ್ದರು. ಇದರಿಂದ ಕಂಪನಿಯ ಅಂಗಡಿಗೆ ತುಂಬ ಲಾಭವಿದ್ದಿತು. ಅವರ ಹೊಟ್ಟೆ ತುಂಬಿ ಉಳಿದಮೇಲೆ ಅನ್ಯ ವ್ಯಾಪಾರಿಗಳು ತಮ್ಮ ಪಾಲಿನ ಲಾಭವನ್ನು ಹೀರುತ್ತಿದ್ದರು. ಇವರೆಲ್ಲರಿಗೂ ಶ್ರೇಯಾಂಸನ ಕೂಲಿಕಾರರ ಸಂಘಟನೆಯು ಹುಚ್ಚು ಹಿಡಿಸಿತು. ಅವರು ಚಿಕ್ಕಪುಟ್ಟ ಒಕ್ಕಲಿಗರಿಗೂ ಕೂಲಿಕಾರರಿಗೂ ಸುಗ್ಗಿ ಬರುವವರೆಗೆ ಉದ್ದರಿಯಿಂದ ಜೀನಸುಗಳನ್ನು ಮಾರಿ, ಒಂದಕ್ಕೆರಡು ಬರೆದಿಟ್ಟು, ಅವರಲ್ಲಿಂದ ಕಾಳುಕಡ್ಡಿಗಳನ್ನು ಉದ್ದರಿಯ ದಣದಲ್ಲಿ ಕೊಂಡು, ಮೂರೂ ವೈಯಿಂದ ಲಾಭವನ್ನು ಪಡೆಯುತ್ತಿದ್ದರು. ಇದಕ್ಕೆಲ್ಲ ಶ್ರೇಯಾಂಸ ಅಡ್ಡ ಬರುವನೆಂದು ಅವರು ಭಾವಿಸಿದರು. ಈ ಸಲದ 'ಬೆಳಕು' ಪತ್ರಿಕೆಯ ಸಂಚಿಕೆಯು ಅವರನ್ನೆಲ್ಲ ಜಾಗೃತಗೊಳಿಸಿತು.

ಪಂತರು ಮೊದಲು ವಾಚನಾಲಯದಿಂದ 'ಬೆಳಕು' ಪತ್ರಿಕೆಯನ್ನು ತರಿಸಿ ಲಕ್ಷ್ಯಗೊಟ್ಟು ಓದಿಕೊಂಡರು. ಆಮೇಲೆ ಗೌಡರಿಗೂ ಇನ್ನಿತರ ಹಿರಿಯರಿಗೂ ಓದಿ ಹೇಳಿದರು. ಕೆಲವು ಸಂಗತಿಗಳನ್ನು ವಿವರಿಸಿದರು. ಇದನ್ನು ತಡೆಯುವದು ಜಿನಗೌಡರ ಕರ್ತವ್ಯವೆಂದು

ಸೂಚಿಸಿದರು. ಗೌಡರೇ ಮೊದಲು ಶ್ರೇಯಾಂಸನನ್ನು ತಮ್ಮ ಮಕ್ಕಳಿಗೆ ಪಾಠ ಹೇಳಲಿಕ್ಕೆ ಕರೆದು, ಪುರಾಣ ಹೇಳಲಿಕ್ಕೆ ಆಸ್ಪದ ಮಾಡಿಕೊಟ್ಟು, ಶ್ರೇಯಾಂಸನ ಸಾರ್ವಜನಿಕ ಜೀವನಕ್ಕೆ ಮುನ್ನುಡಿ ಬರೆದವರಾಗಿದ್ದರು. ಈಗ ಅವರ ಜೀವನಕ್ಕೇನೇ ವಿಮರ್ಶೆಯನ್ನು ಬರೆಯಲು ಶ್ರೇಯಾಂಸ ಮುಂದೆ ಬಂದಿದ್ದ. ಅದರಿಂದ ಊರ ಹಿರಿಯರಿಗೆ ಶ್ರೇಯಾಂಸನಿಂದ ಒದಗುವ ಆಪತ್ತನ್ನು ಕಳೆಯುವುದು ಗೌಡರ ಕರ್ತವ್ಯ ಕರ್ಮವಾಗಿದ್ದಿತು. ಅದರ ಅರಿವನ್ನು ಉಳಿದವರು ಈಗ ಮಾಡಿಕೊಟ್ಟರು.

"ಹನುಮಂತನ ಮುಂದೆ ಹಕ್ಕಿಯ ಹಾರಾಟವೆ? ಹೂಂ!"

ಎಂದು ಹೂಂಕರಿಸಿಯೇ ಅಲ್ಲಿಂದ ಗೌಡರು ಮನೆಗೆ ತೆರಳಿದರು. ಅವರು ಮನದಲ್ಲಿ ಶ್ರೇಯಾಂಸನ ಸದ್ದನ್ನು ಪೂರ್ಣವಾಗಿ ಅಡಗಿಸುವ ನಿಶ್ಚಯವನ್ನೇ ಆಗ ಮಾಡಿದ್ದರು.

೧೭

ಇಂದು ಲಲಿತಾ, ಆತ್ಮಾರಾಮ ಗುರುಗಳು, ಬಾಳಪ್ಪ ಮೂವರೂ ಶ್ರೇಯಾಂಸನನ್ನು ಕಾಣಲಿಕ್ಕೆ ಆತುರಗೊಂಡಿದ್ದರು. ಲಲಿತೆಗೆ ಶ್ರೇಯಾಂಸನನ್ನು ಅಭಿನಂದಿಸಬೇಕಾಗಿದ್ದಿತು. ಸಭೆಯಲ್ಲಿ ಅವನು ಪಡೆದ ವಿಜಯ, 'ವಿಜಯಸಾಮ್ರಾಜ್ಯ'ದಲ್ಲಿ ಆತ ತೋರಿಸಿದ ಕಲೆ ಗಾರಿಕೆಗಳನ್ನು ಬಾಯಿತುಂಬ ಹೊಗಳಬೇಕಾಗಿದ್ದಿತವಳಿಗೆ. ಆದರೆ ಅವಳ ಮನೆಯ ಕಡೆಗೇ ಶ್ರೇಯಾಂಸ ಬರುವ ಭರವಸೆ ಇರಲಿಲ್ಲ. ಅಂದು ಹೋದವ ತಿರುಗಿ ಅಕ್ಕಾಸಾನಿಯ ಮನೆಯ ಮುಂದಿನಿಂದ ಕೂಡ ಆತ ಹಾಯ್ದಿರಲಿಲ್ಲ. ಅವಳು ದಾರಿಯನ್ನು ನಿರೀಕ್ಷಿಸಿ ನಿರೀಕ್ಷಿಸಿ ಬೇಸತ್ತಿದ್ದಳು. ತನ್ನ ನಾಟಕದ ಹಸ್ತಪ್ರತಿಯನ್ನಾದರೂ ಒಯ್ಯಲಿಕ್ಕೆ ಬರಬಹುದೆಂದು ಅವಳು ನಿರೀಕ್ಷಿಸಿದ್ದಳು. ಅದೂ ನಿಷ್ಫಲವಾಯಿತು. ಕೊನೆಗೆ ಲಜ್ಜೆಯನ್ನು ತೊರೆದು, ಆತ್ಮರಾಮ ಮಾಸ್ತರರ ಮನೆಗೆ ಹೇಳಿ ಕಳುಹಿಸಿದಳು. ಅಲ್ಲಿಂದಲೂ ಉತ್ತರ ಬಂದಿತು : 'ಈಗ ಮೂರು ನಾಲ್ಕು ದಿನಗಳಿಂದಲೂ ಶ್ರೇಯಾಂಸನನ್ನು ಕಂಡೇ ಇಲ್ಲವೆಂದು, ಎಲ್ಲಿ ಆದರೂ ದೊರಕಿದರೆ ಕಳುಹಿಸಿಕೊಡಲಿಕ್ಕೆ' ಅವರು ಹೇಳಿದರು.

ಬಾಳಪ್ಪ ಒಂದೆರಡು ಸಲ ಆತ್ಮಾರಾಮರ ಮನೆಗೂ ವಾಚನಾಲಯದ ಕಡೆಗೂ ಹೋಗಿ ಬಂದಿದ್ದ. ಅಲ್ಲೆಲ್ಲಿಯೂ ಶ್ರೇಯಾಂಸನ ಸುಳಿವೇ ಇರಲಿಲ್ಲ. ಕೆರಳಿದ ಕೇಸರಿಯಂತೆ ಕೆಂಗಣ್ಣುಗಳನ್ನು ಮಾಡಿಕೊಂಡು ಮಗನ ದಾರೀ ಕಾಯುತ್ತಿದ್ದ. ಪೇಟೆಯಲ್ಲಿ ಒಂದಿಬ್ಬರ ಹತ್ತರ ಮಗನ ವಿಷಯವನ್ನು ಕೇಳಿದ.

ಅವರು ವ್ಯಂಗ್ಯ ಸ್ವರದಲ್ಲಿ ಉತ್ತರ ಕೊಟ್ಟರು :—

"ಸಂಘದ ಅಂಗಡಿಯೊಳಗೆ ಇಲ್ಲಾ ?"

"ಯಾವ ಅಂಗಡಿ ?"

"ಊರೊಳಗಿನ ಬಡವರಿಗಾಗಿ ನಿನ್ನ ಮಗ ಅಂಗಡಿ ಹಾಕಿದ್ದಾನಂತಲ್ಲಲ್ಲ !"

ಈ ಮಾತುಗಳಿಂದ ಬಾಳಪ್ಪನ ಹೃದಯ ಮತ್ತಿಷ್ಟು ಕಾವೇರಿತು. ನಾವು ಯಾರಿಂದಲೂ ಕೆಟ್ಟ ಹೆಸರು ಇಟ್ಟು ಕೊಂಡವರಲ್ಲ, ಈ ಮಗನಿಂದ ಇಂಥ ಮಾತು ಕೇಳುವ ಪ್ರಸಂಗ ಬಂದಿತಲ್ಲ ಎಂದು ನೊಂದುಕೊಂಡ. ಅದೇ ವಿಚಾರದಲ್ಲಿ ಶ್ರೇಯಾಂಸನಿಗೆ ಊರಲ್ಲಿ ಒಂದು ಚಿಕ್ಕ ಅಂಗಡಿಯೊಂದನ್ನು ಇಟ್ಟು ಕೊಡಬಾರದೇಕೆ? ಎಂಬ ಪ್ರಶ್ನೆಯೂ ಅವನ ಮನದಲ್ಲಿ ಸುಳಿದು ಹೋಯಿತು. ಆದರೆ ವ್ಯಾಪಾರಕ್ಕೆ ಅನುಭವಬೇಕು, ನಾಲ್ಕು ಜನರನ್ನು ಕಾಯ್ದುಕೊಂಡು ಹೋಗಲಿಕ್ಕೆಬೇಕು. ಆ ಗುಣಗಳು ಶ್ರೇಯಾಂಸನಲ್ಲಿ ಇಲ್ಲವಲ್ಲ! ಏನು ಮಾಡಬೇಕು? ಊರಲ್ಲಿ ಹಿರಿಯರ ವಿರೋಧ ನನಗೇಕೆಬೇಕು. ಹೇಗಾದರೂ ನಾಲ್ಕು ದಿನ ಬಾಳುವೆ ಮಾಡಿ ಹೋಗುವದನ್ನು ಬಿಟ್ಟು, ಈ ಎಲ್ಲ ಉಸಾಬರಿ ಏತಕ್ಕೆಬೇಕು, ಇದು ಪ್ರಪಂಚಕರ ಲಕ್ಷಣವೇ ಅಲ್ಲ. ಹೊಟ್ಟೆಗೊಂದು ಹಾಕುವದಲ್ಲದೆ ಈ ಊರ ಜಗಳವನ್ನೆಲ್ಲ ಇವನ ಸಲುವಾಗಿ ಕೇಳಬೇಕು ನಾವು. ಮುಪ್ಪಿನ ಕಾಲಕ್ಕೆ ಶ್ರೇಯಾಂಸನಿಂದ ಸುಖ ಹತ್ತುವ ಲಕ್ಷಣವೇನೂ ತೋರದು.

ಇರಲಿ; ನಾಲ್ಕು ದಿನಗಳಿಂದ ಮನೆಗೂ ಬಂದಿಲ್ಲವಲ್ಲ ಶ್ರೇಯಾಂಸ! ಎಲ್ಲಿ ಹೋದನೋ! ಮಾಸ್ತರರ ಮನೆಗೂ ಬಂದಿಲ್ಲವಂತೆ. ಈ ದುಷ್ಟರು ಸೇರಿ ನನ್ನ ಮಗನಿಗೆ ಏನಾದರೂ ಮಾಡಿರಬೇಕೆ? ಊರ ಜನ ಬಹಳ ಕೆಟ್ಟ! ಅದರಲ್ಲಿ ಸಭೆಯಲ್ಲಿ ಬೇರೆ ಹಾಗೆ ಮಾತನಾಡಿದ್ದ. ಎಲ್ಲರೂ ಅವನ ಮೇಲೆ ಉರಿಯುತ್ತಿದ್ದರು!

ಈ ದಿಸೆಯಲ್ಲಿ ಮನಸ್ಸು ಓಡಿದಾಗ ಬಾಳಪ್ಪ ತುಂಬ ಅಧೀರನಾಗುವ. ಹೇಗಾದರೂ ಮಗನು ಮನೆಗೆ ಬಂದರೆ ಸಾಕು. ಅವನಿಗೆ

ಏನೂ ಅನ್ನದೆ ಆಡದೆ ಮನೆಯಲ್ಲಿ ಕರೆದುಕೊಳ್ಳುವೆನೆಂದು ಹಾರೈಸುವನು.

ಸರಸವ್ವನಂತೂ ಮಗನು ಮನೆಗೆ ಸುಖ ರೂಪದಿಂದ ಬಂದರೆ ಪದ್ಮಾವತಿಯ ಮುಂದೆ ತುಪ್ಪದ ದೀವಿಗೆಯನ್ನು ಉರಿಸುವುದಾಗಿ ಹೇಳಿದ್ದಳು. ಹಗಲಿರುಳೂ ಮಗನ ಚಿಂತೆಯಲ್ಲಿ ಊಟವನ್ನೂ ಕೂಡ ತೊರೆದಿದ್ದಳು ತಾಯಿ! ಸುಂದರವ್ವನ ಹೃದಯವೂ ಸೋದ ರಳಿಯನಿಗಾಗಿ ಒಳಗೇ ಕೊರೆಯುತ್ತಿದ್ದರೂ ಅವಳು ಬಾಯಿಂದ ಆಡಿ ತೋರಿಸುತ್ತಿರಲಿಲ್ಲ. ಪದ್ಮಪ್ಪನೂ ಕೆಲವು ದಿನಗಳಿಂದ ಊರಲ್ಲಿ ಇರದುದರಿಂದ ಮನೆಯು ಭಣಭಣವಾಗಿದ್ದಿತು. ಮನೆತನದ ಕಣ್ಣು ಕಳೆದಂತಾಗಿದ್ದಿತು.

ಆ ದಿನ ಮಧ್ಯಾಹ್ನ ಶ್ರೇಯಾಂಸನಿಗೂ ಗೌಡರಿಗೂ ಸ್ವಲ್ಪ ಬಿಸಿ ಬಿಸಿಯಾಗಿಯೇ ಮಾತು ನಡೆಯಿತು. ತಮ್ಮ ಹುಡುಗರಿಗೆ ಇಂದಿನಿಂದ ಪಾಠ ಹೇಳಲಿಕ್ಕೆ ಬರಬೇಡವೆಂದೂ ಸ್ಪಷ್ಟವಾಗಿ ಹೇಳಿದರು ಗೌಡರು. ಶ್ರೇಯಾಂಸನಿಗೆ ಇದರಿಂದ ಕೆಲಸವೊಂದು ಹಗು ರಾದಂತೆಯೇ ಆಯಿತು. ಅವನು ಗೌಡರ ಮಕ್ಕಳಿಗೆ ದುಡ್ಡು ತಕ್ಕೊಂಡೇನೂ ಪಾಠ ಹೇಳುತ್ತಿರಲಿಲ್ಲ. ಆದರೂ ತಂದೆಯಂತೆ ಮಕ್ಕಳೂ ಆಗ ಬಾರದೆಂದು ಅವನ ಶಿಕ್ಷಣದ ಉದ್ದೇಶವಿದ್ದಿತು. ಊರ ಗೌಡ ಒಳ್ಳೆಯವನಿದ್ದರೆ ಊರೂ ಒಳ್ಳೆಯದಾಗುವದೆಂದು ಅವನು ಯೋಚಿಸಿ ಪಾಠವನ್ನು ಬೋಧಿಸುತ್ತಿದ್ದ. ಹುಡುಗರಿಗೆ ಆಗಾಗ ಚಿಕ್ಕ ಚಿಕ್ಕ ಪುಸ್ತಕಗಳನ್ನು ಓದಲು ಕೊಡುವನು, ಕತೆ ಹೇಳುವನು, ತಾನು ಬರೆದುದನ್ನು ಓದಿ ತೋರಿಸುವನು. ಹೀಗೆ ಅವರ ಒಲವನ್ನು ಸಾಹಿತ್ಯ ಕಲೆಗಳ ಕಡೆಗೆ ಆಕರ್ಷಿಸಿ ಕೊಳ್ಳುವನು, ಕಲಾಭಿರುಚಿಯನ್ನು ಉಂಟುಮಾಡುವನು, ಮಾನವತೆಯ ಪಾಠ ಬೋಧಿಸುವನು ಈ ಕಾರ್ಯ ನಿಂತಿತೆಂದು ಶ್ರೇಯಾಂಸ ತುಂಬ ನೊಂದುಕೊಂಡ. ಗೌಡನ ಮಕ್ಕಳೂ ನೊಂದುಕೊಂಡರು. ಆದರೆ

ಉಪಾಯವಿರಲಿಲ್ಲ. ಶ್ರೇಯಾಂಸನ ಕೂಡ ಮಾತನ್ನು ಕೂಡ ಆಡಕೂಡದೆಂದು ಗೌಡರು ಮಕ್ಕಳಿಗೆ ಕಟ್ಟಪ್ಪಣೆ ಮಾಡಿದ್ದರು.

ಅಂದು ಗೌಡರ ಮಾತಿನಿಂದ ಶ್ರೇಯಾಂಸನಿಗೆ ನೋವು ಸಿಟ್ಟುಗಳು ಕೂಡಿಯೇ ಉಂಟಾಗಿದ್ದುವು. ಪಾಠ ತಪ್ಪಿದುದಕ್ಕೆ ನೋವುಂಟಾಗಿದ್ದರೆ ಅಲ್ಲದ ಸಲ್ಲದ ಆರೋಪಗಳನ್ನು ಕೇಳಿ ಸಿಟ್ಟು ಉಂಟಾಗಿದ್ದಿತು. ಆದರೂ ತಡೆದುಕೊಂಡು ಆತ್ಮನಿರೀಕ್ಷಣೆ ಮಾಡಿಕೊಳ್ಳಬೇಕೆಂದ ಶ್ರೇಯಾಂಸ. ಅದಕ್ಕಾಗಿ ಆಶ್ರಮದ ದಾರಿಯನ್ನು ಹಿಡಿದ. ಆವನ ಮನಸ್ಸಿಗೆ ನೋವು-ಆಘಾತಗಳು ಉಂಟಾದಾಗಲೆಲ್ಲ ಅವನು ಹೋಗುವದು ಆಶ್ರಮದ ಕಡೆಗೇನೇ. ಅಲ್ಲಿ ತೋಟದಲ್ಲಾಗಲಿ, ಬಾವಿಯ ಕಟ್ಟೆಯ ಮೇಲಾಗಲಿ ಕುಳಿತು, ಏಕಾಂತದಲ್ಲಿ ವಿಚಾರಿಸಿ ಯಾವುದಾದರೊಂದು ನಿರ್ಣಯಕ್ಕೆ ಬರುವುದು ಅವನ ನಿತ್ಯದ ರೂಢಿಯಾಗಿದ್ದಿತು. ನೊಂದ ಮಗುವನ್ನು ತನ್ನ ಉಡಿಯಲ್ಲಿ ಇಟ್ಟುಕೊಂಡು ಸಂತೈಸುವ ಶಕ್ತಿ ಆ ಪ್ರಕೃತಿ ಮಾತೆಗೇನೇ ಇತ್ತು. ಅವಳ ಅಕ್ಕರತೆಯನ್ನು ಶ್ರೇಯಾಂಸ ಎಂದೂ ಕಳೆದುಕೊಂಡಿರಲಿಲ್ಲ. ಅವಳ ಸನ್ನಿಧಿಯಲ್ಲಿ ಎಷ್ಟೋ ಹೊತ್ತನ್ನು ಅವನು ಕಳೆಯುತ್ತಿದ್ದ. ಆಗ ಮನೆ ಮಠಗಳನ್ನೆಲ್ಲ ಮರೆತು ಬಿಡುತ್ತಿದ್ದ. ಚಿಂತೆ ಬೇಸರಗಳನ್ನೆಲ್ಲ ಕಳೆದುಕೊಳ್ಳುತ್ತಿದ್ದ, ನವ ನವೀನ ಚೈತನ್ಯವನ್ನು ಹೊಂದುತ್ತಿದ್ದ. ಅದಕ್ಕಾಗಿ ಇಂದೂ ಕೂಡ ಆಶ್ರಮದ ತೋಟದಲ್ಲಿ ಹೋಗಿ, ಒಂದು ಕಲ್ಲಿನ ಮೇಲೆ ಸುಮ್ಮನೆ ಕುಳಿತುಬಿಟ್ಟ.

ಎದುರಿಗೊಂದು ಚಿಕ್ಕ ತೆಂಗಿನ ತರು. ಮಗ್ಗುಲಿಗೆ ಗುಲಾಬಿಯ ತಂಟಿ. ಹಿಂದೆ ಮಲ್ಲಿಗೆಯ ಮಂಟಪ. ನೆಲಕ್ಕೆ ಹಾಸಿರುವ ಹುಲ್ಲು ಎತ್ತ ನೋಡಿದತ್ತ ಕಣ್ಣಿಗೆ ಹಬ್ಬ, ಹಸಿರು. ಶ್ರೇಯಾಂಸನ ಮನಸ್ಸು ಒಂದುಕ್ಷಣ ಅರಳಿತು. ಆದರೆ ಮರುಕ್ಷಣದಲ್ಲಿಯೇ ಮುದುರಿಕೊಂಡಿತು. ಈ ನಿಸರ್ಗದಲ್ಲಿಯೂ ಅವು ಅವುಗಳ ರೀತಿಯಲ್ಲಿ ಅವಕ್ಕೆ ಬೆಳೆಯಲು ಅವಕಾಶ ಕೊಟ್ಟಿಲ್ಲವಲ್ಲ ಮಾನವ—ಎಂದುಕೊಂಡ ಶ್ರೇಯಾಂಸ.

ಹುಲ್ಲು ಹೆಚ್ಚು ಬೆಳೆದರೆ ಕತ್ತರಿಸಿ ಹಾಕುವರು. ಮಲ್ಲಿಗೆಯನ್ನು ಕಟ್ಟಿ ತಮಗೆ ಬೇಕಾದಂತೆ ಕಮಾನುಮಾಡಿಕೊಂಡಿದ್ದಾರೆ, ಗುಲಾಬಿಯ ಟೊಂಗೆಗಳನ್ನು ಕಡಿದಿದ್ದಾರೆ. ಇವಕ್ಕೆಲ್ಲಿದೆ ಸ್ವಾತಂತ್ರ್ಯ? ತೆಂಗಿನ ಗಿಡವೊಂದು ಮಾತ್ರ ತನ್ನ ಮನಸ್ಸಿಗೆ ಬಂದಂತೆ ಬೆಳೆಯುತ್ತಿದೆ. ತನ್ನ ಗರಿ ಬೀಸಿ ಆಕಾಶದಲ್ಲಿ ನಿಂತಿದೆ, ನಿಲ್ಲಬಲ್ಲದು. ಆದರೆ ಅದನ್ನೂ ಬೆಳೆಯ ಬೇಕು, ಬಿರುಸಾಗಬೇಕು. ಮೃದುತ್ವಕ್ಕೆ ಈ ಲೋಕದಲ್ಲಿ ಬದುಕೇ ಇಲ್ಲ. ಅದನ್ನು ಸಿಕ್ಕ ಸಿಕ್ಕವರು ಬಂದು ಬಗ್ಗಿಸುವವರೇ. ತಮ್ಮ ಸುಖಕ್ಕೆ ಬಗ್ಗುವಂತೆ ಮಾಡಿಕೊಳ್ಳುವರೇ. ಬಗ್ಗದಿದ್ದರೆ ಕಿತ್ತಿಹಾಕಿ ಬಿಡುವರು. ಇದೇ ಬಾಳು ಎಲ್ಲೆಡೆಗೂ ನಡೆದಿದೆಯಲ್ಲ ........ !

ಏನೋ ಹಿಂದೆ ಸರಸರ ಸದ್ದಾಯಿತು. ಶ್ರೇಯಾಂಸ ಹೊರಳಿ ನೋಡಿದ. ಮಲ್ಲಿಗೆಯ ಬಳ್ಳಿಯಲ್ಲಿ ಚಿಕ್ಕ ಹಾವಿನ ಮರಿಯೊಂದು ಹೋಯಿತು ಅದು ಅವನ ವಿಚಾರ ಚಕ್ರಕ್ಕೊಂದು ಹೊಸ ದಿಶೆಯನ್ನೇ ಒದಗಿಸಿತು. ಮಾನವನ ಸುಖಕ್ಕಾಗಿ ಮಲ್ಲಿಗೆಯು ಮಣಿಸಿ ದಂತೆ ಬಗ್ಗಿದ್ದರೂ ತನ್ನಲ್ಲಿ ಮಾನವನ ಜೀವಿತವನ್ನೇ ಹಾಳುಮಾಡುವ ಹಾವನ್ನೂ ಇಟ್ಟುಕೊಂಡಿರುವುದಲ್ಲ ಗುಲಾಬಿಗೂ ಮುಳ್ಳುಗಳಿವೆ. ಪ್ರತೀಕಾರ ಶಕ್ತಿ ಬಲವಾಗಿದ್ದರೆ — ಒಟ್ಟುಗೂಡಿದರೆ — ಚಿಕ್ಕವರೂ ದೊಡ್ಡವರನ್ನು ಎದುರಿಸಿ ಗೆಲ್ಲಬಲ್ಲರು.

ಆಗ ಮಹಾತ್ಮರ ಆತ್ಮಕತೆಯ ಅನೇಕ ದೃಶ್ಯಗಳು ಶ್ರೇಯಾಂಸನ ಮನಪಟದುರಿಗೆ ಸುಳಿದು ಹೋದವು. ಆದರೆ ಹೋರಾಟ ಎಲ್ಲಿ ತನ್ನೆದುರಿಗೆ ನಿಂತಿದೆ, ಅದು ಯಾವ ಸ್ವರೂಪದಲ್ಲಿದೆ, ಅದರಲ್ಲಿ ಭಾಗ ವಹಿಸಲು ತನ್ನಲ್ಲಿ ಎಂಥ ಶಕ್ತಿಯಿದೆ ಇದಾವುದರ ಸ್ಪಷ್ಟ ಅರಿವೂ ಅವನಿಗೆ ಆಗದೆ ಹೋಯಿತು, ಮನಸ್ಸು ಉದ್ವಿಗ್ನಗೊಂಡಿತು.

ಇನ್ನೂ ಎಷ್ಟು ಹೊತ್ತು ಹಾಗೇ ಶ್ರೇಯಾಂಸ ಕುಳಿರುತ್ತಿದ್ದನೊ ಏನೋ. ಆದರೆ ಆಶ್ರಮದ ವ್ಯವಸ್ಥಾಪಕರು ಅವನನ್ನು ಹುಡುಕುತ್ತ ಬಂದು ಒಂದು ಪತ್ರವನ್ನು ಅವನ ಕೈಗೆ ಕೊಟ್ಟರು. ಸ್ವಾದ್ವಾದ

ಕೇಸರಿಗಳೂ, ಅಭಿನವ ಸಮಂತ ಭದ್ರರು ಆದ ಶ್ರೀ. ಪಾಯಸಾಗರ ಮುನಿಗಳು ಜುಗುಳದಿಂದ ಆಶೀರ್ವಾದ ಪೂರ್ವಕವಾಗಿ ಕಾಗದ ಬರೆಯಿಸಿದ್ದರು. ಅದರಲ್ಲಿ ಶ್ರೇಯಾಂಸನಿಗೆ ಕೂಡಲೇ ಅತ್ತ ಬರಲಿಕ್ಕೆ ತಿಳಿಸಿದ್ದರು. ಅವರ ದರ್ಶನಕ್ಕೇನೇ ಪದ್ಮಪ್ಪನೂ ಈಗ ನಾಲ್ಕಾರು ದಿನಗಳ ಹಿಂದೆಯೇ ಹೋಗಿದ್ದ. ಆ ಕಾಗದವನ್ನು ನೋಡಿ ಶ್ರೇಯಾಂಸನಿಗೂ ಕೂಡ ಮುನಿಗಳ ದರ್ಶನ ತಕ್ಕೊಳ್ಳುವ ತೀವ್ರ ಇಚ್ಛೆಯುಂಟಾಯಿತು. ಇಂಥ ಅಶಾಂತ ಮನಸ್ಥಿತಿಯಲ್ಲಿ ಮುನಿಗಳ ಸಹವಾಸ ಅವಶ್ಯವೆಂದು ಭಾವಿಸಿ ಹೊರಟೇಬಿಟ್ಟ. ಆಶ್ರಮದ ಸಂಚಾಲಕರು ಎತ್ತಿನ ಬಂಡಿಯನ್ನು ಹೂಡಿ ಸಿದ್ಧಗೊಳಿಸಿದ್ದರು. ಅವರಿಗೂ ಬರಲಿಕ್ಕೆ ಮುನಿಗಳು ತಿಳಿಸಿದ್ದರು. ಅದರಿಂದ ಶ್ರೇಯಾಂಸನ ಮನೆಗೆ ಹೇಳೆಂದು ಒಬ್ಬ ವಿದ್ಯಾರ್ಥಿಗೆ ಹೇಳಿ ಹೋಗಿಬಿಟ್ಟರು.

ಅಲ್ಲಿ ನಯಸೇನ ಮುನಿಗಳ ಧರ್ಮಾಮೃತದ ವಾಚನ ಶ್ರೇಯಾಂಸನಿಗಾಗಿ ಕಾದು ಕುಳಿತಿದ್ದಿತು. ಅದನ್ನು ಶ್ರೇಯಾಂಸನಿಂದ ಓದಿಸಿ ಕೇಳಬೇಕೆಂದು ಮುನಿಗಳ ಆಶೆ. ಶ್ರೇಯಾಂಸನ ಪುರಾಣ ಕಥನದ ಕೀರ್ತಿಯು ಈಗಾಗಲೇ ಸುತ್ತಲಿನ ಹಳ್ಳಿಗಳಲ್ಲೆಲ್ಲ ಹಬ್ಬಿದ್ದಿತು. ಅದು ಮುನಿಗಳ ಕಿವಿಗಳಿಗೂ ಮುಟ್ಟಿದ್ದಿತು. ಮೇಲಾಗಿ ಪದ್ಮಪ್ಪನ ಬಾಯಿಂದ ಅಳಿಯನ ಪ್ರಶಂಸೆಯನ್ನು ಕೇಳಿದ ಮೇಲೆ ಆಚಾರ್ಯರು ನಿರ್ಧರಿಸಿಯೇಬಿಟ್ಟರು. ಅಂದ ಮೇಲೆ ಕೇಳುವುದೇನು. ಮಾವ ಅಳಿಯಂದಿರು ಕೂಡಿ ನಾಲ್ಕಾರು ದಿನ ಜುಗುಳದಲ್ಲಿ ಸ್ವಾಮಿಗಳ ಸನ್ನಿಧಿಯಲ್ಲಿ ನಿಂತರು. ಊರು ಮನೆಗಳನ್ನು ಮರತೇಬಿಟ್ಟರು !

ಇತ್ತ ಊರಲ್ಲಿ ಕ್ಷಣ ಕ್ಷಣಕ್ಕೂ ಪರಿಸ್ಥಿತಿ ಬದಲಾಗುತ್ತ ಹೋಯಿತು. ಗೌಡರು ಆತ್ಮರಾಮ ಮಾಸ್ತರರನ್ನು ಕರೆಯಿಸಿ 'ಬೆಳಕು' ಪತ್ರಿಕೆಯನ್ನು ಅವರ ಮುಂದೆ ಒಗೆದು,

"ಇದನ್ನೇನು ನಡೆಯಿಸಿರುವಿರಿ ಮಾಸ್ತರರೇ ?"

ಎಂದು ಕೇಳಿದರು. ಮಾತು ಸೌಜನ್ಯದ ಸೀಮೆಯನ್ನು ಮೀರಿದಂತೆ

ಇರದಿದ್ದರೂ ಧ್ವನಿ ಮಾತ್ರ ಅಸಹ್ಯವಾಗಿತ್ತು.

"ಏನೋ ಹುಡುಗರು ಕೈಬರಹದ ಪತ್ರಿಕೆ ಆರಂಭಿಸಿದ್ದಾರೆ ...." ಆತ್ಮರಾಮರ ಮಾತನ್ನು ನಡುವೆಯೇ ತಡೆದು ಗೌಡರು ನುಡಿದರು :

"ಹುಡುಗರ ಕಾರಭಾರವೋ ನಿಮ್ಮದೋ ........ ?"

"ಅವರೇ ಬರೆಯುವರು .... ನಾನು ಮಾರ್ಗದರ್ಶಕನಾಗಿರುವೆ"

"ಹೂಂ ! ಇಂಥ ದಾರಿಯನ್ನು ಹೇಳಿಕೊಡಿರಿ, ಅಂದರೆ ತೀರಿತು. ಊರಲ್ಲಿ ಚೆಲೋ ಬೆಳಕು ಬೀಳುವುದು. ಬಣಿವೆಗೆ ಬೆಂಕಿ ಇಟ್ಟು, ಗೋವಿನ ಜೋಳ ಸುಟ್ಟು ತಿನ್ನುವ ರೀತಿಯಿದು .... !"

"ಇದ್ದೀತು, ಮುಂದೇನು ?"

"ಈ ಸಲದ ಲೇಖನ ಓದಿರುವಿರಾ !"

"ಓದಿದ್ದೇನೆ...."

ಓದಿರದಿದ್ದರೂ ಹಾಗೆ ಹೇಳಿದರು ಆತ್ಮಾರಾಮರು. ಸಂಚಿಕೆಯನ್ನು ಬರೆದು ಶ್ರೇಯಾಂಸ ವಾಚನಾಲಯದಲ್ಲಿ ಇಟ್ಟಿದ್ದ. ಅದನ್ನು ಓದುವದಕ್ಕೆ ಆತ್ಮಾರಾಮರು ಹೋಗಿರಲಿಲ್ಲ ಎಂದಾದರೂ ಒಮ್ಮೆ ಓದಿದರಾಯಿತು ಎಂದುಕೊಂಡಿದ್ದರು. ಏನಾದರೂ ತಮ್ಮ ಕೈಯಲ್ಲಿ ಕಲಿತ ಹುಡುಗನೇ ಬರೆದುದಲ್ಲವೇ ? ನಾನೇ ನೀರೆರೆದು ಬೆಳೆಯಿಸಿದ ಸಸಿ !—ಎಂದವರ ಭಾವನೆಯಾಗಿತ್ತು. ಆದರೂ ಸಮಯ ಸಿಕ್ಕಾಗ ಶ್ರೇಯಾಂಸನ ಬರವಣಿಗೆಯನ್ನು ಕಾತುರದಿಂದ ಓದುತ್ತಿದ್ದರು. ಈ ಸಲ ಅವರು ಇನ್ನೂ ಓದದಿದ್ದದೇನೋ ನಿಜವಾಗಿತ್ತು.

"ಹೀಗೇ ಬರೆಯುವುದೆ ? ಆ ಬೆಳಗಾಂವಿಯ ವಕೀಲರ ಬುದ್ಧಿಯೆಲ್ಲಿ ಇವನೆಲ್ಲಿ ?"

ಗದ್ದರಿಸಿದರು ಗೌಡರು.

"ಇರಬಹುದು, ಅವರು ವಕೀಲರಿರಬಹುದು, ಹೆಚ್ಚು ಕಲಿತಿರಬಹುದು. ಆದರೆ ಶ್ರೇಯಾಂಸ ಮನುಷ್ಯನಾದರೂ ಇದ್ದಾನಲ್ಲ ?"

"ಅಂದರೆ ?"

ಗೌಡರ ತುಟಿಗಳು ಅದುರಿದುವು. ಕಣ್ಣು ಕೆಂಪೇರಿದುವು. ಮಾತು ಬಾಯಿಂದ ತಡೆ ತಡೆದು ಹೊರಬಿದ್ದಿತು.

"ಆ....ವ....ರು ?"

ಮಾಸ್ತರರಿಗೆ ತಮ್ಮ ಮಾತು ಬಿರುಸಾಯಿತೆಂದು ತೋರಿತು. ದನಿ ಸರಿಪಡಿಸಿಕೊಂಡು ಹೇಳಿದರು.

"ತಮ್ಮ ಊರಲ್ಲಿ ಅಂಥ ಸಂಘ ಸೋಸಾಯಟಿಗಳು ಇರಬಾರದೆಂದು ಹೇಳುವುದಕ್ಕೆ ಪ್ರತಿಯೊಬ್ಬ ನಾಗರಿಕನಿಗೂ ಹಕ್ಕಿದೆ...."

"ಇದನ್ನು ಹೇಳಲಿಕ್ಕೆ ಶ್ರೇಯಾಂಸ ಯಾರು ?"

ಗೌಡರು ಹುಬ್ಬು ಗಂಟಿಕ್ಕಿ ನುಡಿದರು. ಮಾಸ್ತರರು ಶಾಂತ ರೀತಿಯಲ್ಲಿಯೇ ಉತ್ತರ ಕೊಟ್ಟರು.

"ಹಾಗೆ ಹೇಗೆ ಅನ್ನಲಿಕ್ಕೆ ಬಂದೀತು ಗೌಡರೆ ?"

"ಅಂದರೆ ...ಶ್ರೇಯಾಂಸನೇನು ಗೌಡನೋ, ಕುಲಕರ್ಣಿಯೋ, ವತನದಾರನೋ ? ಇವನಾರು ?"

"ನೀವಿನ್ನೂ ಇನ್ನೂರು ವರ್ಷಗಳ ಹಿಂದೆ ಇದ್ದೀರಿ ಗೌಡರೆ!" ಎಂದು ನಕ್ಕು ನುಡಿದು, ಆತ್ಮಾರಾಮ ಮಾಸ್ತರರು ಕೈಯಲ್ಲಿ 'ಬೆಳಕು' ಪತ್ರಿಕೆಯನ್ನು ಹಿಡಿದುಕೊಂಡು ಹೊರಬಿದ್ದರು. ಅವರ ನಡಿಗೆಯಲ್ಲಿ ಗಂಭೀರತೆಯಿತ್ತು, ಗೌಡರ ಕೂಡ ಮಾತನಾಡುವುದರಲ್ಲಿ ಅರ್ಥವಿಲ್ಲೆಂಬ ಭಾವವಿದ್ದಿತು.

ಆತ್ಮಾರಾಮರ ನಡಿಗೆಯ ರೀತಿಯನ್ನು ಕಂಡ ಗೌಡರಿಗೆ ಅವರಿಂದ 'ಬೆಳಕು' ಪತ್ರಿಕೆಯನ್ನು ತಿರುಗಿ ಬೇಡುವ ಧೈರ್ಯವಾಗಲಿಲ್ಲ. ಆದರೆ ಗೌಡರು ಇಷ್ಟರಿಂದ ಸುಮ್ಮನಾಗಲಿಲ್ಲ. ಊರಲ್ಲಿ ಶ್ರೇಯಾಂಸನಿಗೆ ಯಾವ ಯಾವ ಕೂಲಿಕಾರರೂ ಒಂದೊಂದು ರೂಪಾಯಿ ಕೊಟ್ಟಿರುವರೋ ಅವರನ್ನು ಓಲೇಕಾರರ ಮುಖಾಂತರ ಗೊತ್ತು ಹಚ್ಚಿದರು. ಅವರಲ್ಲಿ ಹತ್ತೆಂಟು ಜನರನ್ನು ಚಾವಡಿಗೆ ಕರೆಸಿದರು. ಅವರಿಗೆ ಮೊದಲು ಚೆನ್ನಾಗಿ ಬೈದರು. ಆಮೇಲೆ

ಮಾತಿಗೆ ಆರಂಭಿಸಿದರು.

"ನಿಮಗೆ ಈ ಉಸಾಬರಿ ಮಾಡಲಿಕ್ಕೆ ಯಾರು ಹೇಳಿರುವರು ?"

"ಏನು ಸರಕಾರ ! ನಮಗೇನೂ ತಿಳಿಯುಲ್ಲ ?" ಅಂಜು ತ್ತಂಜುತ್ತ ಅವರಲ್ಲಿ ಒಬ್ಬ ಎದ್ದು ನಿಂತು ಹೇಳಿದ

"ಹೂಂ ! ತಿಳಿಯುಲ್ಲ ! ಊರೊಳಗೆ ಕಾರಭಾರ ಮಾಡತ ತಿರಗತ ಬರ್ರಿ ! ಇಲ್ಲಿ ಬಂದು ಕಳ್ಳ ಬೆಕ್ಕಿನ ಹಾಗೆ ಕೂಡತ ಬರ್ರಿ !" ತಿರುಗಿ ಗದ್ದರಿಸಿದರು ಗೌಡರು. ಕೂಲಿಕಾರರು ಒಬ್ಬರ ಮುಖವ ನ್ನೊಬ್ಬರು ಹುಳುಹುಳು ನೋಡಿದರು. ತಮ್ಮ ತಮ್ಮಲ್ಲಿ ಆತ್ಮ ನಿರೀಕ್ಷಣೆಯನ್ನೂ ಮಾಡಿಕೊಂಡರು. ತಾವು ಗೌಡರಿಗೆ ಯಾವ ಅನ್ಯಾಯವನ್ನು ಮಾಡಿಲ್ಲವೆಂದು ಭಾವಿಸಿದರು. ಆಮೇಲೆ,

"ಧಣೇರ, ಈ ಮಕ್ಕಳಿಂದ ಏನಾದರೆ ತಪ್ಪ ಆಗಿದ್ದರೆ ಹೇಳಿರಿ ! ಗಲ್ಲಗಲ್ಲ ಬಡಕೊಳ್ಳತೇವಿ. ಕಾಲ ಹಿಡದ ಕ್ಷಮಾ ಕೇಳತೇವಿ." ನಮ್ರತೆಯಿಂದ ಕೈ ಮುಗಿದು ನುಡಿದರು.

"ಹೊಲೆ ಮಾದಿಗ ಸೂಳೆ ಮಕ್ಕಳ ನೀವು....! ನಿಮ್ಮ ಕಡೆಯಿಂದ ಪಾದ ಮುಟ್ಟಿಸಿಕೊಂಡರೆ ಏಳೇಳು ಜನ್ಮಕ್ಕ ನರಕ ತಪ್ಪಿದ್ದಲ್ಲ...."

"ಏನರೀ ! ಬೆಳಗಿನ ಹೊತ್ತಿನೊಳಗೆ ಇಂಥಾ ಮಾತ...." ಬಾಯ್ತೆರೆದ ಕೂಲಿಕಾರನೊಬ್ಬ.

"ಸಾಕು ಬಾಯ್ಮುಚ್ಚು ! ಊರು ಬಿಟ್ಟು ಹೊಲಗೇರಿ ಸೇರಿ ದಂತಲ್ಲೇನು ನಿಮ್ಮ ಕೆಲಸ ಇದು ? ನಾಳೆ ಯಾರೂ ಕೊಯ್ದು ಬೆರಳಿನ ಮೇಲೆ ಉಚ್ಚೀ ಹೊಯ್ಯಲಿಕ್ಕಿಲ್ಲ ತಿಳೀತು ? ಏನೆಂತ ಆ ಮಳ್ಳ ಹುಡುಗನ ಬೆನ್ನ ಹತ್ತಿದೀರಿ ನೀವು ?"

"ನಾವ ಹತ್ತಿಲ್ಲರಿ ದೇವರು ! ನಿಮ್ಮ ಕಾಲ ಬೀಳತೇವಿ ಅವರೇ ನಮ್ಮ ಮನೆ ಮನೆಗೆ ಬಂದು ಒಂದೊಂದು ರೂಪಾಯಿ ಒಯ್ದಿದ್ದಾರು....!" ಗೌಡರ ಮಾತು ಹೊರಟು ತಿಳಿದಂತಾಗಿ ಎಲ್ಲರೂ ಕೈಮುಗಿದು ನುಡಿದರು.

"ನೀವು ಕೊಡದಿದ್ದರೆ ಅವನೇನು ಒಯ್ಯುತಾನೋ ಮಕ್ಕಳಿರಾ!" ಇನ್ನೂ ಏರು ಸ್ವರದಲ್ಲಿಯೇ ಇತ್ತು ಗೌಡರ ಮಾತು.

"ನೀನನ್ನೋದೂ ಸತ್ಯ ಮಾತರಿ ಗೌಡರೆ!"

ಹಿರಿಯನೊಬ್ಬ ಸೋಗೊಟ್ಟ....ಗೌಡರ ಮಾತಿಗೆ. ಆದರೆ ಇನ್ನೂ ಕೆಲವರ ಮುಖದ ಮೇಲೆ ಬೆರಗು, ಗೌಡರ ನಡತೆಯ ಅರ್ಥವೇ ಅವರಿಗೆ ಆಗದಾಗಿತ್ತು. ಕೆಲವು ವೇಳೆ ಸುಮ್ಮನೆ ಕುಳಿತು, ಗೌಡರ ಸಿಟ್ಟು ಇಳಿಮುಖವಾದುದನ್ನು ಕಂಡು, ಮೆಲ್ಲನೆ ನುಡಿದರು.

"ನಿಮ್ಮ ಮನೆಯೊಳಗೇ ಇರತಿದ್ದನಲ್ಲರಿ ಶ್ರೇಯಾಂಸ?"

"ಅದಕ್ಕೇ ನಾವು ರೂಪಾಯಿ ಕೊಟ್ಟೆವರಿ ಗೌಡರ ...."

"ಇಲ್ಲಾದರ ಬಲಿಗೆ ಬೀಳುವ ಮಕ್ಕಳಲ್ಲರಿ ನಾವು!"

"ಹಾಗಾದರೆ ನಮ್ಮ ತಾಯೇನ ಹಡದಾಳರಿ! ಊರೊಳಗೆ ಹುಟ್ಟಿ ನೋಡುತ ಬರುತೀರಲ್ಲ. ಯಾರದ ಪಂಚಾಯಿತಿ? ನಿಮ್ಮದು ಬೆಳ್ಳಗೆ ನಿಮ್ಮದು ಕರಿಯುದು ಅನ್ನುವ ಮಾತು ಅದೇನು ನಮ್ಮದು?"

"ದೇವರ ಕೊಟ್ಟಾನ. ಮೈಯೊಳಗೆ ಶಕ್ತಿ ಅದ. ದುಡಿಯೋದ ಅದ. ತಿನ್ನೋದ ಅದ. ಯಾರ .... ಹೆದರಿಕೆ ಇದೆ ನಮಗೆ?" ತರುಣ ನೊಬ್ಬನ ಈ ಮಾತು ತುಸು ಬಿರುಸಾಯಿತೆಂದು ತೋರಿತೇನೋ ಹಿರಿಯನಿಗೆ. ಅವನು ಅದನ್ನು ತಿದ್ದಿಕೊಳ್ಳಲಿಕ್ಕೆ ಮಾತು ಮುಂದರಿಸಿದ,

"ತಮ್ಮಂಥವರ ಬಾಗಿಲಿಗೆ ಬಂದರೆ ಪದರೊಳಗೆ ಒಂದು ಮೊರ ಜೋಳ ಹಾಕದ ಕಳಿಸತೀರೇ ದೇವರು?"

"ಹೊಟ್ಟೆಗೆ ಸಾಗದಾಗ ಬರೋದೇ ಅಲ್ಲೋ!"

ಗೌಡರು ಉದಾರ ಸ್ವರದಲ್ಲಿ ನುಡಿದು, ಸಂತೋಷವನ್ನು ವ್ಯಕ್ತ ಪಡಿಸಿದರು ಆಮೇಲೆ ಸ್ವಲ್ಪ ತಡೆದು,

"ಹೀಗೆ ಎಲ್ಲಿಯಾದರೂ ಒಂದೊಂದು ರೂಪಾಯಿ ಕೂಡಿಸಿ ಅಂಗಡಿ ಹಾಕಿದರೆ ಅಂಗಡಿ ನಡದೀತ? ನೋಡು ನಾವು ಹತ್ತೆಂಟು ಸಾವಿರ ರೂಪಾಯಿ ಹಾಕಿದೇವಂದರೂ ವೇಳೆಗೆ ಒಂದ ಜೀನಸು ಸಿಕ್ಕರೆ

ಇನ್ನೊಂದು ಸಿಗುವುದಿಲ್ಲ. ಈ ಪ್ರಪಂಚಕ್ಕೇನು ಒಂದೇ ಹತ್ತ್ರತದ ? ಎಷ್ಟು ಹುಚ್ಚ ಇದ್ದೀರಪ್ಪ ನೀವು ? ಆ ಮುಳ್ಳಿ ಹುಡುಗನ ಬೆನ್ನು ಹತ್ತಿರುವಿರಿ ?"

"ಇಲ್ಲ ! ನಾಳೆ ನಮ್ಮ ರೂಪಾಯಿ ನಾವು ಇಸಿದುಕೊಳ್ಳುತ್ತೇವಿ ಧಣೇರಾ !" ಗೌಡರ ಮಾತನ್ನು ತಡೆದು ನುಡಿದನೊಬ್ಬ. ಗೌಡರಿಗೆ ಬೇಕಾದ ಮಾತಿದು.

"ಹೂಂ ! ಕೊಡತಾನ ನಿಮ್ಮ ರೂಪಾಯಿ ನಿಮಗೆ ... ! ಇಷ್ಟರೊಳಗೆ ಖರ್ಚುಮಾಡಿ ಬಿಟ್ಟಿರಬೇಕು ಅವ. ಈಗಿನ ಹುಡುಗರೇನು ? ಚಹ ಸಿಗರೇಟು ಅಂತ .... ಸಾವಿರ ರೂಪಾಯಿ ಕೊಡಿರಿ. ಎರಡು ದಿನದೊಳಗೆ ತೀರಿಸಿಬಿಡತ್ತಾರೆ. ಹೀಗೆ ಪುಕ್ಕಟೆ ರೊಕ್ಕ ಸಿಕ್ಕಮೇಲೆ ಏನೂ ಕೇಳುವಿ ? ಚೈನಿ ಮಾಡಲ್ ಎಲ್ಲಿ ಹೋಗಿದಾನ ನೋಡು ನಾಲ್ಕು ದಿನ ಆಯ್ತು !"

ಆಶ್ರಮದ ವಿದ್ಯಾರ್ಥಿಯು ನಿಜವಾಗಿಯೂ ನಾಲ್ಕು ದಿನ ಹಿಂದೆಯೇ ಗೌಡರ ಮನೆಗೇ ಬಂದು ಶ್ರೇಯಾಂಸ ಜುಗಳಿಗೆ ಹೋದ ಸಂಗತಿಯನ್ನು ಅರುಹಿ, ಶ್ರೇಯಾಂಸನ ಮನೆಯಲ್ಲಿ ಹೇಳಿದೆನೆಂದು ಭಾವಿಸಿ ಹೋಗಿದ್ದ. ಅಷ್ಟು ಪದ್ಮಪ್ಪ ಹಾಗೂ ಗೌಡರ ಮನೆಗಳು ಅಭಿನ್ನವಾಗಿದ್ದುವು. ಇಬ್ಬರೂ ಧಾರ್ಮಿಕ ವ್ಯಕ್ತಿಗಳು. ಬಸದಿಯ ಯಾವ ಉತ್ಸವ ಬಂದರೂ ಕೂಡಿಯೇ ಇರುತ್ತಿದ್ದರು. ಪುರಾಣ ನಡೆಯಲಿ, ನೋಂಪಿ ಸಾಗಲಿ, ಉದ್ಯಾಪನ ಆಗಲಿ ಎಲ್ಲದರಲ್ಲಿಯೂ ಗೌಡ ಪದ್ಮಪ್ಪರು ವಾಸುದೇವ ಪ್ರತಿವಾಸುದೇವರಂತೆ ಇದ್ದರು. ಅದರಿಂದ ಅನುವೂ ಆಪತ್ತುಗಳಲ್ಲೂ ಒಬ್ಬರ ಮನೆಯನ್ನು ಒಬ್ಬರು ನೋಡಿ ಕೊಳ್ಳುತ್ತಿದ್ದರು. ಆದರೂ ಗೌಡರು ಮಾತ್ರ ಅದುವರೆಗೂ ಬಾಳಪ್ಪನಿಗೆ ಆ ಸುದ್ದಿಯನ್ನು ಮುಟ್ಟಿಸಿರಲಿಲ್ಲ. ಅಂದು ಸಾಯಂಕಾಲಕ್ಕೆ ಗೌಡರು ಬಾಳಪ್ಪನನ್ನು ತನ್ನ ಮನೆಗೆ ಕರಿಸಿ ಹೇಳಿದರು :

"ಹುಡುಗನನ್ನು ಹೀಗೆ ತಿರುಗಲಿಕ್ಕೆ ಬಿಡಬೇಡ. ಪುರಾಣ

ಆಯಿತು, ಪುಣ್ಯಕತೆ ಆಯಿತು. ಹೊಟ್ಟೆಗೆ ಏನಾದರು ತೇವ ಹಾಕಿ ಕೊಳ್ಳೋದ ಅದ ? ಸುಮ್ಮನೆ ಯಾವ ಊರಿಗಾದರು ಕಳಿಸಿ ಅಂಗಡಿ ಯೊಳಗೆ ನೌಕರಿಗೆ ಇಡು....ಮಿರಜಿಯೊಳಗೆ ನಾನೂ ಒಂದಿಬ್ಬರಿಗೆ ಹೇಳತೇನಿ ಬೇಕಾದರೆ...."

"ಅದೆಲ್ಲ ಆಯಿತರಿ: ಅವನು ಮನೆಗೆ ಬರಬೇಕಲ್ಲ ಮೊದಲು ! ಹುಡುಗ ಎಲ್ಲಿ ಹೋಗಿದಾನ ನಾಲ್ಕೈದು ದಿನ ಪತ್ತೆ ಇಲ್ಲ....ಆಗಿದೆ .. ಮನೆಯೊಳಗೆ ರೊಟ್ಟಿ ರುಚಿ ಹತ್ತ್ರವಲ್ಲದು...."

"ಹೂಂ ! ಇನ್ನೂ ಸಣ್ಣ ಕೂಸ, ಮೊಲೆ ಕುಡಿತಾನು... ತಪ್ಪಿಸಿ ಕೊಂಡಿದಾನ ಅಂತ ಚಿಂತಿಸತದ್ದ ಆದೀ...."

ಅಣಕದ ಸ್ವರದಲ್ಲಿ ಗೌಡರು ನುಡಿದರು.

"ಇನ್ನೂ ಪೊಸ್ನಿನ ಹುಡುಗ ಅಲ್ಲರೀ.... ಏನು ತಿಳಿಯಾತದ ಅದಕ್ಕ ?"

"ನಾಳೆ ನಾಲ್ಕು ಜನರು ಬಂದು ಬಾಗಿಲೊಳಗೆ ಕೂತರಂದರ ತಿಳಿತದ ಅವನ ಕಾರಭಾರೆಲ್ಲ ನಿನಗೆ ?"

"ಆಂ !"

"ಇಲ್ಲ ಮತ್ತ ! ಅದಕ್ಕೇ ಹೇಳೋದು ನಾ. ಅವನನ್ನು ಹಾಗೇ ಬಿಡಬೇಡ ಅಂತ. ಸುಮ್ಮನೇ ಒಯ್ದು ಎಲ್ಲಿಯಾದರೂ ತುರುಕು...."

"ಬರಲಿ ಅಲ್ಲರಿ ಶ್ರೇಯಾಂಸ ?"

"ಬರಲಿಕ್ಕೆ ಎಲ್ಲಿ ಹೋಗತಾನ....? ಹೀಗೆ ಮೋರೆ ತಪ್ಪಿಸಿ ತಿರುಗಿದರೆ ಅದು ಬಿಡತದೇನು ? ಜನರೆಲ್ಲ ಅಗಸೆಯೊಳಗೆ ದಾರೀ ನೋಡತವ ನಿಂತಿದ್ದಾರೆ....ಹೀಗೆ ನೂರಾರು ಜನರ ದುಡ್ಡು ಎತ್ತಿಕೊಂಡು ಹೋದರೆ ಸುಮ್ಮನೆ ಇದ್ದಾರು ? ಎಂಥಾ ದಿನಾ ಏನು ಕತೆ....? ಸ್ವಾಮಿಗಳ ಹತ್ತ್ರರ ಹೋದರೆ ಪಾಪ ! ಅವರೇನು ಮಾಡಬೇಕು ? ಈ ಸಂಸಾರದ ಜಂಜಾಟೆಲ್ಲ ಬೇಡ ಅಂತೇ ಅವರು ಮನೆ ತ್ಯಾಗ

ಮಾಡಿ, ಮೈ ಮೇಲಿನ ಅರಿವೆ ತೆಗೆದ ಸನ್ಯಾಸಿ ಆಗಿದಾರಲ್ಲ ? ಇವನೂ ಅವರ ಹಾಗೆ ಆದರೆ ಮಾತ್ರ ಪಾರು ಬಿದ್ದ !"

ಬಾಳಪ್ಪ ತನ್ನ ಮನೆಯಲ್ಲಿ ಎಂಥ ಧೈರ್ಯ ಶಾಲಿಯಾಗಿದ್ದರೂ ಗೌಡರ ಮುಂದೆ ಹೆಚ್ಚಿಗೇನೂ ಮಾತಾಡದೆ ಮನೆಗೆ ಬಂದ. ಮನಸ್ಸೂ ಭಾರವಾಗಿತ್ತು. ಬರಲಿರುವ ಸಂಕಟವನ್ನು ಕಲ್ಪಿಸಿಕೊಳ್ಳತೊಡಗಿದ್ದ. ಆದರೆ ಗೌಡರ ಮಾತಿನಿಂದ ಏನೂ ಪೂರ್ಣ ಅರ್ಥವಾಗುವಂತಿರಲಿಲ್ಲ. ಜನರು ಬಾಗಿಲಲ್ಲಿ ಏಕೆ ಬಂದು ಕೂಡುವರು? ಅಂಥದೇನು ಮಾಡಿರುವ ಶ್ರೇಯಾಂಸ? ಈಗ ಸ್ವಾಮಿಗಳ ಕಡೆಗೆ ಏಕೆ ಹೋಗಿರ ಬೇಕು? ಪದ್ಮಪ್ಪನೂ ಅವನೂ ಕೂಡಿಯೇ ಇರಬಹುದೇ? ಹೀಗೆ ಅನೇಕ ಪ್ರಶ್ನೆಗಳು ಅವನ ತಲೆಯನ್ನು ಕೆಡಿಸಿದ್ದುವು. ಯಾವುದಕ್ಕೂ ಸಮಾಧಾನಕರವಾದ ಉತ್ತರ ಅವನಿಗೆ ಸಿಗಲಿಲ್ಲ. ಮನೆಯವರೆಲ್ಲರೂ ಸೇರಿ ವಿಚಾರಿಸಿದರೂ ಚಿಂತೆ ಬಗೆ ಹರಿಯದಾಯಿತು.

# ೧೮

ಗೆಳೆತನದ ಬಯಲಿನಲ್ಲಿ ಒಂದೇ ದಿಸೆಯನ್ನು ಹಿಡಿದು ಸಾಗುತ್ತಿರುವ ಎರಡು ಜೀವಿಗಳು ಎಷ್ಟು ದೂರವಿದ್ದರೂ ಕೂಡ ಅವೆರಡರ ಮನೋಗತಿಯು ಒಂದೇ ಸಮನಾಗಿ ಹೆಜ್ಜೆ ಹಾಕುತ್ತಿರುತ್ತದೆ. ಇದಕ್ಕೆ ಹೊರಗಿನ ಯಾವ ಪ್ರೇರಣೆಯ ಅವಶ್ಯಕತೆಯೂ ಇರುವುದಿಲ್ಲ. ಅದೇಕೋ, ಶ್ರೇಯಾಂಸನ ಸಮಾಚಾರವು ಇತ್ತೀಚೆಗೆ ದತ್ತಮೂರ್ತಿಗೆ ತಿಳಿಯದಿದ್ದರೂ ಕೂಡ ಅವನ ಮನಸ್ಸಿನಲ್ಲಿ ಆಗಾಗ ಗೆಳೆಯನ ಮೂರ್ತಿಯು ನಿಂತು ನೆನಪುಕೊಟ್ಟು ಹೋಗುತ್ತಿದ್ದಿತು. ಅಂಥ ಸಮಯದಲ್ಲೆಲ್ಲ ದತ್ತಮೂರ್ತಿಯ ಹೃದಯದಲ್ಲಿ ಒಂದು ತರದ ಕಳವಳವು ಉಂಟಾಗುತ್ತಿದ್ದಿತು. ಈ ಕಳವಳದ ನಿಜವಾದ ಕಾರಣವನ್ನು ಅರಿಯದ-ಅಂತರ್ವಾಣಿಯ ಅರ್ಥವನ್ನು ಗ್ರಹಿಸಲು ಸಮರ್ಥನಾಗದ-ದತ್ತಮೂರ್ತಿಯು ತನ್ನ ಗೆಳೆಯನಿಗಾಗಿ ಅನೇಕ ವ್ಯವಸ್ಥೆಗಳನ್ನು ಮಾಡುತ್ತ ಒಮ್ಮೊಮ್ಮೆ ಅಡ್ಡಾಡುತ್ತಿದ್ದನು. ಶ್ರೇಯಾಂಸ ಹಾಯ್‌ಸ್ಕೂಲಿಗೆ ಬಂದರೆ ಇರಲು ತಾನಿದ್ದ ಚಿಕ್ಕ ಕೋಣೆ ಇಬ್ಬರಿಗೂ ಸಾಲದು, ಅದಕ್ಕಾಗಿ ಈಗಿನಿಂದಲೇ ದೊಡ್ಡ ಕೋಣೆಯೊಂದನ್ನು ನೋಡಿ ಇಡಬೇಕೆಂದು ಹವಣಿಕೆ ದತ್ತಮೂರ್ತಿಗೆ. ಅದಕ್ಕಾಗಿ ಊರೆಲ್ಲ ಪಿರಿಪಿರಿ ತಿರುಗುವ. ಇಂಥ ಅವಸರದಲ್ಲಿಯೇ ಒಂದು ದಿನ ತಮ್ಮೂರ ವಕೀಲರನ್ನೂ ಕಂಡು ಮಾತನಾಡದೆ ಇರಲಿಲ್ಲ ಆತ. ಮಾತಿನಲ್ಲಿ ಒಂದು ಸ್ಪಷ್ಟತೆಯಿಲ್ಲ, ನಿಶ್ಚಿತ ಉದ್ದೇಶವೂ ಇಲ್ಲ. ಸುಮ್ಮನೆ ಮಾತಿಗೆ ಆರಂಭಿಸುವ :

“ನಾಳೆ ಶ್ರೇಯಾಂಸ ಬಂದರೆ ಹೇಗೆ ?”

ಇದಕ್ಕೆ ಏನು ಉತ್ತರ ಹೇಳಬೇಕೆಂಬುದೂ ಹೊಳೆಯದು ವಕೀಲರಿಗೆ. ಅದರಿಂದ ತಿರುಗಿ ದತ್ತಮೂರ್ತಿಗೆ ಅವರೂ ಪ್ರಶ್ನೆ ಹಾಕಿದರು.

"ಬರುವದಾಗಿ ಪತ್ರ ಬಂದಿದೆಯೆ ?"

"ಇಲ್ಲ ; ಆದರೆ ಸಹಜ ಕೇಳಿದೆ...."

"ಇತ್ತೀಚೆಗೆ ಊರಿಗೆ ಹೋದಾಗ ನನಗೆಲ್ಲಿಯೂ ಅವನು ಕಾಣಲಿಲ್ಲ...."

"ಅಭ್ಯಾಸದಲ್ಲಿ ತೊಡಗಿರಬೇಕು...."

"ಇರಬೇಕು...."

ಎಂದು ವಕೀಲರು ತಮ್ಮ ಮುಂದಿನ ಕೆಲಸದಲ್ಲಿ ತೊಡಗುವರು. ದತ್ತಮೂರ್ತಿಯೂ ಎದ್ದು ತನ್ನ ಕೋಣೆಯ ಕಡೆಗೆ ಒಂದ. ವಕೀಲರ ಕಡೆಗೆ ತಾನು ಏಕೆ ಹೋಗಿದ್ದೆ ? ಅವರು ಅದಕ್ಕೆ ಏನು ಹೇಳಿದರು ? ಎಂದು ಮೊದಲಾದ ಪ್ರಶ್ನೆಗಳನ್ನು ತನ್ನ ಮನಸ್ಸಿಗೆ ತಾನೇ ಹಾಕಿಕೊಳ್ಳುವನು. ಉತ್ತರವೇ ದೊರೆಯದು. ಗೊಂದಲದಲ್ಲಿ ಬಿದ್ದಂತಾಗುವ. ಹಾಗೆಯೇ ಯಾವುದೋ ಒಂದು ಭ್ರಮೆಯಲ್ಲಿ ಸುತ್ತುತ್ತ ಕೋಣೆಯ ಕಡೆಗೆ ಸಾಗುವ. ಮುಂದೆ ಗೆಳೆಯನೊಡನೆ ಕೂಡಿ ಕಳೆಯುವ ಸುಖದ ದಿನಗಳನ್ನು ನೆನೆದುಕೊಳ್ಳುವ ಆದರಲ್ಲಿಯೇ ಶ್ರೇಯಾಂಸ ಇಂದು ನಾನು ಕೊನೆಗೆ ಹೋಗುವುದರಲ್ಲಿ ಬಂದು ಬಿಟ್ಟಿದ್ದರೆ!....ಈ ಸವಿಯಾದ ಕನಸಿನಲ್ಲಿ ದಾರಿ ತಪ್ಪಿ ಇನ್ನೊಂದು ಓಣಿಗೆ ಸಾಗಿದುದರ ಅರಿವೂ ಅವನಿಗೆ ಇರಲಿಲ್ಲ. ಹೇಗೋ ಎಲ್ಲೆಲ್ಲಿಯೋ ಸುತ್ತಾಡಿ ಕೋಣೆಗೆ ಬಂದು ಬಾಗಿಲ ತೆರೆದಾಗ ಅವನಿಗೆ ಆಶ್ಚರ್ಯವೇ ಆಯಿತು.

ಮೆಟ್ಟಿಲುಗಲ್ಲಿನ ಮೇಲೆ ಶ್ರೇಯಾಂಸ ತನ್ನ ದಾರಿಯನ್ನೇ ನೋಡುತ್ತ ಕುಳಿತಿರುವ ಎಂಬ ಭ್ರಮೆ ಸುಳ್ಳಾದರೂ ಅವನ ಹಸ್ತಾಕ್ಷರವುಳ್ಳ ಕಾಗದದ ಕಟ್ಟೊಂದು ಕೋಣೆಯಲ್ಲಿ ಬಿದ್ದುದನ್ನು ಕಂಡು

ದತ್ತಮೂರ್ತಿಯು ಗೆಳೆಯನನ್ನು ಕಂಡಷ್ಟೇ ಆನಂದದಿಂದ ಎತ್ತಿಕೊಂಡು ನೋಡಿದ. ಅಂಚೆಯಿಂದ ಬಂದ ಕಾಗದದ ಕಟ್ಟಲ್ಲವದು. ಯಾರೋ ತಂದು ಕಿಟಕಿಯಿಂದ ಒಗೆದು ಹೋದಂತಿತ್ತು. ಆದರೂ ಒಂದು ಕ್ಷಣ, ಶ್ರೇಯಾಂಸನೇ ಇದನ್ನು ಇಲ್ಲಿ ಒಗೆದು ಸಮೀಪದಲ್ಲಿ ಎಲ್ಲಿಯಾದರೂ ಹೋಗಿರಬಾರದೇಕೆ ? ಎಂದು ದತ್ತಮೂರ್ತಿಯ ಮನಸ್ಸಿನಲ್ಲಿ ಸಂಶಯುನೇಳದೆ ಇರಲಿಲ್ಲ. ಅದರಿಂದ ಹೊರಗೆ ಹೋಗಿ ಅತ್ತಿತ್ತ ನೋಡಿಯೂ ಬಂದ. ಆದರ ಉಪಯೋಗವೇನೂ ಆಗಲಿಲ್ಲ. ಕೊನೆಗೆ ಆ ಕಾಗದದ ಕಟ್ಟನ್ನು ಬಿಚ್ಚಿನೋಡಿದ, ಕುತೂಹಲದಿಂದ ಆದರೆ ಅದರಲ್ಲಿ ಕ್ಷೇಮ ಸಮಾಚಾರದ ಒಂದು ಸಾಲೂ ಕೂಡ ಇರಲಿಲ್ಲ. ಅದು 'ವಿಜಯ ಸಾಮ್ರಾಜ್ಯ' ನಾಟಕದ ಹಸ್ತ ಪ್ರತಿಯಾಗಿತ್ತು.

'ವಿಜಯ ಸಾಮ್ರಾಜ್ಯ' ನಾಟಕವನ್ನು ಓದುವ ಕುತೂಹಲವೇನೋ ದತ್ತಮೂರ್ತಿಗೆ ಸಾಕಷ್ಟಿತ್ತು. ಆದರೆ ಈ ಪ್ರತಿಯನ್ನು ಈಗ ಯಾರು ತಂದರು ? ಶ್ರೇಯಾಂಸ ಇದನ್ನೇಕೆ ಕಳಿಸಿರಬೇಕು ? ಈಗೇಕೆ ಕಳಿಸಿರಬೇಕು ? ಇತ್ಯಾದಿ ಪ್ರಶ್ನೆಗಳು ಅವನ ಮನಸ್ಸನ್ನು ಕಲಕಿದುವು. ಆದರೆ ಯಾವುದಕ್ಕೂ ಸಮಾಧಾನಕರ ಉತ್ತರ ಅವನಿಗೆ ದೊರಕಲಿಲ್ಲ.

ಅಸ್ವಸ್ಥ ಮನಸ್ಥಿತಿಯಲ್ಲಿಯೇ ಅದೊಂದು ದಿನ ಉರುಳಿತು. ಮರುದಿನ ಬೆಳಗಿನೆಂದರೆ ಶ್ರೇಯಾಂಸನ ಕಾಗದವೇ ಅವನ ಕೈಗೆ ಬಂತು. ಆತುರದಿಂದ ಒಡೆದು ಗೆಳೆಯನ ಪತ್ರವನ್ನು ಕುತೂಹಲದಿಂದ ಓದತೊಡಗಿದ.

'ಪ್ರಿಯ ದತ್ತಮೂರ್ತಿಗೆ,

'ವಿಜಯ ಸಾಮ್ರಾಜ್ಯ' ಕೈಸೇರಿರಬೇಕು. ಇದು 'ಸೋಲಿನ ಸಾಮ್ರಾಜ್ಯ'ದ ಕತೆಯಾಗಿದೆ. ಇಂಥ ನನ್ನ ಕಾಗದವನ್ನು ಕಂಡು

ನಿನಗೆ ಆಶ್ಚರ್ಯವಾಗಬಹುದು. ಅದರಲ್ಲೂ ನಾನು ಈ ಕಾಗದವನ್ನು ಊರಿಂದ ಬರೆಯುತ್ತಿಲ್ಲ; ವಿರಜದಿಂದ ಬರೆಯುತ್ತಿದ್ದೇನೆ. ಈಗ ನಾನಿಲ್ಲಿ ಒಂದು ಜವಳೀ ಅಂಗಡಿಯ ಕಾರಕೂನ. ಗೆಳೆಯಾ, ನೀನು ನನ್ನ ಬರವಿಗಾಗಿ ದಾರೀ ಕಾಯುತ್ತಿರಬೇಕಲ್ಲವೇ? ಆದರೆ ನನ್ನ ಮುಂದಿನ ಶಿಕ್ಷಣ ಇನ್ನೂ ಕನಸಿನಲ್ಲಿಯೇ ಎಂದು ತೋರುತ್ತಿದೆ. ಇರಲಿ, ವಿದ್ಯಾಲಯಗಳಷ್ಟೇ ಶಿಕ್ಷಣದ ಸಾಧನಗಳಲ್ಲವಷ್ಟೇ? ಈ ಜೀವನಾಲಯದಲ್ಲಿಯೇ ನಾನು ಹೆಚ್ಚಿನ ಅಭ್ಯಾಸವನ್ನು ಮಾಡಬೇಕಾಗಿದೆ. ಅಲ್ಲಿ ನಾವು ಓದುವ ಪಾಠ, ಮಾಡುವ ಕೃತಿ ಸಾಕಷ್ಟಿದೆ. ಅವುಗಳ ಅಭ್ಯಾಸದಲ್ಲಿಯೇ ಈಗ ನಾವು ತೇರ್ಗಡೆಯಾಗಬೇಕು.

ಆದರೆ....! ಮೊನ್ನಿನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದರೆ ನಾನೀಗ ಇಲ್ಲಿ ಕಾರಕೂನನಾಗಿ ಬರುತ್ತಿರಲಿಲ್ಲ. ಅದೂ ಒಬ್ಬರ ಸೇವೆಯೇ. ಆದರೆ ಅದರಲ್ಲೆಷ್ಟು ಆನಂದ! ಅಂಥ ಆನಂದವನ್ನು ಪಡೆಯುವ ಭಾಗ್ಯ ನನ್ನಂಥ ಹೇಡಿಗಳಿಗೆ ಇರುವುದಿಲ್ಲವೇನೋ. ನಾನು ಇನ್ನೂ ನಮ್ಮೂರಲ್ಲಿ ಹೋರಾಟವನ್ನು ನಡೆಯಿಸಬೇಕಾಗಿತ್ತು. ಕೈಯಿಂದ ಆಗದ್ದಕ್ಕೆ ಇಲ್ಲಿ ಬಂದು ಬಿದ್ದೆ.

ಹಾಂ! ನಾನಾಗಿಯೇ ಇಲ್ಲಿ ಬಂದು ಬೀಳಲಿಲ್ಲ; ನೂಗಿಸಿ ಹಾಕಿದರು. ನನ್ನ ಹೃದಯವೇನೋ ಕೊನೆಯವರೆಗೂ ಹೋರಾಡಲು ಹೇಳುತ್ತಿತ್ತು. ಊರಲ್ಲಿಯ ಐದಾರುನೂರು ಬಡ ಕುಟುಂಬಗಳ ಉದ್ಧಾರವಾಗುವಾಗ ನನ್ನೊಬ್ಬನ ಭವಿಷ್ಯ ಹಾಳಾದರೇನು? ಆದರೆ ಆ ಬಡವರಿಗೋ, ಅವರ ಹಿತದ ಅರಿವು ಅವರಿಗಿಲ್ಲ. ಇನ್ನೂ ಧನವಂತರಮೇಲೆಯೇ ಶ್ರದ್ಧೆಯಿಡುವರು. ಅವರ ಮಾತನ್ನೇ ಕೇಳಿ ನಮ್ಮನ್ನೇ ಅವಿಶ್ವಾಸದಿಂದ ಕಾಣುವರು. ಆರಂಭದಲ್ಲಿ ಕೊಟ್ಟ ಒಂದು ರೂಪಾಯಿ ಹೋಯಿತೆಂದು ತಿಳಿದು ಸುಮ್ಮನೆ ಕೂಡಲಿಕ್ಕೂ ಸಿದ್ಧರಿಲ್ಲ ಅವರು! ಅಷ್ಟಕ್ಕಾಗಿ ಎಂಥ ನಿರ್ಲಜ್ಜ ಕೆಲಸವನ್ನು

ಮಾಡಲೂ ಅವರು ಸಿದ್ಧರು. ನೂರಾರು ಜನ ಸೇರಿ ಬಾಗಿಲಲ್ಲಿ ಬಂದು ಕೂಡುವದೆಂದರೆ ಏನು? ಇಂಥ ಕೆಲಸಕ್ಕೆ ಎಲ್ಲಿಯ ಸಂಘಟನೆ ಬರುವುದೋ ಏನೋ ಅವರಲ್ಲಿ ಇದೇ ಒಂದೊಂದು ರೂಪಾಯಿ ಚಂದಾ ಸೇರಿಸಲಿಕ್ಕೆ ನೂರು ಜನರನ್ನು ಒಪ್ಪಿಸಲಿಕ್ಕೆ—ನನಗೆ ಒಂದು ತಿಂಗಳವೇ ಹಿಡಿದಿದ್ದಿತು. ಆ ಶ್ರಮವೆಲ್ಲ ಒಂದು ತಾಸಿನಲ್ಲಿ ಹಾಳಾಗಿ ಹೋಯಿತು.

ಎಷ್ಟು ತಿಳಿಸಿ ಹೇಳಿದರೇನು? ನನ್ನ ಮೇಲಿನ ಶ್ರದ್ಧೆಯೇ ಮೊದಲು ಹೋಗಿಬಿಟ್ಟಮೇಲೆ ಮಾತಿನ ಮಂತ್ರ ಏನು ಮಾಡ ಬಲ್ಲದು? ಸತ್ಯಾಗ್ರಹವನ್ನೇ ಹೂಡಬೇಕೆಂದರೆ ನನ್ನ ಮನೆಯ ಜನ ಬೇರೆ ನನಗೇ ವಿರೋಧವಾಗಿ ನಿಂತಿದ್ದಿತು. ಏನಾದರೂ ಸಮಂಜಸ ವಿಚಾರವುಳ್ಳ ನಮ್ಮ ಚಿಕ್ಕಪ್ಪನವರಂತೂ ಈ ವಿಷಯದಲ್ಲಿ ಮೌನವಾಗಿ ಉಳಿದುಬಿಟ್ಟರು! ಅವರ ಧರ್ಮವೇ ಅವರಿಗೆ ಹಾಗೆ ಹೇಳಿಕೊಟ್ಟದೆ. ಅಂದಮೇಲೆ ಅವರು ಆ ರೀತಿ ಆಚರಿಸುವುದರಲ್ಲಿ ಆಶ್ಚರ್ಯವೂ ಇಲ್ಲ; ಅನುಚಿತವೂ ಅಲ್ಲ. ತ್ಯಾಗಿಗಳನ್ನು ಸಂಸಾರದ ಗೊಂದಲದಲ್ಲಿ ಎಳೆ ಯುವದೆಂದರೆ ನನ್ನದೇ ತಪ್ಪು. ಆದರೆ ಬಹುಜನ ಸಮಾಜದ ಹಿತವು ಸಾಧಿಸುವಲ್ಲಿ ಇವರು ಸಾಯಲು ಸಿದ್ಧರಿರದಿದ್ದರೆ ಇವರ ತ್ಯಾಗಕ್ಕೆ ಬೆಲೆ ಏನು? ಎಂಬ ಪ್ರಶ್ನೆ ಆಗಾಗ ನನ್ನನ್ನು ಕೆರಳಿಸುತ್ತಿದೆ. ಒಂದು ಜೀವ ಸಿದ್ಧಿಯನ್ನು ಪಡೆಯುವದೇನು ಮಹತ್ವದ್ದಲ್ಲ. ಒಂದು ಜನಾಂಗದ ಒಂದು ಹೆಜ್ಜೆಯಲ್ಲಿ ಕಂಡುಬರುವ ಪ್ರಗತಿಯೇ ಅದಕ್ಕಿಂತ ಮಿಗಿಲು. ಹಿಂದಕ್ಕೆ ನಮ್ಮ ಸಾಧುಗಳು ಲಕ್ಷಾವಧಿ ಮುನಿಗಳನ್ನು ಕೂಡಿಕೊಂಡೇ ಮುಕ್ತಿಗೆ ಹೋದುದುಂಟು. ಅಂಥ ಸಾಧನೆಯು ಇಂದೆಲ್ಲಿ ಹೋಯಿತೋ? ವೈಯಕ್ತಿಕ ಮುಕ್ತಿ ಸಾಧನೆಯಲ್ಲಿಯೇ ನಿರತರಾಗಿದ್ದಾರೆ.... ಈ ಹಿರಿಯರು!

ಇರಲಿ, ತ್ಯಾಗಿಗಳ ವಿಚಾರ ಬಿಟ್ಟುಬಿಡೋಣ. ಸಂಸಾರ ಮಾಡುವ ಹಿರಿಯರಾದರೂ ನನ್ನ ಹೃದಯದ ನುಡಿಯನ್ನು ಕೇಳಿ

ಕೊಳ್ಳಬಾರದೇ ? ನನ್ನ ಯೋಜನೆಯನ್ನಾದರೂ ವಿಮರ್ಶಿಸಬಾರದೇ? ಒಂದೂ ಮಾಡಲಿಲ್ಲ. ನಮ್ಮ ತಂದೆ ತಾಯಂದಿರಂತೂ ಭಗವತ್ ಜಿನಸೇನರ ಆದಿ ಪುರಾಣದಲ್ಲಿ ಬಾಲೆಯಿಂದ ಬಂಗಾರದ ಕಡ್ಡಿಯನ್ನು ಹಾಕಿಸಿ, ನನ್ನ ಪ್ರಯಾಣದ ಶುಭಾಶುಭಗಳನ್ನೇ ನಿರೀಕ್ಷಿಸತೊಡಗಿದರು. ಅದರಲ್ಲೂ ಕೂಡ ಕುಮಾರೋತ್ಪತ್ತಿ, ಧ್ಯಾನ, ವಿವಾಹಗಳ ವರ್ಣನೆಗಳೇ ಬಂದು ನನ್ನ ಕಾರಕೂನಿ ನೌಕರಿಗೆ ಶುಭ ನಿಮಿತ್ತವನ್ನೇ ಸೂಚಿಸಿದುವು !

ಉಪಾಯವಿಲ್ಲ ; ಆತ್ಮಾರಾಮರನ್ನು ಕಂಡರೆ ಅವರಿಂದಲೂ ನಿರಾಶೆಯ ಉತ್ತರವೇ. ನನ್ನ ಬರವಣಿಗೆಯ ಮಾರ್ಗದರ್ಶಕರವರು. ಚೈತನ್ಯಮೂರ್ತಿಗಳು ! ಆದರೇನು ? ಬರಹಗಾರನಿಗೆ ಈ ಎಲ್ಲ ಹೋರಾಟವೇಕೆ ಎಂದವರ ಪ್ರಶ್ನೆ. ಎಲ್ಲಿಯಾದರೂ ಶಾಂತ ರೀತಿಯಿಂದ ಕುಳಿತು ಅಭ್ಯಾಸಮಾಡಿ ಬರವಣಿಗೆಯನ್ನು ಸಾಗಿಸಬೇಕೆಂದವರ ಉಪದೇಶ. ಸಮಾಧಾನದಿಂದ ಕುಳಿತು ಓದಿ ಬರೆಯುವುದು ಹೊಟ್ಟೆಗಿದ್ದವರ ಕರ್ತವ್ಯವಾಯಿತು. ದಿನಾಲು ಹಿಡಿ ಅನ್ನಕ್ಕಾಗಿ ನಾನೇ ಇನ್ನೊಬ್ಬರ ಮೇಲೆ ಭಾರವಾಗಿ ಕುಳಿತಿರುವಾಗ ನಾನೇನು ಅಂಥ ಅಮೂಲ್ಯ ಸಾಹಿತ್ಯ ಕೃತಿಯನ್ನು ಕೊಡಬಲ್ಲೆ ? ಬಾಳಿನಲ್ಲಿ ಬೆಳಕನ್ನು ಕಾಣದೆ ಸಾಹಿತ್ಯದಲ್ಲಿ ಎಲ್ಲಿಂದ ತೋರಿಸಲಿ ? ಆ ಬೆಳಕು ಹೋರಾಟದ ಕಿಡಿಯಲ್ಲಿದೆ. ಇದರ ಅರ್ಥ ಮುಪ್ಪಿನ ಗುರುಗಳಿಗೆ ಆಗದೇನೋ !

ಮೂರ್ತಿ ! ಇಂಥ ಸನ್ನಿವೇಶದಲ್ಲಿ ನೀನಿರುತ್ತಿದ್ದರೆ ಏನು ಮಾಡುತ್ತಿದ್ದೆಯೋ ? ನನಗಿಂತ ಒಂದು ಹೆಜ್ಜೆಯನ್ನು ಮುಂದೆ ಇಡುತ್ತಿದ್ದಿಯೆಂದು ನಾನು ಮಾತ್ರ ನಿಶ್ಚಿತವಾಗಿ ತಿಳಿದಿದ್ದೇನೆ. ಆ ದಿನಗಳಲ್ಲಿ ನನ್ನ ಜೊತೆಯಲ್ಲಿ ನೀನು ಊರಲ್ಲಿ ಇದ್ದಿದ್ದರೆ ನಾನೂ ಬೇಕುಬೇಕಾದುದನ್ನು ಮಾಡುತ್ತಿದ್ದೆ. ಅಂದರೂ ಒಂದು ಜೀವ ನನಗಾಗಿ ನನ್ನ ಗುರಿಗಾಗಿ ತಳಮಳಿಸುತ್ತಿತ್ತು. ಜನತೆಯ ದೃಷ್ಟಿಯಿಂದ

ಅವಳು ಕೀಳು ಕುಲೋತ್ಪನ್ನಳಾದರೇನು ನನಗಂತೂ ಅವಳು ಆದರ್ಶ ಜೀವಿ! ಲಲಿತೆ!

ದತ್ತ! ತಪ್ಪು ಕಲ್ಪನೆಯನ್ನು ಮಾಡಿಕೊಳ್ಳಬೇಡ. ಮತ್ತೆ! ಲಲಿತೆಯ ಪರಿಚಯ ನಿನಗೂ ಇದೆ. ಅವಳು ಅಕ್ಕಾಸಾನಿಯ ಮಗ ಳಾದರೇನಾಯಿತು? ಕೆಸರಿನಲ್ಲಿ ಕಮಲ ಹುಟ್ಟಲಾರದೆ? ಹಾಗೆಯೇ ಅದೊಂದು ಜೀವಿ. ಆದರೆ ಆ ಅಬಲೆಯ ನೆರವಿನಿಂದ—ಅದೂ ಹಿಂದೆ ನಿಂತು ಹುರಿದುಂಬಿಸುವುದರಿಂದ—ಆ ಕುಟಿಲನೀತಿಪರಾಯಣ ರಾದ ಊರ ಮುಖಂಡರ ಎದುರಿಗೆ ನಿಂತು ಹೋರಾಡುವುದಕ್ಕೆ ಆಗದೆ ಸೋತು ಇಲ್ಲಿಗೆ ಬಂದಿರುವೆ. ಆದರೆ ನಿಮ್ಮೆಲ್ಲರ ಸ್ನೇಹದಿಂದ ಈ ಸೋಲೂ ಗೆಲುವಿನ ದಾರಿಯೊಳಗಿನ ಒಂದು ಹೆಜ್ಜೆಯಾಗುವುದೆಂದು ನಂಬಿರುವೆ.

ಸಾಕು ಗೆಳೆಯಾ, ಹನುಮಂತನ ಬಾಲದಂತೆ ಉದ್ದವಾಗಿ ಬೆಳೆಯುವ ಈ ಕಾಗದವನ್ನು ಇಲ್ಲಿಯೇ ಮುಗಿಸಿಬಿಡುವೆ. ಕಣ್ಣು ಉರಿಯುತ್ತಿದೆ, ತಲೆ ನೋಯುತ್ತಿದೆ, ಮೈಯು ಕಾವೇರಿದೆ. ಎರಡು ದಿನ ಮೈಯಲ್ಲಿ ನೆಟ್ಟಗಿಲ್ಲ. ಆದರೂ ಹೃದಯದ ಅಳಲನ್ನು ಆತ್ಮೀ ಯರ ಮುಂದೆ ಹೇಳಿಕೊಳ್ಳದೆ ಶಾಂತಿಯಿಲ್ಲ, ಸ್ವಾಸ್ಥ್ಯವಿಲ್ಲ. ಅದಕ್ಕಾಗಿ ಇಂಥ ಇರುಳಿನಲ್ಲಿಯೂ ಕುಳಿತು ಈ ಕಾಗದವನ್ನು ಬರೆಯುತ್ತಿರುವೆ. ಆಯಿತು. ಗುಬ್ಬಿಯೊಳಗಿನ ಎಣ್ಣೆಯೂ ತೀರುತ್ತ ಬಂದಿದೆ. ಬಡವನ ಮನೆಯ ಜ್ಯೋತಿಯಲ್ಲವೇ ಅದು!

ನಿನ್ನ ನೆಚ್ಚಿನ
ಶ್ರೇಯಾಂಸ.'

ಪತ್ರವನ್ನು ಓದಿ ಕೆಳಗಿಟ್ಟ ದತ್ತಮೂರ್ತಿ. ಅವನ ಕಣ್ಣೆದುರಿಗೆ ತಮ್ಮೂರ ಸಮಗ್ರ ಚಿತ್ರವೇ ಸುಳಿಯಿತು. ಆತನೂ ಅಲ್ಲಿಯೇ ಹುಟ್ಟಿ ಬೆಳೆದವ. ಗೌಡರೂ ಶೆಟ್ಟರೂ ಪಂತರೂ ಎಲ್ಲರೂ ಪರಿಚಿತರೇ.

ಅವರ ಕೃತಿ, ನೀತಿಗಳನ್ನೆಲ್ಲ ನೆನೆದು ಗೆಳೆಯನಿಗಾಗಿ ತುಂಬ ಕೊರಗಿದ. 'ಸಮರ್ಥ ಸಂಘ' ಹಿಂದೆ ಮುರಿಯಲಿಕ್ಕೆ ಊರೊಳಗಿನ ಪ್ರಮುಖರು ಹೇಗೆ ಕಾರಣರಾಗಿದ್ದರೆಂಬ ಚರಿತ್ರೆಯೆಲ್ಲ ತನ್ನ ತಂದೆಯಿಂದ ಹಲವು ಬಾರಿ ಕೇಳಿದ್ದನಾತ. ಅದರಿಂದ ಇದೇನೂ ಹೊಸದೆನಿಸಲಿಲ್ಲ ಅವನಿಗೆ. ಆದರೂ ಗೆಳೆಯನ ಹೊಸ ಬಗೆಯ ಹೋರಾಟವನ್ನು ನೆನೆದಾಗಲೆಲ್ಲ ಅವನ ಹೃದಯ ಆನಂದದಿಂದ ತುಂಬಿ ಬರುವುದು. ಅಭಿಮಾನದಿಂದ ಉಕ್ಕಿ ಬರುವುದು. ಎಲ್ಲಿಯ ಮ್ಯಾಕ್ಸಿಂ ಗಾರ್ಕಿ, ಲೆನಿನ್ ! ಇವರ ವಿಚಾರಗಳನ್ನೊಂದೂ ತಿಳಿಯದ ಈ ಹಳ್ಳಿಯ ಜೀವಿ ಆ ಮಹಾ ಪುರುಷರ ದಾರಿಯಲ್ಲಿ ಸಾಗುತ್ತಿದ್ದನಲ್ಲ ! ಅವರ ಹೆಸರನ್ನೂ ಕೇಳಿರುವನೋ ಇಲ್ಲವೋ ಏನೋ ! ಆದರೆ ಎಂಥ ಸಾಹಸ ಇವನದು.

ಕಣ್ಣು ಮುಚ್ಚಿ ಒಂದುಕ್ಷಣ ಸ್ತಬ್ಧನಾಗಿ ಕುಳಿತ ದತ್ತಮೂರ್ತಿ. ಅವನ ಬಾಯಿಂದ ಉದ್ಗಾರವೊಂದು ತನ್ನಿಂದ ತಾನೇ ಹೊರಟಿತು.

"ಶ್ರೇಯಾಂಸ ! ಶ್ರೇಯಾಂಸ ! ಶ್ರೇಯಾಂಸ !"

"ನಿಜವಾಗಿಯೂ ಶ್ರೇಯಾಂಸನೇ ಈತ........"

ಶ್ರೇಯಾಂಸನ ಕಾಗದವನ್ನು ಆದರದಿಂದ ಎತ್ತಿಕೊಂಡು, ಭಕ್ತಿಯಿಂದ ಎದೆಗೆ ಒತ್ತಿಕೊಂಡ ದತ್ತಮೂರ್ತಿ !

# ೧೯

ಮಿರಜಿಯಲ್ಲಿ ಶ್ರೇಯಾಂಸನ ಕೋಣೆಯನ್ನು ಗೊತ್ತು ಹಚ್ಚಬೇಕಾದರೆ ಲಲಿತೆಗೆ ಒಂದೆರಡು ತಾಸುಗಳೇ ಕಳೆದುವು. ಅವನು ಕೆಲಸ ಮಾಡುತ್ತಿರುವ ಅರಿವೆಯ ಅಂಗಡಿಯ ಬಾಗಿಲು ತೆರೆಯುವ ವರೆಗೂ ಕಾದಳು. ಅಲ್ಲಿಯೇ ಅವನ ಭೆಟ್ಟಿಯಾಗಬಹುದೆಂದು ಆಶಿಸಿದ್ದಳವಳು. ತಾಸೆರಡು ತಾಸು ಹೊತ್ತೇರಿದ ಮೇಲೆ ಅಲ್ಲಿ ಹೋಗಿ ಕೇಳಲು ಅವರು :

"ನಿಮಗೇನಾದರೂ ಅರಿವೆ ಬೇಕಾಗಿತ್ತೇ ?" ಎಂದರು.

"ಇಲ್ಲ, ಶ್ರೇಯಾಂಸನಿಗೆ ಭೆಟ್ಟಿಯಾಗಬೇಕಿತ್ತು...."

"ಶ್ರೇಯಾಂಸ ನಿಮಗೇನಾಗಬೇಕು ?" ಕೊಂಕು ಸ್ವರದಲ್ಲಿ ಮಾಲಿಕನ ಮಗ ಕೇಳಿದ.

ಲಲಿತೆ ಸ್ವಲ್ಪ ಗೊಂದಲದಲ್ಲಿ ಬಿದ್ದಳು. ತುಸು ಲಜ್ಜೆ ಸಿಟ್ಟುಗಳು ಅವಳ ಮುಖವನ್ನು ಆವರಿಸಿದುವು. ಅವಳರಿಯದೆಯೇ ಅವಳ ಬಾಯಿಂದ,

"ನನಗೆ ?" ಎಂಬ ಪ್ರಶ್ನೆ ಹೊರಬಿದ್ದಿತು....

ಅಂಗಡಿಯ ಒಡೆಯ ಮಲ್ಲಪ್ಪ ; ಮುದುಕ. ಅವನಿಗೆ ವ್ಯಾಪಾರವೊಂದೇ ಗುರಿ. ಇಂಥ ವಾರನಾರಿಯರ ಸಂಗದಿಂದ ತನ್ನ ಹಿರಿಯ ಮಗನೊಬ್ಬ ಕೆಟ್ಟದಾರಿಗೆ ಹತ್ತಿದುದರ ಅನುಭವ ಅವನಿಗಿತ್ತು. ಅಂಗಡಿಯೊಳಗಿನ ಒಳ್ಳೆಯ ಸೀರೆ ಕುಪ್ಪಸಗಳೆಲ್ಲ ಅವಳಿಗಾಗಿ ಇಟ್ಟಲ್ಲಿಯೇ ಮಾಯವಾಗುತ್ತಿದ್ದುವು. ಅಂಥ ಹಿರಿಯ ಮಗನ ಮೇಲೆ ಕಣ್ಣಿಡಲು ಶ್ರೇಯಾಂಸನಿಗೆ ಅವನು ತಮ್ಮ ಅಂಗಡಿಗೆ ಕಾಲಿಕ್ಕಿದ

ದಿನವೇ ಹೇಳಿಟ್ಟಿದ್ದ. ಅಂಥ ಶ್ರೇಯಾಂಸನಿಗೂ ಇಂಥವಳ ಸಂಗತಿ ಅಂದ ಮೇಲೆ ಆ ಕಾರಕೂನನೇ ತಮಗೆ ಉಪಯೋಗವಿಲ್ಲ ಎಂಬ ನಿರ್ಣಯಕ್ಕೆ ಆತ ಬಹು ಬೇಗ ಬಂದುಬಿಟ್ಟ. ಅದಕ್ಕಿಂತಲೇ ಸ್ಪಷ್ಟ ವಾಗಿ ನುಡಿದ,

"ಮುಂಜಾನೆ ಇಲ್ಲದೊಂದು ಕೇಳುತ್ತ ಕೂತಿರುವಿ ? ನೋಡು.... ನಿನ್ನೆ ಬಂದ ಅರಿವೆಯ ನಗ ಚೆನ್ನಾಗಿ ಹಚ್ಚು...."

ಲಲಿತೆಯ ಕಡೆಗೆ ಹೊರಳಿ, ಸ್ವಲ್ಪ ದನಿಯನ್ನು ಮೃದುವಾಗಿಸಿ ಹೇಳಿದ :

"ಶ್ರೇಯಾಂಸ ಎರಡು ದಿನ ಅಂಗಡಿಗೇ ಬಂದಿಲ್ಲ. ಊರಿಗೆ ಹೋಗಿರುವನೋ....ಎಲ್ಲಿ ಹೋಗಿರುವನೋ ಗೊತ್ತಿಲ್ಲ...."

"ನಿನ್ನೆ ಸಂಜೆಯವರೆಗೂ ಊರಿಗೇನೂ ಬಂದಿಲ್ಲ....!"

"ನೀವೂ ಅವನ ಊರವರೆ ?"

"ಅಹುದು ; ಅವರ ಓಣಿಯಲ್ಲಿಯೇ ನಮ್ಮ ಮನೆಯೂ ಇದೆ.... ನಾನೂ ಅವರೂ ಒಂದೇ ಸಾಲೆಯಲ್ಲಿ ಕಲಿತವರು. ಇಬ್ಬರಿಗೂ ಗುರುಗಳು ಒಬ್ಬರೇ...."

"ಈಗ ಏಕೆ ಬಂದಿದ್ದಿರಿ ತಾಯಿ ನೀವು ?"

"ನಿನ್ನೆ ಸಿನೇಮಾಕ್ಕಂತ ಬಂದಿದ್ದೆ...."

ಅರಿವೆಯ ನಗಗಳನ್ನು ಎತ್ತಿಡುವದನ್ನು ಬಿಟ್ಟು ಮಲ್ಲಪ್ಪನ ಮಗ ಮತ್ತೆ ಇತ್ತ ಸುಳಿದ. ಅವನ ಲಕ್ಷ್ಯವೆಲ್ಲ ಇವರ ಮಾತಿನ ಕಡೆಗೇ ಇತ್ತು. ನಡುವೆಯೇ ಲಲಿತೆಯ ಮಾತನ್ನು ತಡೆದು ತನ್ನ ಪ್ರಶ್ನೆಯನ್ನು ಸೇರಿಸಿದ.

"ಇಲ್ಲಿ ನಿಮಗಾರಾದರೂ ಗುರುತಿನವರಿದ್ದಾರೆಯೋ ?"

"ಹತ್ತಿದೂರು ; ಇಲ್ಲೇನು ನನಗೆ ಬೇಕಾದಷ್ಟು ಗುರುತಿನ ಜನ...."

ಇನ್ನೇನನ್ನೋ ಕೇಳುವವನಿದ್ದ ಮಲ್ಲಪ್ಪನ ಮಗ. ಅಷ್ಟರಲ್ಲಿ

ಮಲ್ಲಪ್ಪನೇ ಸಮಾರೋಪದ ಮಾತಿಗೆ ತೊಡಗಿದ :

"ಶ್ರೇಯಾಂಸ ಹೋಳಿಯ ಕಟ್ಟೆಯ ಹತ್ತಿರ ಜೈನರ ಬಸದಿಯ ಬಲ ಮಗ್ಗಲಿನ ಮನೆಯಲ್ಲಿದ್ದಾನೆ........ನೋಡಿರಿ. ಅವರೇನೋ ಬಾಳಪ್ಪನಿಗೆ ಗುರುತಿನವರಂತೆ....ಅಲ್ಲಿಯೇ ಇರಲಿಕ್ಕೆ ಹೇಳಿ ಹೋಗಿದ್ದಾರೆ....ಅಲ್ಲಿ ಇದ್ದಾನೋ ಇಲ್ಲವೋ ನೋಡಬೇಕು....ಎರಡು ದಿನವಂತೂ ಅಂಗಡಿಯ ಕಡೆಗೆ ಮಾತ್ರ ಬಂದಿಲ್ಲ...."

ಹೊರಡಿರಿನ್ನು ಎನ್ನುವ ರೀತಿಯಲ್ಲಿಯೇ ಮಲ್ಲಪ್ಪ ಮಾತು ಮುಗಿಸಿದ. ಆದರೆ ಅವನ ಮಗನೊಂದು ಬಿಡಬೇಕಲ್ಲ.

"ನಿಮಗೆ ಮನೆ ಸಿಕ್ಕೀತೆ ?" ಎಂದ ಮುಂದಾಗಿ

" ಇಷ್ಟು ಹೇಳಿದಮೇಲೆ ಸಿಗದೆ ಏನು ?"

ಲಲಿತೆ ಅಂಗಡಿಯ ಕಟ್ಟೆಯನ್ನು ಇಳಿಯುತ್ತಲೇ ನುಡಿದಳು.

" ನೋಡಿರಿ....! ಅಲ್ಲಿ ಅಟ್ಟದಮೇಲೆ ಇರುವನು ಶ್ರೇಯಾಂಸ."

ಎಂದು ಎರಡು ಹೆಜ್ಜೆ ಮುಂದೆ ಬಂದ ಆತ....ಇದು ಮಲ್ಲಪ್ಪನಿಗೆ ಸಹನವಾಗಲಿಲ್ಲ. ಕೆರಳಿದ ಸ್ವರದಲ್ಲಿಯೇ ಆತ ಮಗನಿಗೆ ನುಡಿದ.

" ನೋಡು ! ಆ ಗಿರಾಕಿ ಏನು ಕೇಳ್ತದೆ ಕೊಡು..."

ಈ ತಂದೆ ಮಕ್ಕಳ ಚಿತ್ರನನ್ನು ಕಂಡು ಅವಳಿಗೆ ತನ್ನ ವಿಷಯಕ್ಕೆ ಬೇಸರ ಬಂದಿತು. ಅವರ ನುಡಿಗನ್ನಡಿಯಲ್ಲಿ ಲಲಿತೆ ತನ್ನನ್ನು ಕಂಡುಕೊಂಡಿದ್ದಳು. ಅದರಿಂದ ಇಲ್ಲಿ ಶ್ರೇಯಾಂಸನನ್ನು ಕಾಣುವುದು ತಾನು ಉಚಿತವಾದೀತೆ ಎಂದು ಯೋಚಿಸತೊಡಗಿದಳು. ಇವರೊಂದು ತಿಳಿದುಕೊಂಡರೆ ಅವನಿಗೆ ಆಶ್ರಯವಿತ್ತ ಮನೆಯವರು ಇನ್ನೇನನ್ನು ತಿಳಿದುಕೊಳ್ಳುವರೋ ಯಾರಿಗೆ ಗೊತ್ತು ? ಎಂಬ ಪ್ರಶ್ನೆ ಅವಳ ಎದುರಿಗೆ ನಿಂತಿತು. ತುಸು ತಡೆದು ವಿಚಾರಿಸಹತ್ತಿದಳು. ಆದರೆ ಅವಳ ಹೃದಯ ಮಾತ್ರ ಒಂದೇ ಸವನೆ ಶ್ರೇಯಾಂಸನನ್ನು ನೆನೆಯುತ್ತಿತ್ತು ; ಮನಸ್ಸು ಅವನನ್ನು ಕಾಣಲು ಆತುರಗೊಂಡಿತ್ತು. ಅದಕ್ಕೆ ಯಾವ ಬಂಧನಗಳ ಅರಿವೂ ಆಗ ಇರಲಿಲ್ಲ....ಅದರಿಂದ

ಶ್ರೇಯಾಂಸನ ಇರವನ್ನು ಶೋಧಿಸುತ್ತ ಮುಂದೆ ಮುಂದೆ ಸಾಗಿದ್ದಳು. ಆದರೂ ಅವಳೊಬ್ಬಳಿಗೇ ಮನೆ ಮನೆ ಕೇಳುತ್ತ ತಿರುಗುವ ಸಾಹಸ ವಾಗುವಂತಿರಲಿಲ್ಲ. ಅದಕ್ಕಾಗಿ ತನ್ನ ಜೊತೆಗಿದ್ದ ಗೌಡರ ಆಳನ್ನೂ ಕರೆದುಕೊಂಡಳು. ತುಸು ಹೊತ್ತು ಇಬ್ಬರೂ ಮೌನವಾಗಿಯೇ ಸಾಗಿದ್ದರು. ತನ್ನ ಒಡತಿಯ ಉದ್ದೇಶ ತಿಳಿಯದೆ ಗೊಂದಲದಲ್ಲಿ ಬಿದ್ದ ಆಳು ಕೇಳಿದ,

"ಹಾಸ್ಪಿಟಲಿನ ಕಡೆಗೆ ಹೋಗುವುದೇ ?"

"ಸಂಗಪ್ಪ ಬೇಡವೆಂದು ಬಿಟ್ಟುಹೋಗಿರುವನು....ಮತ್ತೇಕೆ ಅಲ್ಲಿ ಹೋಗುವುದು....?"

"ಹಾಗಾದರೆ ಇತ್ತೆಲ್ಲಿ ?"

"ಇಲ್ಲೇ ನಮ್ಮೂರಿನವರೊಬ್ಬರು ಇದ್ದಾರೆ...."

"ಅಲ್ಲಿ ಗೌಡರು ಬಂದು ನೋಡಿದರೆ....?"

"ಅಷ್ಟರಲ್ಲಿ ಬಂದುಬಿಡೋಣಲ್ಲ...."

ಮತ್ತೆ ಸ್ವಲ್ಪ ಹೊತ್ತು ಮೌನವಾಗಿ ಸಾಗಿದರು. ಹೋಳಿಯ ಕಟ್ಟೆ ಹಾಗೂ ಜೈನ ಬಸದಿಗಳ ಸ್ಥಾನ ಅವಳಿಗೆ ಗೊತ್ತಿತ್ತು. ಅತ್ತ ಕಡೆಗೇ ಅವಳು ಅವಸರದಿಂದ ಸಾಗಿದ್ದಳು. ಬೆಳತನಕ ನಿದ್ದೆ ಕಾಯ್ದು ಕೆಂಪಾದ ಕಣ್ಣು, ಆಲಸ್ಯ ತುಂಬಿದ ಮೈಯನ್ನು ಎಳೆದುಕೊಂಡು ಆಳು ಬೆನ್ನು ಹತ್ತಿದ್ದ. ಹಾಸಿಗೆಯಿಲ್ಲದೆ ಹೊರಳಾಡಿ ಮಲಿನಗೊಂಡ ಪರಟು, ಮೊಳಕಾಲವರೆಗೆ ಇಳಿಬಿದ್ದ ಪಟಕೆಯ ತುದಿ, ನೆಲವನ್ನು ಉಡುಗುವ ದೋತರ, ಪಟಕೆಯ ಕಟ್ಟು ಕಣ್ಣು ಮೇಲೆ ಸರಿದ ಒಕ್ಕಣ್ಣ ನೋಟಗಳಿಂದ ಅವನೊಬ್ಬ ಅಸಭ್ಯವ್ಯಕ್ತಿಯೇ ಆಗಿದ್ದ. ಹೇಳಿ ಕೇಳಿ ಗೌಡರ ಆಳು, ಕುಡುಕ. ಆದರೂ ಲಲಿತೆಯ ಅಂಗರಕ್ಷಕ. ಅವಳು ಹಾಗೆಯೇ ಮುಂದೆ ಸಾಗಿದುದನ್ನು ಕಂಡು ಮತ್ತೆ ಕೇಳಿದ,

"ಇನ್ನೂ ಎಷ್ಟು ದೂರ ಅವರ ಮನೆ ?"

"ಇಲ್ಲೇ ಬಂದಿತು ಬಾ...."

ಎಂದು ಲಲಿತೆ ಒಂದು ಮನೆಯ ಹತ್ತಿರ ನಿಂತಳು. ಓಣಿಯೊಳಗಿನ ಜನರು ಕುತೂಹಲದಿಂದ ಇವರನ್ನು ನೋಡುತ್ತಿದ್ದರು. ಅವರ ಕಡೆಗೆ ಲಕ್ಷ್ಯವನ್ನೇ ಕೊಡದೆ ಲಲಿತೆ ಆಳಿಗೆ ಹೇಳಿದಳು.

" ಈ ಮನೆಯಲ್ಲಿ ಶ್ರೇಯಾಂಸ ಇದ್ದಾನೇನು ಕೇಳು...."

ಆಳು ಮುಂದೆ ನಡೆದ. ಲಲಿತೆ ಸೆರಗನ್ನೊಮ್ಮೆ ಸಾವರಿಸಿಕೊಂಡಳು. ಕೊರಳೊಳಗೆ ತೊಡಕು ಬಿದ್ದ ಮುತ್ತಿನ ಸರಗಳನ್ನೊಮ್ಮೆ ಸರಿಪಡಿಸಿಕೊಂಡಳು. ಆದರೆ ಅವಳ ಯಾವ ಚಟುವಟಿಕೆಯಲ್ಲೂ ಚಾಂಚಲ್ಯವಿರಲಿಲ್ಲ, ಚಪಲತೆಯಿರಲಿಲ್ಲ. ಗಾಂಭೀರ್ಯವಿತ್ತು. ಮುಖದಲ್ಲೂ ಕೂಡ ಅದೇ ಭಾವವಿತ್ತು.

ಆಳು ಒಂದೆರಡು ಮನೆಗಳಲ್ಲಿ ಕೇಳಿ ಹೊರಗೆ ಬಂದ.

"ನಮ್ಮೂರವರು ಅಂತ.. ಹೇಳು...." ಎಂದು ಲಲಿತೆ ಸೂಚಿಸಿದಳು.

ಅವನ ವೇಷವನ್ನು ಕಂಡು ಅವರಿಗ ಏನೆನ್ನಿಸಿತೋ ಏನೋ ಸ್ವಲ್ಪ ಸಿಡುಕಿನಿಂದಲೇ ನುಡಿದರು.

"ಏನು ಹುಚ್ಚರ ಹಾಗೆ ಮಾಡುತಿ? ಸ್ವಲ್ಪ ನ್ಯಾಮೋಲಿನ ಅರಿವೆಯನ್ನಾದರೂ ಸುಧಾರಿಸಿಕೋ ತಪ್ಪಿ!"

ಆಳು ಹಾಗೆಯೇ ಉಟ್ಟ ದೋತರದ ತುದಿಯನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡು, ಎಡಗೈಯಿಂದ ತಲೆಯ ಮೇಲಿನ ಪಟಕೆಯನ್ನು ಕಣ್ಣಿನ ಮೇಲಿಂದ ಸರಿಸಿಕೊಳ್ಳುತ್ತ ಇನ್ನೊಂದು ಮನೆಯಲ್ಲಿ ಹೋಗಿ ಏನನ್ನೋ ಕೇಳಿ. ಅಟ್ಟವನ್ನು ಮೇಲೇರಿ ಹೋಗಿ ನಿಂತು, ಗೆಲುವಿನ ಮುಖದಿಂದ ನೋಡಿ ಲಲಿತೆಯನ್ನು ಕೈಮಾಡಿ ಕರೆದ. ಲಲಿತೆಗೆ ಅವನ ಮೇಲೆ ತುಂಬ ಸಿಟ್ಟು ಬಂದಿತು. ಹೊರಗೆ ಬಂದು ತನಗೆ ದಾರಿಯನ್ನು ತೋರಿಸಿ ಕರೆದುಕೊಂಡು ಹೋಗುವಷ್ಟು ವ್ಯವಹಾರವಿಲ್ಲವಲ್ಲ ಇವನಿಗೆ ಎಂದುಕೊಂಡು ಒಳಗೊಳಗೇ ಕುದಿದಳು. ಆದರೂ ಶ್ರೇಯಾಂಸನನ್ನು ಕಾಣುವ ಆತುರದಿಂದ ಮನೆಯೊಳಗೆ

ಹೋಗಿ, ಹೊರ ಮಗ್ಗುಲಿಗೇ ಇರುವ ಪಾವಟಣಿಗೆಗಳನ್ನು ಹತ್ತಿ ಮೇಲೆ ಹೋದಳು. ಹುಚ್ಚನಂತೆ ನಿಂತ ಆಳನ್ನು ಸರಿಸಿ ಎದುರಿಗಿರುವ ಕೋಣೆಯ ಬಾಗಿಲನ್ನು ನೂಕಿದಳು. ಆ ಬಾಗಿಲ ಮೇಲೆ ಶ್ರೇಯಾಂಸನ ಹೆಸರಿದ್ದುದೇ ಅವಳಿಗೆ ಅಷ್ಟು ಧೈರ್ಯವನ್ನು ಕೊಟ್ಟದ್ದಿತು. ಆದರೆ ಅವಳು ಎದುರಿಗೆ ಕಂಡುದೇನು?

ಶ್ರೇಯಾಂಸ ಮೈಮೇಲೆ ಎಚ್ಚರವಿಲ್ಲದೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಾನೆ! ಮಿಣಿ ಮಿಣಿ ಉರಿಯುವ ಲ್ಯಾಂಪೊಂದು ಮೂಲೆಯಲ್ಲಿದೆ. ಟ್ರಂಕಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದ ನಾಲ್ಕಾರು ಪುಸ್ತಕಗಳು! ತಲೆದಿಸೆಯಲ್ಲಿ ತೆರೆದ ಪುಸ್ತಕವೊಂದು ಹಾಗೇ ಬಿದ್ದಿದೆ. ಜ್ವರದಲ್ಲಿ ಎಚ್ಚರವಿಲ್ಲದೆ ಕೈತಾಗಿ ಉರುಳಿದ ನೀರಿನ ತಂಬಿಗೆ. ಅದರ ನೀರು ಹಾಸಿಗೆಯ ಬುಡದಲ್ಲಿ ಹೋಗಿ ಒದ್ದೆ ಮಾಡಿವೆ. ಇದೀಗ ಅಂಚೆಯಾಳು ಬಂದು, ಬಾಗಿಲಿನ ಸಂದಿಯೊಳಗಿಂದ ಒಳಗೆ ಒಗೆದ ಮುಚ್ಚೋಲೆಯೊಂದು–ತೆಗೆದಿಡಲು ಯಾರೂ ದಿಕ್ಕಿಲ್ಲದೆ ಅಲ್ಲೇ ಬಿದ್ದಿದೆ. ನಾಲ್ಕಾರು ದಿನ ಕೋಣೆಯ ಕಸವನ್ನೇ ತೆಗೆದಂತಿರಲಿಲ್ಲ. ಅಲ್ಲೇ ಮೂಲೆಯಲ್ಲಿ ಕಸದ ಗುಂಪಿಗೆ ಜೊತೆಯಾಗಿ ಕಸಬರಿಗೆ ನಿಂತಿತ್ತು, ಲಲಿತೆಯ ಸ್ವಾಗತಕ್ಕಾಗಿ. ಏನನ್ನೋ ಬರೆದ ನಾಲ್ಕಾರು ಹಾಳೆಗಳು ಕೋಣೆಯ ತುಂಬ ಹರವಿದ್ದವು. ಬೆಳಗಿನ ತಂಗಾಳಿಗೆ ಅವು ಹಾರಿದ್ದವೇನೋ! ಹೇಗೋ ಹರಡಿ ಶ್ರೇಯಾಂಸನ ಹೃದಯವನ್ನು ಬಂದವರ ಎದುರಿಗೆ ತೆರೆದು ತೋರಿಸುವಂತಿದ್ದವು.

ಇದಾವುದರ ಕಡೆಗೂ ಲಲಿತೆಯ ಲಕ್ಷ್ಯವೇ ಹೋಗಲಿಲ್ಲ. ಆತುರದಿಂದ ಹೋಗಿ ಶ್ರೇಯಾಂಸನ ಮೈಯನ್ನು ಮುಟ್ಟಿ ನೋಡಿದಳು. ಕೈಸುಡುವಂತಿದ್ದಿತು ಜ್ವರ. ತಂಪು ಕೈಯು ತಗುಲಿದುದಕ್ಕೆ ಮೈ ಮುದುರಿಕೊಂಡು, ಕಣ್ದೆರದ ಶ್ರೇಯಾಂಸ. ಒಳನಟ್ಟ ಕಣ್ಣು! ಜ್ವರದಿಂದ ಕೆಂಪಾಗಿ ನಿಸ್ತೇಜವಾಗಿ ಹುಣಸೆಯ ಪಕ್ಕದಂತಿದ್ದುವು. ಬೆಳೆದ ಗಡ್ಡ, ಒಣಗಿ ಬಿಳುಪೊಡೆದ ತುಟಿಗಳು ಶ್ರೇಯಾಂಸನ

ಮುಖವನ್ನು ವಿದ್ರೂಪಗೊಳಿಸಿದ್ದುವು. ಜ್ವರದಿಂದ ಅರಳುತ್ತಿರುವ ಮೂಗಿನ ಹೊರಳೆಗಳು ಅವನ ಹೃದಯದ ಹೊಡೆತವನ್ನು ಸೂಚಿಸು ವಂತಿದ್ದುವು. ಜ್ವರದ ಮಬ್ಬಿನಲ್ಲಿ ಇದ್ದುದರಿಂದ ಲಲಿತೆಯ ಗುರುತು ಶ್ರೇಯಾಂಸನಿಗೆ ಒಮ್ಮೆಲೇ ಹತ್ತಲಿಲ್ಲ. ಬಹಳ ಹೊತ್ತಿನ ವರೆಗೆ ಅವಳ ಮುಖವನ್ನೇ ನಿಟ್ಟಿಸತೊಡಗಿದ.

"ನಾನಾರು ಗುರುತು ಹತ್ತಲಿಲ್ಲ....?"

ಲಲಿತೆಯೇ ನಡುಗುವ ಸ್ವರದಲ್ಲಿ ಕೇಳಿದಳು. ಧ್ವನಿಯಲ್ಲಿ ತಾರುಣ್ಯವಿತ್ತು. ಸ್ವಲ್ಪ ತಡೆದು ಶ್ರೇಯಾಂಸ ನುಡಿದ....

"ಇ....ಲ್ಲ !"

ಲಲಿತೆ ಆಳಿನ ಕಡೆಗೆ ಹೊರಳಿ "ಕೆಳಗೆ ಮನೆಯಲ್ಲಿ ಯಾರಿದ್ದಾರೆ ನೋಡು ! ಇಲ್ಲಿ ಕರೆ...." ಎಂದು ಹೇಳಿದಳು.

ಆಳು ಗಾಬರಿಯಿಂದ ಕೆಳಗೆ ಹೋದ. ಲಲಿತೆ ವಿಚಾರಮಗ್ನ ಳಾಗಿ ಯಾವುದೋ ಲೆಕ್ಕದಲ್ಲಿ ಕುಳಿತಳು. ಎರಡು ನಿಮಿಷ ಕಳೆದಿರಬೇಕು.

"ಲಲಿ....ತಾ....!"

ಎಂದು ಉದ್ಗರಿಸಿದ ಶ್ರೇಯಾಂಸ. ಜಗತ್ತಿನೊಳಗಿನ ಆಶ್ಚರ್ಯ ವೆಲ್ಲ ಆ ಮೂರೇ ಅಕ್ಷರಗಳಲ್ಲಿ ಸೇರಿ ನಿಂತಂತೆ ಇತ್ತು !

"ಶ್ರೇಯಾಂಸ !" ಎಂದಳು ಲಲಿತೆ, ಅವನ ಹಣೆಯ ಮೇಲೆ ಕೈಯಾಡಿಸುತ್ತ.

ಸ್ವಲ್ಪ ಹೊತ್ತಿನಲ್ಲಿ ಕೆಳಗಿನ ಮುದಿ ಹೆಂಗುಸೊಬ್ಬಳು ಮೇಲೆ ಬಂದಳು. ರೊಟ್ಟಿಯನ್ನು ಮಾಡುತ್ತಿದ್ದವಳು ನಡುವೆ ಎದ್ದು ಬಂದಂ ತಿತ್ತು. ಕೈಗಳನ್ನು ತೊಳೆದುಕೊಂಡಿದ್ದರೂ ಬಳೆಗಳಲ್ಲೆಲ್ಲ ಸುತ್ತಿದ ಹಿಟ್ಟು ಇನ್ನೂ ಹಾಗೇ ಇತ್ತು. ಶ್ರೇಯಾಂಸನ ಕೋಣೆಯಲ್ಲಿ ಲಲಿತೆಯನ್ನು ಕಂಡೊಡನೆಯೇ ಗಾಬರಿಯಿಂದ ಕೇಳಿದಳು.

"ನೀವು ಯಾವಾಗ ಬಂದಿರಿ ?"

"ಈಗ ಒಂದರ್ಧ ತಾಸಾಯಿತು...."

"ನಿಮಗ ಯಾವಾಗ ಹೇಳಿದರು ಬಂದು ?"

ಲಲಿತೆಗೆ ಏನು ಉತ್ತರ ಹೇಳಬೇಕೆಂಬುದು ತಿಳಿಯದೆ ಕೇಳಿದಳು.

"ಯಾರು ?"

"ಮೊನ್ನೆ ನಮ್ಮ ಭಮ್ಮೀಶಾ, ಯಾರೋ ನಿಮ್ಮೂರವರಿಗೆ ಹೇಳಿದ್ದನಂತೆ ಸಂತೆಯ ದಿವಸ. ಮರೆಯದೆ ನಿಮಗೆ ಹೋಗಿ ತಿಳಿಸಿರಿ ಅಂತ...."

"ನಮಗೆ ಯಾರೂ ಹೇಳಿಲ್ಲ !"

ಆಳು ಏನೂ ಅರಿಯದೇನೇ ನಡುವೆ ನುಡಿದ.

"ನೋಡು ತಾಯಿ ! ಎಂಥಾ ಜನರು ಈಗಿನವರು ? ಹುಡುಗ ಎರಡು ದಿವಸ ಆಯಿತು .... ಒಂದು ಅಗಳು ಮುಸುರೆ ಬಾಯಿಗೆ ಹಚ್ಚಿಲ್ಲ .... ಯಾರ ಮಕ್ಕಳೋ ಅವರ ಮನೆಯೊಳಗೇ ಇದ್ದರೆ ನೆಟ್ಟಗವ್ವ....ನಾವಾದರೂ ಏನು ಮಾಡೋಣು ಹೇಳಿ ಕಳಿಸಿದ್ದೆವು...."

"ನಿಮ್ಮ ಕಡೆಗೆ ಏನು ತಪ್ಪ ಅದ...."

ಎಂದು ಲಲಿತೆ ನುಡಿದು, ಆಳಿನ ಕಡೆಗೆ ಹೊರಳಿ ಹೇಳಿದಳು.

"ಗೌಡರು ಬಂದೊಡನೇ ಇಲ್ಲಿಗೇ ಕರೆದುಕೊಂಡು ಬಾ.... ಹೋಗು....ಹಾಗೆಯೇ ಟಾಂಗಾ ಒಂದನ್ನ ತಕ್ಕೊಂಡು ಬನ್ನಿರಿ...."

ಆಳು ನಡೆದ. ಅಷ್ಟರಲ್ಲಿ ಮನೆಯ ಹೆಂಗಸು ತಡೆದು ಕೇಳಿದಳು :

"ಒಂದು ಕಪ್ಪು ಚಹಾ ಮಾಡುವೆ ತಕ್ಕೊಂಡು ಹೋಗಲಿ ಅಲ್ಲ....!"

"ಈಗೇನೂ ಬೇಡ. ತಗೊಳ್ಳಲಿಕ್ಕೆ ಚಹ ಎಲ್ಲಿ ಹೋಗತದ....?"

ಎಂದು ಲಲಿತೆ ಹೇಳಿದಳು.

"ನೀವು ಜಳಕ ಇಲ್ಲದೆ ಏನೂ ತಕ್ಕೊಳ್ಳುವದಿಲ್ಲ ಏನೋ !

ಬಾಳಪ್ಪನ ಸೊಸೆಯವ್ವ ನೀನು...."

ಎಂದು ಉದ್ಗರಿಸಿ ಆ ಮುದುಕಿ ಮೆಲ್ಲನೆ ಕೆಳಗೆ ಹೋದಳು. ಆಗಂತುಕವಾಗಿ ಬಂದ ಅಪರಿಚಿತ ಅತಿಥಿಗಳನ್ನು ಸತ್ಕರಿಸುವ ಬಗೆಯನ್ನು ಕಾಣದೆ ಭಾರವಾದ ನಡಿಗೆಯಿಂದ ಅವಳು ಸಾಗಿದ್ದಳು.

ಲಲಿತೆಗೆ ಎಂದಿಲ್ಲದ ಆನಂದ ! ನಾನೂ ಗರತಿಯಂತೆ ಕಂಡೆನಲ್ಲ ....ಈ ಮುದುಕಿಗೆ....! – ಎಂಬ ಭಾವನೆಯೇ ಅವಳ ಆನಂದಕ್ಕೆ ಕಾರಣವಾಗಿರಬೇಕು.

ಬಾಳಪ್ಪ ಶ್ರೇಯಾಂಸನನ್ನು ತನ್ನ ಗುರುತಿನವರ ಮನೆಯಲ್ಲಿ ಇಟ್ಟುಹೋಗಿದ್ದ. ಅದೂ ಒಕ್ಕಲುತನಮಾಡಿ ಉಪಜೀವಿಸುವ ಒಂದು ಕುಟುಂಬವು, ಕೈಮೇಲಿನ ಹೊಟ್ಟೆಯುಳ್ಳವರದು. ಆದರಿಂದ ಶ್ರೇಯಾಂಸನ ಊಟಕ್ಕೆಂದು ತಿಂಗಳಿಗೆ ಕೆಲವೊಂದು ಕಾಳುಕಡ್ಡಿಗಳನ್ನು ಕೊಡುವದನ್ನು ಗೊತ್ತುಮಾಡಿದ್ದ ಬಾಳಪ್ಪ. ಅವರೇ ತಮ್ಮ ಅಟ್ಟದ ಮೇಲಿನ ಒಂದು ಕೋಣೆಯನ್ನು ಶ್ರೇಯಾಂಸನಿಗಾಗಿ ತೆರವುಮಾಡಿಕೊಟ್ಟಿದ್ದರು. ಅದಕ್ಕೂ ತುಸು ಬಾಡಿಗೆಯನ್ನು ತೆಗೆದುಕೊಳ್ಳುತ್ತಿದ್ದರು. ಹೀಗಿದ್ದೂ ಕೂಡ ಶ್ರೇಯಾಂಸ ಅವರ ಮನೆಯ ಮಕ್ಕಳನ್ನು ಸಂಜೆ ಮುಂಜಾವುಗಳಲ್ಲಿ ಮುಂದೆ ಕೂಡಿಸಿಕೊಂಡು ಕತೆ ಹೇಳುವ. ಸಾಲೆಗೆ ಹೋಗುತ್ತಿರುವ ಅವರ ಹುಡುಗರಿಗಂತೂ ಮನೆಯಲ್ಲಿಯ ಶಿಕ್ಷಕನೇ ಆಗಿಬಿಟ್ಟಿದ್ದ. ಕನ್ನಡ ಮಾತನಾಡುವ ಹುಡುಗರವರು ಸಾಲೆಯಲ್ಲಿ ಮರಾಠಿಯನ್ನೇ ಕಲಿಯುತ್ತಿದ್ದರು ! ಆದರಿಂದ ಶಿಕ್ಷಣದಲ್ಲಿ ಕಾಣಬೇಕಷ್ಟು ಪ್ರಗತಿಯು ಕಂಡುಬರುತ್ತಿರಲಿಲ್ಲ. ಈ ದುರ್ದೆಶೆಯನ್ನು ಕಂಡು, ಆ ಮಕ್ಕಳಿಗೆ ಮನೆಯಲ್ಲಿ ಕನ್ನಡ ಅಕ್ಷರಗಳನ್ನು ಹೇಳಿಕೊಡಲು ಆರಂಭಿಸಿದ ಶ್ರೇಯಾಂಸ. ತನ್ನ ಹತ್ತಿರ ಇದ್ದ ಸ್ವಲ್ಪ ದುಡ್ಡನ್ನು ವೆಚ್ಚಮಾಡಿ ಚಿಕ್ಕ ಚಿಕ್ಕ ಕನ್ನಡ ಪುಸ್ತಕಗಳನ್ನು ತರಿಸಿಕೊಟ್ಟ. ಇದರಿಂದಂತೂ ಆ ಎಳೆಯ ಮಕ್ಕಳೆಲ್ಲ ಶ್ರೇಯಾಂಸನಿಗೆ ಬಹಳ ಹತ್ತಿರದವರಾದರು. ಮನೆಯಲ್ಲಿ ತಮ್ಮ ತಂಗಿಯರಿಲ್ಲದೆ

ಒಂದು ಕಟ್ಟನಲ್ಲಿ ಬೆಳೆದುಬಂದ ಶ್ರೇಯಾಂಸನಿಗೂ ಇಲ್ಲೊಂದು ಹಕ್ಕಿಗಳ ಗುಂಪು ಸಿಕ್ಕಂತಾಯಿತು. ಅದರಲ್ಲಂತೂ ನಾಲ್ಕನೆಯ ತರಗತಿಯಲ್ಲಿ ಓದುತ್ತಿರುವ ಆ ಮನೆಯ ಕಲಾವತಿ ಎಂಬ ಹುಡಿಗೆ ಯಂತೂ ತುಂಬ ಸಲಿಗೆಯುವಳಾಗಿ ಬಿಟ್ಟಳು. ಯಾವಾಗಲೂ 'ಮಾಸ್ತರಿ ! ಮಾಸ್ತರಿ !' ಎಂದು ಶ್ರೇಯಾಂಸನ ಹತ್ತಿರವೇ ಸುಳಿ ದಾಡುವಳು. ಅವನ ವ್ಯವಸ್ಥೆಯೆಲ್ಲ ಅವಳಿಗೇ ಸೇರಿದುದಾಗಿದ್ದಿತು. ಶ್ರೇಯಾಂಸನ ಕೋಣೆಯ ಕಸ ಗುಡಿಸುವುದು, ನೀರಿನ ತಂಬಿಗೆ ತುಂಬಿಡುವುದು, ಊಟಕ್ಕೆ ಕರೆದುಕೊಂಡು ಹೋಗುವುದು ಇವೆಲ್ಲ ಕೆಲಸಗಳು ಅವಳವೇ ಆಗಿದ್ದುವು. ಮನೆಯ ಹಿರಿಯರೆಲ್ಲ ಹಗಲಿರುಳು ತೋಟದ ಕೆಲಸದಲ್ಲಿಯೇ ತೊಡಗಿರುತ್ತಿದ್ದುದರಿಂದ ಮನೆಯಲ್ಲಿ ಅತಿಥಿಯಂತೆ ಬಂದು ನಿಂತ ಶ್ರೇಯಾಂಸನ ವ್ಯವಸ್ಥೆ ಹೇಗಾದರೂ ನಡೆದುಹೋದರೆ ಅವರಿಗೆ ಸಾಕಾಗಿತ್ತು.

ಒಂದು ದಿನವಂತೂ ಹೊಸದಾಗಿ ಕನ್ನಡ ಓದಲು ಕಲಿತಾಗ ಕಲಾವತಿಯು ತನ್ನ ತಾಯಿಗೆ ಉತ್ಸಾಹದಿಂದಲೇ ಹೇಳಿದಳು....

"ರೊಟ್ಟಿ ಅಂತ ಬರೆಯಲಿಕ್ಕೆ ಬರತದಲ್ಲ !"

"ಅಂದರೆ ?"

"ಭಾಕರಿ ಎಂದು ಅನ್ನಬೇಕಾಗಿಲ್ಲ...."

ಕೋಲಂಬಸ ಅಮೇರಿಕೆಯನ್ನು ಶೋಧಿಸಿದಾಗ ಪಟ್ಟ ಅಭಿಮಾನ ಆನಂದಗಳಿಗಿಂತ ಹೆಚ್ಚಾಗಿಯೇ ಆನಂದಪಟ್ಟು, ಅಭಿ ಮಾನದಿಂದ ತಾಯಿಗೆ ಈ ಸಂಗತಿಯನ್ನು ಕಲಾವತಿ ಹೇಳಿದಳಾದರೂ ತಾಯಿಗೇನೂ ಮಗಳ ಮಾತಿನ ಅರ್ಥವಾಗಲಿಲ್ಲ. ಅಂದರೂ ಮಗಳು ಅಷ್ಟಕ್ಕೆ ಸುಮ್ಮನಿರದೆ ಮತ್ತೂ ಹೇಳಹತ್ತಿದಳು....

ನಾವು ಮನೆಯೊಳಗ ಮಾತಾಡುವ ಮಾತ ಎಲ್ಲಾನೂ ಬರೆಯಲಿಕ್ಕೆ ಬರತದಲ್ಲ....!"

"ಏನೋ ತಾಯಿ ! ನೀ ಹೇಳೋದೇ ನನಗೆ ತಿಳಿಯುವಲ್ದು...."

"ಅಲ್ಲs ಅವ್ವಾ, ಮರಾಠಿ ಮಾತ ಹೇಗೆ ಬರೆಯಲಿಕ್ಕೆ ಬರತದ ಹಾಗೆ ಕನ್ನಡ ಮಾತನ್ನೂ ಬರೆಯಲಿಕ್ಕೆ ಬರತದ...."

"ಏನು ಮಾತ ಇದ್ದೀತವ್ವ ಇವಳದು...."

"ಇಲ್ಲs....ಶ್ರೇಯಾಂಸ ಮಾಮಾ ಹೇಳಿಕೊಟ್ಟಿದಾರು...."

"ಒಳ್ಳೇ ಆದಲ್ಲ ನಿನ್ನ ಮಾಮಾ....ಅವನನ್ನೇ ಮದುವೆ ಮಾಡಿಕೊಂಡು ಬಿಟ್ಟ ಬಿಡು. ನಮ್ಮದೊಂದು ಚಿಂತೆ ತಪ್ಪಿತು...."

"ಇಲ್ಲದ್ದೊಂದು ಹೇಳುವಾಕಿ ಹೋಗ ನೀ...."

ಸಿಡುಕು ಲಜ್ಜೆಗಳಿಂದ ನುಡಿದು ಕಲಾವತಿ ದೂರ ಸರಿದು ಹೋಗುವಳು. ಇವನ್ನು ಕಂಡು ಒಳಗೆ ಕೆಲಸದಲ್ಲಿ ತೊಡಗಿದ ಅವರ ಅಜ್ಜಿಯು ನುಡಿಯುವಳು.

"ಈಕ ಮಾಡಿಕೊಂಡಾಳಾದರೂ ಲಕ್ಷ್ಮೀಬಾಯಿ ಒದ್ದು ಹೊರಗೆ ಹಾಕಿಯಾಳು...."

"ಹಾಕಿದರೆ ಇಲ್ಲೇ ಇದ್ದಾರ ಇಬ್ಬರೂ ತಗೋ....!"

ಕಲಾವತಿಯ ತಾಯಿಯು ಮಾತಿದು....

"ಇದ್ದಾರ ಆದರೂ ಇನ್ನೂ ಅರಿವೆಯ ಅಂಗಡಿಯವರು ಪಗಾರಾನೂ ಕೊಡುವದಿಲ್ಲವಲ್ಲ ಶ್ರೇಯಾಂಸನಿಗೆ...."

ಆ ಮುದುಕಿಯ ಮಾತು ನಿಜವೇ ಇದ್ದಿತು. ಇನ್ನೂ ಜವಳಿಯ ಅಂಗಡಿಯವರು ಶ್ರೇಯಾಂಸನಿಗೆ ಸಂಬಳವನ್ನೇನೂ ಕೊಡುತ್ತಿರಲಿಲ್ಲ. ಉಮೇದವಾರಿಯೆಂದು ಶ್ರೇಯಾಂಸ ಕೆಲಸಮಾಡುತ್ತಿದ್ದ. ಮೂರು ತಿಂಗಳು ಕೆಲಸಮಾಡಿದ ತರುವಾಯ ತಮ್ಮಲ್ಲಿ ಶ್ರೇಯಾಂಸ ಊಟಕ್ಕೆ ಬರಬಹುದೆಂದು ದೊಡ್ಡ ಮನಸ್ಸುಮಾಡಿ ಹೇಳಿದ್ದರು. ಆದರೆ ಅಂಗಡಿಯ ಮಾಲೀಕರು ಅನ್ಯ ಜಾತಿಯವರಾದುದರಿಂದ ಬಾಳಪ್ಪ ಅವರಲ್ಲಿ ಊಟಕ್ಕೆ ಕಳಿಸಲಿಕ್ಕೆ ಒಪ್ಪಲಿಲ್ಲ....ಹಣದ ರೂಪದಿಂದ ಇವನ ಊಟದ ವೆಚ್ಚ ಕೊಡಲಿಕ್ಕೆ ಅಂಗಡಿಯವರೂ ಮನಸ್ಸು ಮಾಡಲಿಲ್ಲ. ಹಾಗೇ ಕುಂಟುತ್ತ ಸಾಗಿದ್ದಿತು ಶ್ರೇಯಾಂಸನ ಕೆಲಸ. ಒಂದು ದಿನ

ಅಂಗಡಿಗೆ ಹೋದರೆ ಎರಡು ದಿನ ಸಾರ್ವಜನಿಕ ವಾಚನಾಲಯದಲ್ಲಿ ಓದಿ ವೇಳೆ ಕಳೆಯುತ್ತಿದ್ದ ಶ್ರೇಯಾಂಸ. ಅದರಿಂದ ಅಂಗಡಿಯವರಿಗಂತೂ ಅವನೊಬ್ಬ ವಿಚಿತ್ರ ಹುಡಗನಂತೆಯೇ ಕಂಡಿದ್ದ. ನೌಕರಿ ಮಾಡುವ ಲಕ್ಷಣ ಇವನಲ್ಲಿ ತೋರುವದಿಲ್ಲವೆಂದು ಅವರು ತಿಳಿದುಕೊಂಡಿದ್ದರು. ಬಾಳಪ್ಪನ ಬಹು ದಿನದ ಪರಿಚಯುವನ್ನೂ, ಸ್ನೇಹವನ್ನೂ ಮುರಿಯಲಾಗದುದಕ್ಕೆ ಇರುವಷ್ಟು ದಿನ ಇರಲಿ ಎಂದು ಸುಮ್ಮನಿದ್ದರು. ಸಂಬಳವಿಲ್ಲದೆ ದುಡಿಯುವವ ಯಾವಾಗ ಬಂದು ಯಾವಾಗ ಹೋದರೇನು, ಅಂಗಡಿಯವರಿಗೆ ನಷ್ಟವಿಲ್ಲವಷ್ಟೇ?

ಸ್ವಲ್ಪ ಹೊತ್ತಿನಲ್ಲಿಯೇ ಚಂದೂರಗೌಡರು ಕುದುರೆಯ ಗಾಡಿಯೊಂದನ್ನು ತಕ್ಕೊಂಡು ಬಂದರು. ಲಲಿತೆಗಾಗಿ ಏನನ್ನೂ ಮಾಡಲು ಸಿದ್ಧರವರು.... ಅದರಿಂದ ಶ್ರೇಯಾಂಸನನ್ನು ಒಂದು ಒಳ್ಳೆಯ ಆಸ್ಪತ್ರೆಗೆ ಒಯ್ದು ಹಾಕಲು ಲಲಿತೆಗೆ ಕಷ್ಟವಾಗಲಿಲ್ಲ. ಆಸ್ಪತ್ರೆಯ ಡಾಕ್ಟರರಿಂದ ಶ್ರೇಯಾಂಸನಿಗೆ ವಿಷಮಶೀತ ಜ್ವರವೆಂಬುದನ್ನು ತಿಳಿದುಕೊಂಡು ಲಲಿತೆ ಇನ್ನಷ್ಟು ಗಾಬರಿಯಾದಳು. ಔಷಧೋಪಚಾರದ ವ್ಯವಸ್ಥೆಯನ್ನೆಲ್ಲ ಮಾಡಲು ಹೇಳಿದಳು. ಹಣದ ಬಗ್ಗೆ ಯಾವ ಚಿಂತೆಯನ್ನೂ ಮಾಡದಂತೆಯೂ ಆರೈಕೆ ಚೆನ್ನಾಗಿ ನಡೆಯುವಂತೆಯೂ ಡಾಕ್ಟರರಿಗೆ ವಿನಂತಿಮಾಡಿಕೊಂಡಳು. ಕಲಾವತಿಯು ಈಗ ಒಂದು ವಾರದ ಹಿಂದೆ ಸೋದರಮಾವನ ಮನೆಗೆ ಹೋದುದರಿಂದ ಶ್ರೇಯಾಂಸನ ವ್ಯವಸ್ಥೆಯು ಮನೆಯಲ್ಲಿ ಆಗದೆ ಹೋಯಿತೆಂಬುದನ್ನೂ ತಿಳಿದುಕೊಂಡಳು. ಇನ್ನು ಊರಿಗೆ ಹೋಗಿ, ಶ್ರೇಯಾಂಸನ ಮನೆಯಿಂದ ಯಾರನ್ನಾದರೂ ಕಳಿಸದೆ ಗತಿಯಿಲ್ಲವೆಂದು ಭಾವಿಸಿ ಗೌಡರೊಡನೆ ಊರಿಗೆ ತೆರಳಿದಳು.

ಊಗಿ ಬಂಡಿಯಲ್ಲಿ ಕುಳಿತ ತರುವಾಯ ಗೌಡ ಲಲಿತೆಗೆ ಒಂದು ಮಾತನ್ನು ಕೇಳಿದ—

"ಇದೆಲ್ಲ ಆಯಿತು; ಆದರೆ ಇವನಾರು?"

ಲಲಿತೆ ಸ್ವಲ್ಪ ತಡೆದಳು. ಹಾಗೆಯೇ ಪ್ರಣಯದ ದೃಷ್ಟಿಯೊಂದನ್ನು ಗೌಡನ ಕಡೆಗೆ ಬೀರಿ, ದೃಷ್ಟಿಗೆ ದೃಷ್ಟಿಯನ್ನು ಸಂಧಿಸಿ ನುಡಿದಳು :

"ನೀವು ನನ್ನನ್ನು ಮೆಚ್ಚುವಂತೆ ಮಾಡಿದವನೀತ...."

"ಅಂದರೇನು ? ಮೆಚ್ಚು ಮದ್ದುಗಿದ್ದು ಮಾಡಿಕೊಟ್ಟಿದ್ದನೇ ?"

"ನೀವು ನನಗೆ ಒಲಿದಿದ್ದರೆ....?"

"ಇಲ್ಲವಾದರೆ ಇಷ್ಟೆಲ್ಲ ಸುಮ್ಮನೆ ಆಗುವುದೆ ?"

"ಎಷ್ಟಾದರೂ ಗಂಡಸರು....ಒಳಗೊಂದು ಹೊರಗೊಂದು...."

"ಅಂತೂ ಮೆಚ್ಚು ಮದ್ದು ಮಾಡಿಸಿಲ್ಲವೆನ್ನು...."

"ಹುಚ್ಚು ಹಿಡಿಸುವಂತೆ ಮಲ್ಲಿಗೆಯ ಬಳ್ಳಿಯನ್ನು ಮಾಡಿಸಿದ್ದೆ...."

"ಓಹೋ ! ಶ್ರೇಯಾಂಸನೇ ! ಅಂದು ಸಭೆಯಲ್ಲಿ ಮಾತನಾಡಿ ಜನರಿಗೆ ಹುಚ್ಚು ಹಿಡಿಸಿಬಿಟ್ಟವ...."

"ಅಹುದು; ಅವನೇ ಕ್ರಾಂತಿಪುರುಷ...."

"ಈ ಸಂಗತಿ ನಿನ್ನ ತಾಯಿಗೆ ಬೇರೆ ತಿಳಿಯಬಾರದಲ್ಲ !"

"ತಿಳಿದರೆ ತೀರಿತೇ ! ಜಿನಗೌಡ ಅವಳೂ ಕೂಡಿ ನನ್ನ ಜೀವವನ್ನು ಅರೆದು ಕುಡಿದೇಬಿಡುವರು...."

"ಅಂದಮೇಲೆ ನಾನೆಲ್ಲಿ ಹೋಗಲಿ....?"

"ತಿರುಗಿ ಡಾಕ್ಟರರಿಗೆ ಶರಣುಹೋಗಬೇಕಿಷ್ಟೇ...."

"ಡಾಕ್ಟರರಿಗೇಕೆ ?"

"ಅವರ ಆಸ್ಪತ್ರೆಯಲ್ಲಿ ಮಲಗಿರುವನಲ್ಲ...."

ಸ್ವಲ್ಪ ತಡೆದು "ನನ್ನನ್ನು ನಿಮಗೆ ಒಡಗಿಸುವವ !"

"ಜಿನಗೌಡನಿಗೂ ಶ್ರೇಯಾಂಸನಿಗೂ ಅಷ್ಟು ವೈರವೇ ?"

"ಇಲ್ಲದಿದ್ದರೆ ಶ್ರೇಯಾಂಸನಿಗೆ ಈಗೆಲ್ಲಿ ಊರುಬಿಡುವ ಪ್ರಸಂಗ ಬರುತ್ತಿತ್ತು. ಇವರೇ ಎಲ್ಲರೂ ಸೇರಿ ಅವನು ಊರುಬಿಟ್ಟು ಹೋಗುವಂತೆ ಮಾಡಿದರು....!"

"ಹಾಗೆಲ್ಲ ಮಾತನಾಡಬೇಡ. ನಿನ್ನನ್ನೂ ಊರು ಬಿಡಿಸಿ ಯಾರು !"

"ತಮಗೂ ಅದೇ ಬೇಕಾಗಿದೆಯಲ್ಲ....!"

ನಕ್ಕು ನುಡಿದಳು ಲಲಿತೆ. ಆಗಿನ ಅವಳ ಕಣ್ಣೊಳಗಿನ ಕುಣಿತ, ಮುಖದೊಳಗಿನ ಮೋಹಕತೆಗಳನ್ನು ಕಂಡು, ಗೌಡ ಅವಳ ಹತ್ತಿರ-ಹತ್ತಿರ ಸರಿದ. ಅವನ ಮೃದು ಸ್ಪರ್ಶದಿಂದ ಅವಳ ಕಪೋಲಗಳಲ್ಲಿ ಕೆಂಪು ಮೂಡಿತು. ಆ ಆರಕ್ತತೆಯನ್ನು ಕಂಡು ಗೌಡನಿಗೆ ಇನ್ನು ತಡೆಯಲಿಕ್ಕಾಗಲಿಲ್ಲ. ಅರಳಿದ ಕಮಲದ ಮಕರಂದವನ್ನು ಸವಿಯದೆ ದುಂಬಿ ಸರೋವರದ ತೀರದಲ್ಲಿ ಇದ್ದೀತೇ? ಹಾಗೆಯೇ ಭ್ರಮಿಸಲಿಕ್ಕೆ ಅದೇನು ವಿರಾಗಿಯೆ?

ಆ ಅನುರಾಗಿಗಳಿಬ್ಬರನ್ನೂ ಹೊತ್ತುಕೊಂಡು ಉಗಿಬಂಡಿಯು ಊರ ಕಡೆಗೆ ಭರದಿಂದ ಸಾಗುತ್ತಿತ್ತು.

೨೦

ನಾಳೆ ಆಷಾಢ 'ಅಷ್ಟಾಹ್ನಿಕ' ಪರ್ವವು ಆರಂಭವಾಗುವುದು. ಈ ಮ್ಲೇಂಛ ವಸತಿಯಲ್ಲಿ ನಿಂತು ನೀರು ಕುಡಿಯುವುದು ಬೇಡವೆಂದು ಬಾಳಪ್ಪನು ಆಸ್ಪತ್ರೆಯ ಮುಖ್ಯ ಡಾಕ್ಟರರ ಒಪ್ಪಿಗೆಯನ್ನು ಪಡೆದು ಶ್ರೇಯಾಂಸನನ್ನು ಊರಿಗೆ ಕರೆದುಕೊಂಡು ಬಂದ. ಶ್ರೇಯಾಂಸನ ಪ್ರಕೃತಿಯು ಇನ್ನೂ ಎದ್ದು ಅಡ್ಡಾಡುವಷ್ಟು ಸುಧಾರಿಸಿರಲಿಲ್ಲ. ಜ್ವರ ಬಿಟ್ಟು ಈಗ ಎಂಟು ದಿನಗಳು ಮಾತ್ರ ಕಳೆದಿದ್ದುವು. ನಲವತ್ತು ದಿನಗಳ ದೀರ್ಘ ವಿಷಮಶೀತಜ್ವರ. ಅದರಲ್ಲೂ ಡಬಲ್ ನಿಮೋನಿಯಾ ಗಳಿಂದ ಶ್ರೇಯಾಂಸ ತುಂಬ ಸೋತಿದ್ದ. ಮಗನ ಆರೈಕೆ ಮಾಡಿ ಸರಸವ್ವನೂ ಸೊರಗಿದ್ದಳು. ಮನೆಗೆ ಒಬ್ಬನೇ ಮಗ, ಅವನನ್ನೇ ಕೆಳಗೆ ಮೇಲೆ ನೋಡುತ್ತ ನಾಲ್ವರೂ ಸಂಸಾರ ಸಾಗಿಸಿದವರು. ಇಂದು ನಾಳೆ ಇಷ್ಟರಲ್ಲಿ ಸೊಸೆಯೂ ಮನೆಗೆ ಬರುವವಳು. ಇಂಥದರಲ್ಲಿ ಒಡಕು ದೈವ ಶ್ರೇಯಾಂಸನನ್ನೇ ಕಟ್ಟಿಕೊಂಡು ಹೋಗಿದ್ದರೆ ಸಂಸಾರದಲ್ಲೇನಿದೆ. ಇದೇ ಚಿಂತೆಯಲ್ಲಿ ಸರಸವ್ವ ಬೆಂದುಹೋಗಿದ್ದಳು. ಮನೆಗೆ ಮಗನನ್ನು ತಕ್ಕೊಂಡು ಬರುವಾಗೆಂದರೆ ಸರಸವ್ವ, ಹೊಸದಾಗಿ ಹಡೆದು ಕೂಸನ್ನು ತಕ್ಕೊಂಡು ಬರುವ ಬಾಣಂತಿಯಾಗಿದ್ದಳು. ಶ್ರೇಯಾಂಸ ಈಗೊಮ್ಮೆ ಅವಳ ಹೊಟ್ಟೆಯಿಂದ ಹುಟ್ಟಿ ಬಂದಂತೆಯೇ ಆಗಿದ್ದಿತು. ಮನೆಯಲ್ಲಿ ಎಲ್ಲರೂ ಅವನನ್ನು ಹಸುಗೂಸಿನಂತೆಯೇ ಕಾಣುತ್ತಿದ್ದರು. ಸುಂದರವ್ವ ನಂತೂ ಸೋದರಳಿಯನ ಔಷಧೋಪಚಾರಗಳಲ್ಲಿ ತನ್ಮಯಳಾಗಿದ್ದಳು. ಸಂಸಾರದ ಯಾವ ವಿಷಯಗಳಲ್ಲೂ ಆಸಕ್ತಿಯನ್ನು ತೋರದ ಪದ್ಮಪ್ಪನೂ ಕೂಡ ಅಳಿಯನ ಕೃಶವಾದ ಕಾಯವನ್ನು ಕಂಡು ಮರುಗಿದ.

ಬಸದಿಯಿಂದ ಬಂದ ಮೇಲೆ ದಿನಾಲು ಒಂದಿಷ್ಟು ವೇಳೆ ಕುಳಿತು ಶ್ರೇಯಾಂಸನ ಹತ್ತಿರ ನಾಲ್ಕು ಮಾತು ಆಡುವನು. ಮನೆಯಲ್ಲಿ ಕೆಲಸಕ್ಕೆ ಬೇಕೆಂದು ಲಕ್ಷ್ಮಿಯನ್ನು ಕರೆಯಿಸಿಕೊಂಡಿದ್ದರು. ಎರಡು ತಿಂಗಳಿಂದ ಆವರಿಸಿದ ದುಃಖದ ತೆರೆ ಸರಿದು ಮನೆಯು ಸ್ವಲ್ಪ ಉಲ್ಲಾಸದ ಮುಖವನ್ನು ಕಂಡಂತಾಗಿದ್ದಿತು. ಮಳೆಗಾಲದ ಮೋಡಗಳು ಸರಿದು ಹೂಬಿಸಿಲು ಬಿದ್ದಂತಾಗಿದ್ದಿತು. ಆ ಬಿಸಿಲು ಬಹಳ ಆನಂದದಾಯಕವಾಗಿರುತ್ತದೆ.

ಊರೊಳಗೆ ಶ್ರೇಯಾಂಸನ ಮನೆಯವರು ಎಲ್ಲರಿಗೂ ಬೇಕಾದವರು. ಅದರಿಂದ ಹೆಂಗಸರೂ ಗಂಡಸರೂ ಹಿಂಡು ಹಿಂಡಾಗಿಯೇ ಶ್ರೇಯಾಂಸನನ್ನು ನೋಡಲು ಬರುತ್ತಿದ್ದರು. ತನ್ನ ಬಸದಿ, ಜಪ ತಪಗಳನ್ನು ತೀರಿಸಿಕೊಂಡು ಸುಂದರವ್ವಳೊಬ್ಬಳು ಬರುವ ಹೋಗುವ ಜನರೊಡನೆ ಮಾತನಾಡಲಿಕ್ಕೆಂದೇ ಕುಳ್ಳಿರುತ್ತಿದ್ದಳು. ಬಂದ ಹೆಂಗಸರಲ್ಲಿ ಒಬ್ಬಳು ಸಹಜ ಅಂದಳು:

"ಅಂದು ಲಲಿತಾ ಮಿರಜಿಗೆ ಹೋಗಿರದಿದ್ದರೆ ಇಷ್ಟೊತ್ತಿಗೆ ಶ್ರೇಯಾಂಸ ಸತ್ತು ಹಳೆ ಮಾತಾಗುತ್ತಿತ್ತು...."

"ಆಕೇ ಒಬ್ಬಾಕಿ ಪದ್ಮಾವತಿದೇವಿ ಆಗಿಹೋದಂತೆ ಹೋದಳು.... ಸಿನೇಮಾ ನೋಡಲಿಕ್ಕೆ ಹೋದಾಕೆಗೆ ಶ್ರೇಯಾಂಸನ ಕಡೆಗೆ ಹೋಗುವ ಬುದ್ಧಿ ಹುಟ್ಟಬೇಕೆಂದರೆ...." ಸುಂದರವ್ವ ಅಂದಳು.

"ನಿಮ್ಮದೇ ಎಲ್ಲರ ಪುಣ್ಯ....ಖರೇವು ಅಂದರೆ ಅವಳ ಮನಸ್ಸಿನೊಳಗ ಪದ್ಮಾವತೀನೇ ಹೊಕ್ಕಿರಬೇಕು...."

"ಇಲ್ಲದಿದ್ದರೆ ಉಳಿಯೋದು ಸಾಧ್ಯವಿತ್ತೇನವ್ವ ಇಂತಾ ಉಪಸರ್ಗದೊಳಗಿಂದ ನಮ್ಮ ಮನೆತನ...."

"ಧರ್ಮ ಇದ್ದಲ್ಲಿ ಜಯ ಇರತದ ನೋಡು ಸುಂದರಾ....! ಎಲ್ಲೀ ಕಸಬಿಣಿ ಹೋಗಿ, ಹುಡುಗನ ವ್ಯವಸ್ಥೆ ಮಾಡಬೇಕೆಂದರೆ ಏನು ಸಣ್ಣ ಮಾತ? ರೊಕ್ಕಾ ಉಡಿಯೊಳಗೆ ಕಟ್ಟಿಕೊಂಡು ಬಾಗಿಲೊಳಗ

ಹೋಗಿ ಕುಳಿತರೂ ಲಗೂನೆ ಡಾಕ್ಟರ ಮನೆಯ ಹಾದಿ ತೋರಿಸಲಿಕ್ಕೆ ಬರುವುದಿಲ್ಲ ಯಾರೂ....!"

"ಇರತದಲ್ಲವ್ವ ಪೂರ್ವಜನ್ಮದ ಋಣಾನುಬಂಧ...."

"ಇರಲೀ, ನೆಟ್ಟಗಾಗಿ ಬಂದಂತ ಈಗ್ಯ ಏನಾದರೂ ತಿನ್ನಲಿಕ್ಕೆ ಹಾಕಿ ಮತ್ತ, ಅಳಿಯನಿಗೆ ಸುಂದರಾ...."

ಇನ್ನೊಬ್ಬ ಮುದುಕಿ ಎಚ್ಚರಿಸಿದಳು.

"ಹುಚ್ಚವ್ವ! ಇನ್ನೂ ಮೋಸಂಬಿ ಹಣ್ಣಿನ ರಸದ ಮೇಲಿದ್ದಾನ ಶ್ರೇಯಾಂಸ...."

"ಯಾರೋ ಹೇಳಿದ್ದರು....ಅದಕ್ಕೇ ಹೇಳಿದೆ ತಾಯಿ ನಾ—"

"ಹೇಳಲಿಕ್ಕೆ ಬೇಕs ಅಲ್ಲ...."

ಹೀಗೆ ಬಂದವರು ತುಸು ಹೊತ್ತು ಮಾತನಾಡಿ, ಶ್ರೇಯಾಂಸನ ಪ್ರಕೃತಿಯನ್ನು ನೋಡಿಕೊಂಡು ಹೋಗುವಾಗ....

"ಲಲಿತಾ ತಿರುಗಿ ಇವರ ಮನೆಯೊಳಗೆ ದೀಪ ಹಚ್ಚಿದಂತೆ ಆಯ್ತು ನೋಡು...." ಎನ್ನುತ್ತಿದ್ದರು....

"ಇಲ್ಲಾದರೆ ಎಲ್ಲಿಯ ನಂದೀಶ್ವರ ದೀಪದ ಪೂಜೆ, ಎಲ್ಲಿಯ ದೇವತೆಗಳ ಕತೆ, ಎಲ್ಲಾ ಕನಸಿನ ಮಾತೇ ಆಗುತಿತ್ತು! ಒಂದು ವೇಳೆ ಹುಡುಗನಿಗೆ ಏನಾದರೂ ಆಗಿದ್ದರೆ....ಸರಸಾ ಬಾಳಪ್ಪ ಏನು ಜೀವ ಗೀವ ಇಡತಿದ್ದರು ಅಂತೀ ಏನು?"

"ಜನರೊಳಗೆ ಮುಖ ತೋರಿಸುವಂಥದು ಏನು ಉಳಿದಿತ್ತು ಅವರಿಗೆ?"

"ಪದ್ಮಪ್ಪ ಅಂತೂ ಹೊತ್ತು ಇರವಾಗ್ಯ ದೀಕ್ಷೆ ತಕ್ಕೊಂಡು ಬಿಡಲಿದ್ದ...."

"ಅವನದೇನು ಬಿಡವ್ವ .... ಯಾವಾಗ ಆದರೂ ದೀಕ್ಷಾ ತಕ್ಕೊಳ್ಳುವವನೇ ಅವನು."

"ಎಂಥಾ ಪುಣ್ಯಾ ಇದ್ದಾದೀತು.... ಲಲಿತೆಯನ್ನು ಶ್ರೇಯಾಂಸ

ಮಲಗಿದಲ್ಲಿ ಎಳೆದುಕೊಂಡು ಹೋಗುವಂಥದು...."

ಶ್ರೇಯಾಂಸನ ಬೇನೆಯ ಮಾತು ನಡೆದಲ್ಲೆಲ್ಲ ಲಲಿತೆಯ ಸ್ತುತಿ ಯೊಡನೆಯೇ ಅದು ಕೊನೆಗೊಳ್ಳುತ್ತಿತ್ತು. ಆದರಂತೆ ಶ್ರೇಯಾಂಸನ ಮನೆಯವರಲ್ಲಿಯೂ ಲಲಿತೆಯ ವಿಷಯಕ್ಕೆ ಕೃತಜ್ಞತೆ ಹೆಚ್ಚಿತ್ತು. ಅವಳು ಶ್ರೇಯಾಂಸನನ್ನು ಕಾಣಲಿಕ್ಕೆ ಬಂದರೆ ಯಾರಿದ್ದರೂ ಎದ್ದು ಅವಳಿಗೆ ಕೂಡಲಿಕ್ಕೆ ಚಾಪೆಯನ್ನು ಹಾಸಿಕೊಡುತ್ತಿದ್ದರು. ಶ್ರೇಯಾಂಸ ನಿಗೆ ಹೊತ್ತು ಹೋಗದೆಂದು ಅವಳೂ ದಿವಸಕ್ಕೋ ಎರಡು ದಿವಸಕ್ಕೋ ಒಮ್ಮೆ ಬಂದು ತಾಸೆರಡು ತಾಸು ಹರಟೆ ಹೊಡೆದು ಹೋಗುತ್ತಿದ್ದಳು. ಆಗ ಶ್ರೇಯಾಂಸನ ಜೊತೆಗೆ ಅವಳಿಗೂ ಸ್ವಲ್ಪ ಚಹಮಾಡಿ ಕೊಡು ತ್ತಿದ್ದಳು, ಆದರದಿಂದ ಮಾತನಾಡಿಸುತ್ತಿದ್ದಳು.

ಶ್ರೇಯಾಂಸ ಲಲಿತೆಯರು ಸೇರಿದಾಗಲೆಲ್ಲ ಆ ಪುಸ್ತಕ ಈ ಪುಸ್ತಕಗಳ ಮಾತೇ ಹೊರಡುತ್ತಿದ್ದಿತು. ಮಿರಜಿಯಲ್ಲಿದ್ದಾಗ ಶ್ರೇಯಾಂಸ ಬರೆದ ಕತೆಗಳನ್ನೆಲ್ಲ ಅವಳು ಓದಿದ್ದಳು. ಅವನ ಸಾಮಾನುಗಳನ್ನು ಊರಿಗೆ ತರುವಾಗ ಅವುಗಳನ್ನೆಲ್ಲ ಜೋಪಾನ ವಾಗಿಟ್ಟುಕೊಂಡವಳೂ ಅವಳೇ. ಅವುಗಳಲ್ಲಿ 'ಆ ಕಣ್ಣೀರು' ಎಂಬ ಕತೆಯು ಅವಳ ಮನಸ್ಸನ್ನು ಬಹಳ ಸೆರೆ ಹಿಡಿದಿದ್ದಿತು....ಕೂಲಿ ಯವರಿಗೆ ಸಿರಿವಂತರಿಂದಾಗುವ ಕಷ್ಟವನ್ನು ಬಹಳ ಚೆನ್ನಾಗಿ ಚಿತ್ರಿಸ ಲಾಗಿತ್ತು ಅದರಲ್ಲಿ. ಹೊಟ್ಟೆಗಿಲ್ಲದೆ ಮೂರು ದಿನ ದುಡಿದ ಕೂಲಿ ಯವನು ಕೂಲಿಯನ್ನು ಕಾಣದೆ ಕೊನೆಗೆ ಅಡವಿಗೆ ಹೋಗಿ ಹತ್ತಿಯ ಕಟ್ಟಿಗೆಯನ್ನು ಕಿತ್ತಿ ತಂದು ಮಾರಿದರೆ ಆ ದುಡ್ಡನ್ನು ಕಸಿದುಕೊಂಡು ಹೋಗುವ ಒಕ್ಕಲಿಗನ ಉದ್ಧತ ವೃತ್ತಿಯನ್ನು ಆದರಲ್ಲಿ ತೋರಿಸ ಲಾಗಿತ್ತು. ಹತಾಶನಾದ ಕೂಲಿಯವನ ಕಣ್ಣಲ್ಲಿ ಕಂಡ ಆ ಕಣ್ಣೀರಿನ ಹನಿಯು ಶ್ರೇಯಾಂಸನ ಕಣ್ಣಿಗೆ ರಕ್ತದ ಹನಿಯಂತೆ ಕಂಡಿದ್ದಿತು. ಆ ಕಥೆಯೊಳಗಿನ ಕರುಣರಸವನ್ನು ಪೋಷಿಸಿಕೊಂಡು ಹೋದ ರೀತಿಯು ಬಹು ಮನೋಹರವಾಗಿತ್ತು. ಇಂಥ ಕತೆಗಳನ್ನು ನೆನೆದು

ಲಲಿತೆಯು ಆಗಾಗ ಶ್ರೇಯಾಂಸನಿಗೆ ಅನ್ನುತ್ತಿದ್ದಳು....

"ನೀನು ಮಿರಜಿಗೆ ಹೋಗಿ ಏನನ್ನೂ ಗಳಿಸಿಕೊಂಡು ಬರದಿದ್ದರೂ ಇಂಥ ನಾಲ್ಕಾರು ಕತೆಗಳನ್ನು ಬರೆದು ತಂದಿರುವಿ ಸಾಕು...."

"ದುಡ್ಡು ಗಳಿಸಲಿಕ್ಕೆಂದು ನಾನು ಹೋಗಿರಲೇ ಇಲ್ಲ...."

"ಆಮೇಲೇನು ಬೇನೆ ಬೀಳಲಿಕ್ಕೆ ಹೋಗಿದ್ದೆಯೋ?"

"ಅಲ್ಲ; ಗಳಿಸುವವರಿಗೆ ಇಲ್ಲಿ ಆತಂಕವಾಗಬಾರದೆಂದು ಹೋಗಿದ್ದೆ...."

"ಆಯಿತು, ಮತ್ತೆ ಬಂದು ಕುಳಿತೆಯಲ್ಲ....ಯಮುನಂತೆ...."

ಲಲಿತೆ ಮನಃಪೂರ್ವಕವಾಗಿ ನಗುವಳು .... ಶ್ರೇಯಾಂಸ ವಿಷಾದದ ಒಣನಗೆಯೊಂದನ್ನು ಬೀರಿ,

"ಏನೆಂದೆ?" ಎಂದು ಕೇಳುವ....

"ಏನಿಲ್ಲ....!" ಎನ್ನುವಳು....ಲಲಿತೆ.

ತನ್ನ ಈ ಮಾತುಗಳು ಮನೆಯ ಹಿರಿಯರ ಕಿವಿಗೆ ಬಿದ್ದರೆ ಮನಸ್ಸಿಗೆ ಬಾರವೆಂದು ತಿಳಿದು ಲಲಿತೆ ಮಾತನ್ನು ತಿರುಗಿಸಿ ಕೇಳುವಳು....

"ಈ ಪುಸ್ತಕ ಎಲ್ಲಿ ಸಿಕ್ಕಿತು ನಿನಗೆ?"

"ಮಿರಜಿಯಲ್ಲಿಯೇ; ಒಂದು ದಿನ ಕಲಾಪತಿ ತಂದುಕೊಟ್ಟಳು."

"ಎಲ್ಲಿ ಬಿದ್ದಿತ್ತಂತೆ....?"

"ಎಂದಿನಿಂದಲೋ ಅವರ ಮನೆಯಲ್ಲಿ ಬೋದಿಗೆಯ ಮೇಲೆ ಇಟ್ಟಿದ್ದರಂತೆ. ಯನಾರೂ ತೆರೆದು ನೋಡಿರಲಿಲ್ಲ ಕೂಡ. ನೋಡಿದ್ದರೂ ಒಂದು ವೇಳೆ ಅವರಿಗೇನು ತಿಳಿಯಬೇಕು ಅದರಲ್ಲಿ? ಕುಮಾರ ವ್ಯಾಸನ ಕನ್ನಡ ಮಹಾಭಾರತವಿದು! ಅದೂ ಕಾವ್ಯ ಕಲಾನಿಧಿಯ ಮುದ್ರಣ...."

"ಅಂತೂ ಅದರ ದೈವವೊಮ್ಮೆ ತೆರೆಯಿತು...."

"ಅದರ ದೈವವಲ್ಲ....ನನ್ನ ದೈವವೆನ್ನು...."

"ಈಗಾಗಲೇ ಓದಲಿಕ್ಕೆ ಆರಂಭಿಸಿ ಬಿಟ್ಟೆಯೋ ?"

"ಅಲ್ಲಿಯೇ ಓದಲಿಕ್ಕೆ ಆರಂಭಿಸಿದ್ದೆ. ನಡುವೆ ನಿಂತು ಹೋಯಿತು....ಈ ಹಾಳು ಜ್ವರವೊಂದು ಬಂದುಬಿಟ್ಟಿವಲ್ಲ...."

"ಈ ಜ್ವರ ಬರದಿದ್ದರೆ ನಾನೆಲ್ಲಿ ಇಲ್ಲಿಗೆ ಬರುತ್ತಿದ್ದೆ....? ಈ ಸೌಭಾಗ್ಯ ನನ್ನ ಆಯುಷ್ಯದಲ್ಲಿಯೇ ನನಗೆ ದೊರೆಯುತ್ತಿರಲಿಲ್ಲ...."

"ಸಾಕು ಸುಮ್ಮನಿರು, ಮಾವಾ ಬಂದ...." ಎಂದ ಶ್ರೇಯಾಂಸ.

ಲಲಿತೆ ಸುಮ್ಮನಾಗಿ ಎದ್ದು ನಿಂತಳು. ತಲೆಯ ಮೇಲಿನ ಸೆರಗನ್ನು ಸಾವರಿಸಿಕೊಂಡಳು. ಇತ್ತ ನೋಡಿಯೂ ನೋಡದಂತೆ ಪದ್ಮಪ್ಪ ಒಳಗೆ ಹೋಗಿಯೇ ಬಿಟ್ಟ. ಅವಳೂ ಬಂದು ಬಹಳ ಹೊತ್ತಾಯಿತೆಂದು ಮನೆಗೆ ನಡೆದಳು.

ಲಲಿತೆ ಈಗ ಊರಲ್ಲಿ ಬೇಕಾದವರ ಮನೆಗೆ ಹೋಗಿ ಬರುತ್ತಿದ್ದಳು. ಅದಕ್ಕೆ ಅವರ ತಾಯಿಯೂ ಅಡ್ಡಿಯನ್ನು ಮಾಡುತ್ತಿರಲಿಲ್ಲ. ಜಿನಗೌಡರಿಗೆ ಈಗ ಇತ್ತ ಮನಸ್ಸು ಹಾಕಲಿಕ್ಕೆ ಅವಕಾಶವಿರಲಿಲ್ಲ. ಅಕ್ಕಾಸಾನಿಯಾಯಿತು ತಾನಾಯಿತು ಇದ್ದು ಬಿಡುತ್ತಿದ್ದರು. ಅದರಲ್ಲೂ ಶ್ರೇಯಾಂಸನೇನೂ ತಮ್ಮ ಜೋಡಿಯಾಳಲ್ಲ; ತಾವೇ ಏರಿಸಿ ಮೇಲಿಟ್ಟುದು....ಈಗ ಉರುಳಿಸಿ ಬಿಟ್ಟುದಾಯಿತು .. ಎಂದು ಭಾವಿಸಿದ್ದರು. ಬಡ ಒಕ್ಕಲಿಗನ ಮಗನಾದ ಶ್ರೇಯಾಂಸನಿಗೆ ಊರ ಸಾರ್ವಜನಿಕ ಜೀವನದಲ್ಲಿ ಇರುವ ಸ್ಥಾನವೂ ಅಷ್ಟಕ್ಕಷ್ಟೆ. ಆದರಿಂದ ಶ್ರೇಯಾಂಸನ ಗಮನಾಗಮನಗಳಿಂದ ಆಗಬೇಕಾದ ಪರಿಣಾಮವಾದರೂ ಊರಲ್ಲಿ ಏನಿದೆ ?

* * * * *

ಆದೇ, ಊರ ಸಾಲೆಗೆ ಈಗ ಹೆಡ್ ಮಾಸ್ತರರಾಗಿ ಬಂದ ನಾಟ್ಯಾನಂದ ನೀರಲಕಟ್ಟಿ ಮಾಸ್ತರರಿಂದ ಮಾತ್ರ ಊರಲ್ಲಿ ತುಂಬ ಜಾಗೃತಿಯುಂಟಾಗಿತ್ತು. ಸಾಲೆಯ ಚಟುವಟಿಕೆಗಳಿಂದ ಹಿಂದಿನ ಆತ್ಮಾರಾಮ ಮಾಸ್ತರರ ಹೆಸರನ್ನು ಮರೆಯುವಂತಾಗಿದೆ ಈಗ. ಅದೂ

ಶೈಕ್ಷಣಿಕ ಕ್ಷೇತ್ರದಲ್ಲಲ್ಲ, ನಾಟಕ ರಂಗದಲ್ಲಿ ಮಾತ್ರ. ಬಂದ ಹೊಸದರಲ್ಲಿ ನೀರಲಕಟ್ಟಿ ಮಾಸ್ತರರು ಸಾಲೆಯ ವಿದ್ಯಾರ್ಥಿಗಳಿಂದಲೂ ಶಿಕ್ಷಕರಿಂದಲೂ ವರ್ಗಣಿ ಕೂಡಿಸಿ, ಒಂದು ಸ್ವರಪೆಟ್ಟಿಗೆಯನ್ನೂ ತಬಲಗಳನ್ನೂ ಶಿಕ್ಷಣದ ಉಪಕರಣಗಳೆಂದು ಮಾಡಿಕೊಂಡರು. ಆಮೇಲೆ ನಾಟಕಕ್ಕೆ ತೊಡಗಿದರು. ಮೊದಲೇ ಪರಿಚಿತವಾದ ಊರಲ್ಲಿ ಅವರ ಚಟುವಟಿಕೆಗಳು ಭರದಿಂದ ಮುಂದುವರಿಯಲು ಹೆಚ್ಚು ಹೊತ್ತು ಹಿಡಿಯಲಿಲ್ಲ. ಊರೊಳಗಿನ ನಾಲ್ಕು ಜನ ನಾಟ್ಯರಸಿಕರು ಅವರಿಗೆ ಸಹಾಯಕರಾಗಿ ನಿಂತರು. ಅಂದ ಮೇಲೆ ಕೇಳುವದೇನು? ಸಾಲೆಯ ಹೊರಗೂ ಒಳಗೂ ನೀರಲಕಟ್ಟಿ ಮಾಸ್ತರರ ಮಾತು ಧಾರಾಳವಾಗಿ ನಡೆಯಹತ್ತಿತ್ತು.

ನೀರಲಕಟ್ಟಿಯವರ ಜೀವನ ಧ್ಯೇಯಗಳೇ ಜನ ಪ್ರಿಯತೆ ಮನೋರಂಜನೆಗಳಾಗಿದ್ದುವು. ಇವೆರಡನ್ನೂ ಸಾಧಿಸುವ ಮಾರ್ಗವು ನಾಟಕವಾಗಿತ್ತು. ಅದರ ಮುಖಾಂತರ ಅವರು ಸಮಾಜದ-ನಾಡಿನ ಸೇವೆಯನ್ನು ಮಾಡಲು ಬಯಸುತ್ತಿದ್ದರು. ಅದಕ್ಕಾಗಿ ಮಹಾತ್ಮರು ರಾಟಿಯೊಂದನ್ನು ಸ್ವರಾಜ್ಯದ ಸಾಧನೆಯಲ್ಲಿ ಕೇಂದ್ರಸ್ಥಾನದಲ್ಲಿ ಇಟ್ಟುಕೊಂಡಂತೆ ನಾಟ್ಯಾನಂದರು ನಾಟಕವನ್ನು ನಂಬಿದ್ದರು. ಅದೇ ಅವರ ಬಾಳಿನ ಸೂತ್ರವಾಗಿತ್ತು. ಸಾಲೆಯ ಕೆಲಸ ತಮಗೆ ಅಷ್ಟೇನೂ ಮಹತ್ವದ್ದಲ್ಲ, ಸತ್ವಹೀನ ಶಿಕ್ಷಕರು ಬೇಕಾದರೆ ಅದನ್ನು ಸರಿಯಾಗಿ ಸಾಗಿಸಿಕೊಂಡು ಹೋಗಬೇಕು. ತನ್ನಂಥ ಸಮರ್ಥರು ಸಾಲೆಯಲ್ಲಿ ಪಾಠ ಹೇಳುತ್ತ ಕೂಡುವುದು ನಾಡಿನ ಶಕ್ತಿಯ ಅಪವ್ಯಯವೆಂದು ಆಗಾಗ ಹೇಳುತ್ತಿದ್ದರು. ನಾಟಕಗಳಿಂದ ಊರ ಜನ ಸಾಮಾನ್ಯರನ್ನು ತಿನಿಸು ಉಣಿಸುಗಳಿಂದ ಶಾಲಾಧಿಕಾರಿಗಳನ್ನೂ, ಮಾತುಗಾರಿಕೆಯಿಂದ ಊರ ಪ್ರಮುಖರನ್ನೂ ಸಮಾಧಾನವಾಗಿಟ್ಟು ಅವರಿಗೆ ಶಿಕ್ಷಕ ನೌಕರಿಯೊಂದು ಕೇವಲ ಸಂಬಳವನ್ನು ಪಡೆಯುವ ಹುದ್ದೆಯಾಯಿತು ಅಂದಮೇಲೆ ಕೇಳುವದೇನು? ಊರ ಸಾರ್ವಜನಿಕ ಜೀವನದಲ್ಲಿ

ಅವರೊಬ್ಬರು ಪ್ರಮುಖ ವ್ಯಕ್ತಿಗಳಾಗಿಯೇ ನಿಂತರು !

ಹುಟ್ಟೂರಿನಲ್ಲಿ ಇಲಿಯಾಗಿದ್ದವ ಪರವೂರಲ್ಲಿ ಹುಲಿಯಾಗಿ ಬಾಳುವನಂತೆ. ಈ ಮಾತು ನೀರಲಕಟ್ಟಿಯವರಿಗೆ ಪೂರ್ಣ ಅನ್ವಯಿಸುತ್ತಿತ್ತು. ಲೋಕಲ್ ಬೋರ್ಡ ಮೆಂಬರರ ಅಂಗಡಿಯಲ್ಲಿ ಮಧ್ಯಾಹ್ನದ ನಿದ್ದೆ, ಸಂಜೆ ಚಾವಡಿಯಲ್ಲಿ ಗೌಡ ಕುಲಕರ್ಣಿಗಳ ಕೂಡ ಹರಟೆ, ಇರುಳು ನಾಟಕದ ತಾಲೀಮು ಮನೆಯಲ್ಲಿ ಚಹ, ಸಾಲೆಯ ಕಡೆಗೆ ಸಹಜ ತಿರುಗಾಟಗಳಿಂದ ಅವರ ದಿನಗಳು ಉರುಳುತ್ತಿದ್ದುವು. ಊಟದ ಹೊತ್ತಿಗಷ್ಟು ಮನೆಯನ್ನು ಕಂಡರೆ ಕಂಡರು. ಅದೂ ಗೌಡರ ಮನೆಯಲ್ಲಿಯೋ, ಗ್ರಾಮ ಪಂಚಾಯಿತಿಯ ಸರಪಂಚರ ಮನೆಯಲ್ಲಿಯೋ ಮುಗಿದರೆ ಮನೆಯ ಕಡೆಗೆ ಹೋಗುವ ಅವಶ್ಯಕತೆಯೂ ಬೀಳುತ್ತಿರಲಿಲ್ಲ. ದೇಶ ಸೇವಕರು ಮನೆ ಮಠಗಳನ್ನು ನೆನೆದರೆ ಆದೀತೇ ?

ನೀರಲಕಟ್ಟಿಯವರ ಈ ನಡತೆಯನ್ನು ಕಂಡು ಆತ್ಮಾರಾಮ ಮಾಸ್ತರರು ಒಂದೆರಡು ಸಲ ಸಹಜ ಮಾತನಾಡಿಸಿ ನೋಡಿದರು. ಅವರ ಮಾತನ್ನು ನಗೆಯಲ್ಲಿಯೇ ತೇಲಿಸಿ ನಾಟ್ಯಾನಂದರು ಹೇಳಿದರು.

"ನಿಮ್ಮ ಕಾಲ ಬೇರೆ ಇತ್ತು ಮಾಸ್ತರರೆ!" ಅಭಿನಯ ಪೂರ್ಣವಾಗಿತ್ತು ಮಾತು.

"ಇರಲೀ, ಸಂಬಳ ತಕ್ಕೊಂಡಂತೆ...." ಎಂದು ನಾಟ್ಯಾನಂದರ ಮಾತನ್ನು ನಡುವೆಯೇ ತಡೆದು ಆತ್ಮಾರಾಮರು ಉಪದೇಶವನ್ನು ಮುಂದರಿಸಿದರು. ಆದರೆ ಅವರಿಗೆ ಮಾತನಾಡಗೊಡದೆ ನೀರಲಕಟ್ಟಿಯವರು:-

"ಸಂಬಳ ಸಂಬಳ ಅಂದರೆ ಏನು ಕೊಡುವರು ಬಿಡರೀ ! ಇಪ್ಪತ್ತೈದು ರೂಪಾಯಿ....ಇಷ್ಟಕ್ಕೆ....ದಿನಾ ಆರು ತಾಸು ಹುಡುಗರ ಕೂಡ ಗುದ್ದಾಡೋದು ನನಗೆ ಸೇರುವುದಿಲ್ಲ ನೋಡಿರಿ! ಒಂದು ಪುಣ್ಯ ಇಲ್ಲ, ಪುರುಷಾರ್ಥ ಇಲ್ಲ....ಆಡಾತ್ತ ಇಷ್ಟು ಗಳಿಸಬಹುದು...."

"ಆಯ್ತು ; ತಮ್ಮ ಹೊಣೆಗಾರಿಕೆಯನ್ನು ತಾವು ಅರಿತು ಇರ

ಓಕೆಂದರೆ ಆಯ್ತು....” ಮಾತು ಮುಗಿಸುವ ರೀತಿಯಲ್ಲಿ ಆತ್ಮಾರಾಮರೆಂದರು.

“ಅಷ್ಟು ಮಾಡೇ ಮಾಡತೀವಲ್ಲರೀ! ಯಾರಿಗೇನು ನೌಕರಿ ಬೇಡಾಗೇದ....? ಈ ಉಳಿದ ಶಿಕ್ಷಕರಿಗೆ ಕೆಲಸ ಮಾಡೇ ಗೊತ್ತಿಲ್ಲ! ಅವಕ್ಕ ಹೀಗೆ ಆಗ್ತದ....ಯಾವ ಸಾಹೇಬರು ಎಂದು ಬಂದು ನನಗೆ ಕೇಳಿದಾರು ಹೇಳರಿ....! ಹಾಗೇ ಆಯ್ತಲ್ಲ...ನನ್ನದೂ ಹದಿನೈದು ವರ್ಷ ಸರ್ವೀಸು....ಹಗಲೀ ರಾತ್ರೀ...ಹುಡುಗರನ್ನ ಮುಂದ ಕೂಡಿಸಿಕೊಂಡು ಕೂಡತಾನ ಬಂದು ಮಾಸ್ತರ. ಮತ್ತೆ ಎರಡು ರೂಪಾಯಿ ದಂಡ ಮೊನ್ನೆ ಅವನಿಗೆ....ಅವನ್ನ ತಿರುಗಿಸಿಕೊಂಡ ಬರಬೇಕಾದರೆ ನಾನು ಎರಡು ಸಲ ಆಫೀಸಿಗೆ ಹೋಗಬೇಕಾಯಿತು..” ಇಷ್ಟು ಮಾತನಾಡಿ ಕೈಗಡಿಯಾರದ ಕಡೆಗೊಮ್ಮೆ ನೋಡಿಕೊಂಡು ಸೀರಲಕಟ್ಟಿ ಮಾಸ್ತರರು ಮುಂದೆ ಸಾಗಿಬಿಟ್ಟರು....

“ಏನೋ ಇದ್ದಾನ ಆಯಿತು ಪ್ರಾಣಿ!”

ಎಂದುಕೊಂಡು ಆತ್ಮಾರಾಮರೂ ತಮ್ಮ ಮನೆಯೊಳಗೆ ಬಂದರು. ಬಂಡಪ್ಪ ಮಾಸ್ತರರ ಪ್ರಕರಣದ ಸಂಗತಿಯನ್ನೇ ಕುರಿತು ಸೀರಲಕಟ್ಟಿಯವರ ಕೂಡ ಕೆಲವು ಮಾತುಗಳನ್ನು ಆಡಬೇಕೆಂದು ಎದ್ದು ಹೊರಗೆ ಹೋಗಿ, ಮಾತನಾಡಿಸಿದ್ದರವರು. ನಿಷ್ಠೆಯಿಂದ ಕಲಿಸುವ ಶಿಕ್ಷಕ ಬಂಡಪ್ಪ. ಅವನ ಮೇಲೆ ಇಲ್ಲದ ಸಲ್ಲದ ಚಾಡಿಹೇಳಿ ಈ ನಾಟ್ಯಾನಂದರ ಗುಂಪಿನವರೇ ಆಫೀಸರರಿಂದ ದಂಡಮಾಡಿಸಿದ್ದರು. ಅದನ್ನು ತಿರುಗಿಸಿಕೊಟ್ಟು ಬಂಡಪ್ಪನನ್ನು ಋಣದಲ್ಲಿ ಕೆಡವಿಕೊಂಡಿದ್ದ ಈ ಹೆಡ್‌ಮಾಸ್ತರ ಸೀರಲಕಟ್ಟಿ. ಇದರಿಂದ ತನಗೆ ನಾಲ್ಕು ದುಡ್ಡೂ ಸಿಕ್ಕಂತಾಯಿತು, ಉಳಿದ ಶಿಕ್ಷಕರ ಮುಂದೆ ತನ್ನ ಸಾಮರ್ಥ್ಯದ ಪ್ರದರ್ಶನ ಮಾಡಿದಂತಾಯಿತು. ಸಾಲೆಯಲ್ಲಿ ಇವನ ಆಳಾಗಿ ದುಡಿಯಲು ಒಬ್ಬ ಶಿಕ್ಷಕ ಸಿಕ್ಕಂತಾಯಿತು. ಈ ಎಲ್ಲ ಬಲೆಯನ್ನು ಒಡ್ಡಿಯೇ ಇಂಥ ಪ್ರಸಂಗವನ್ನು ಗೆಳೆಯರಿಂದ ಬಂಡಪ್ಪನ ಮೇಲೆ

ಹೆಡ್‌ಮಾಸ್ತರರೇ ತಂದುದೆಂದು ಆತ್ಮಾರಾಮರು ಅರಿತಿದ್ದರು. ಆದರಿಂದಲೇ ಒಂದು ಮಾತು ಹೇಳಿ ನೋಡಬೇಕೆಂದರೆ ಮಾತು ಈ ಮಟ್ಟದಲ್ಲಿ ಮುಕ್ತವಾಯಿತು.

ಆತ್ಮಾರಾಮ ನಾಟ್ಯಾನಂದರಲ್ಲಿ ಮಾತು ಇಷ್ಟಕ್ಕೆ ಮುಗಿದ ರೇನಾಯಿತು, ಅದರ ಚರ್ಚೆ ನಾಟಕದ ಮನೆಯಲ್ಲಿ, ಸರಪಂಚರ ಸನ್ನಿಧಿಯಲ್ಲಿ, ಚಾವಡಿಯ ಕಟ್ಟೆಯ ಮೇಲೆ, ಲೋಕಲ್ ಬೋರ್ಡ ಮೆಂಬರರ ಅಂಗಡಿಯ ತೆಕ್ಕೆಗೊರಗಿ ನಡದೇ ಇದ್ದಿತು.

"ಆತ್ಮಾರಾಮ ಹಳೆಯ ಮನುಷ್ಯ ಅವನಿಗೇನು ಗೊತ್ತು!"

"'ಬೆಳಕು' ಪತ್ರಿಕೆಯ ಪ್ರಕರಣದಲ್ಲಿಯೇ ನೋಡಿರುವೆ. ಆ ಮನುಷ್ಯನಿಗೆ ವ್ಯವಹಾರ ಜ್ಞಾನವಿಲ್ಲ...."

"ಇಡೀ ಆಯುಷ್ಯವನ್ನೆಲ್ಲ ಹುಡುಗರಲ್ಲಿಯೇ ಕಳೆದವರು ಪಾಪ....!"

"ಇದಕ್ಕಿಂತ ಹೆಚ್ಚಿಗೇನು ಹೇಳಿಯಾರು ಆತ್ಮಾರಾಮರು!"

"ಈ ನಮ್ಮ ಲೋಕಲ್ ಬೋರ್ಡ ಆಳಿಕೆಯ ಕೈ ಗೊತ್ತಿಲ್ಲ.... ಕೂತ ಹೇಳತಾರ ಆಯ್ತು...."

ಎಂದು ಹಲವರು ಹಲವು ಬಗೆಯಲ್ಲಿ ಆತ್ಮಾರಾಮರನ್ನು ಟೀಕಿಸಿದರು. ಆದರೆ ಇವರಿಗಿರುವ ವ್ಯವಹಾರ ಜ್ಞಾನವೆಲ್ಲ ಆತ್ಮಾರಾಮರಿಗಿತ್ತು. ಅದನ್ನು ಅವರು ಆಚರಿಸುತ್ತಿರಲಿಲ್ಲವಷ್ಟೇ. ಇಂಥವರ ಮಧ್ಯದಲ್ಲಿ ಕೆಸರಿನೊಳಗಿನ ಕಮಲದಂತೆ ನಾಲ್ಕೊಪ್ಪತ್ತು ಬಾಳಿ ಹೋಗಬೇಕೆಂಬುದೇ ಅವರ ಜೀವನ ದೃಷ್ಟಿಯಾಗಿತ್ತು. ಇವರ ಕೂಡ ಹೋರಾಡಿ ತಿದ್ದಲೆತ್ನಿಸುವದೆಂದರೆ ಬಚ್ಚಲ ನೀರಿನಲ್ಲಿ ಕಲ್ಲು ಒಗೆದು ಮೈಮೇಲೆ ಹಾಕಿಕೊಂಡಂತೆ ಎಂಬುದರ ಕಲ್ಪನೆ ಅವರಿಗಿತ್ತು. ಇದನ್ನೇ ಅವರು ಆಗಾಗ ಶ್ರೇಯಾಂಸನಿಗೆ ಹೇಳುತ್ತ ಬಂದಿದ್ದರು. ಆದರೆ ತರುಣರ ಬಿಸಿರಕ್ತವೊಂದು ಇಂಥ ಹಿರಿಯರ ಉಪದೇಶಕ್ಕೆ ಬಗ್ಗಬೇಕಲ್ಲ! ಅದು ಅನ್ಯಾಯ ಅತ್ಯಾಚಾರಗಳನ್ನು ಕಂಡಕೂಡಲೆ

ಕೆರಳುವುದು, ಕಾಳಗದ ಕಣಕ್ಕೆ ಇಳಿಸುವುದು.

ಶ್ರೇಯಾಂಸ ಊರಲ್ಲಿ ಬಂದು ಎರಡು ಮೂರು ತಿಂಗಳು ಕಳೆಯು ವುದರಲ್ಲಿಯೇ ಇಂಥ ಪ್ರಸಂಗವೊಂದು ಅವನನ್ನು ಸ್ವಾಗತಿಸಿತು. ಅದೇ ಶ್ರೇಯಾಂಸನ ಪ್ರಕೃತಿ ಸ್ವಲ್ಪ ಸುಧಾರಿಸಿತ್ತು. ಆತ್ಮಾರಾಮರ ಮನೆಗೂ ಪೇಟೆಯೊಳಗೆ ಗೆಳೆಯರ ಅಂಗಡಿಯಲ್ಲಿಯೂ ಸ್ವಲ್ಪ ಹೊತ್ತು ಹೋಗಿ ಕುಳಿತು ಬರುವಂತಾಗಿತ್ತು. ಚಳಿಗಾಲ ಆರಂಭವಾದುದರಿಂದ ಮೈಯಲ್ಲಿ ಸ್ವಲ್ಪ ಹೊಸ ಚೈತನ್ಯವೂ ಮೂಡಿತ್ತು. ಗೆಳೆಯ ದತ್ತಮೂರ್ತಿ ಬೇರೆ ದೀಪಾವಳಿಯ ಬಿಡುವಿಗಾಗಿ ಊರಿಗೆ ಬಂದಿದ್ದ. ಅವನ ಚಿತ್ರಗಾರಿಕೆಗೆ ದಿನಾಲು ಒಂದರ್ಧ ತಾಸು ರೂಪದರ್ಶಿಯಾಗಿ ಕೂಡುವ ಕೆಲಸವನ್ನು ಬೇರೆ ಶ್ರೇಯಾಂಸ ಸ್ವೀಕರಿಸಿದ್ದ. ಅದರಿಂದ ಏಕಾಗ್ರತೆ ಶಾಂತಿಗಳು ಶ್ರೇಯಾಂಸನ ಮನಸ್ಸಿನಲ್ಲಿ ನೆಲೆಸುತ್ತ ನಡೆದಿದ್ದುವು. ದಿನಾಲು ಸಾಯಂಕಾಲ ಗೆಳೆಯರಿಬ್ಬರೂ ಊರ ಹೊರಗೆ ಆಶ್ರಮದ ಕಡೆಗೋ ಸಿಲ್ದಾಣದ ಕಡೆಗೋ ಕೂಡಿ ಅಡ್ಡಾಡಲಿಕ್ಕೆ ಹೋಗುತ್ತಿದ್ದರು. ಆಗ ಅನೇಕ ವಿಷಯಗಳನ್ನು ಕುರಿತು ತೆರೆವ ಮನಸ್ಸಿನಿಂದ ಹರಟೆ ಹೊಡೆಯುತ್ತಿದ್ದರು. ತಮ್ಮ ಜೀವನದ ಧ್ಯೇಯ, ಊರ ಸಾಮಾಜಿಕ ಸ್ಥಿತಿಗತಿ, ಆಶ್ರಮದ ಕಾರ್ಯಪದ್ಧತಿಗಳೆಲ್ಲ ಹರಟೆಯ ವಿಷಯಗಳಾಗು ತ್ತಿದ್ದುವು. ದತ್ತಮೂರ್ತಿಯಂತೂ ತಾನು ಮುಂಬಯಿಗೆ ಹೋಗಿ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸದಲ್ಲಿ ಚಿತ್ರಕಲೆಯ ಹೆಚ್ಚಿನ ಅಭ್ಯಾಸ ಮಾಡಬೇಕು, ಶಾಂತಿನಿಕೇತನಕ್ಕೆ ಹೋಗಬೇಕು ಎಂದೇನೇನೋ ತನ್ನ ಕನಸುಗಳನ್ನು ಹೇಳಿಕೊಳ್ಳುತ್ತಿದ್ದ. ಶ್ರೇಯಾಂಸನಿಗೆ ಇಂಥ ಉಲ್ಹಾಸವಾಗಲಿ, ಉತ್ಸಾಹವಾಗಲಿ ಯಾವದೂ ಇರಲಿಲ್ಲ. ಅವನ ನಾಳಿನ ಬಾಳಿನ ದಾರಿಯೇ ಅವನಿಗೆ ಕಾಣದಾಗಿತ್ತು. ಏನಾದರೂ ಸಾಹಸಮಾಡಿ ಹೆಚ್ಚಿನ ಅಭ್ಯಾಸಕ್ಕಾಗಿ ಎಲ್ಲಿಯಾದರೂ ಹೋಗ ಬೇಕೆಂದರೆ ಮದುವೆಯನ್ನು ಬೇರೆ ಹಿರಿಯರು ಮಾಡಿಬಿಟ್ಟಿದ್ದಾರೆ. ಮನೆಯಲ್ಲಿ ಎದುರಿಗೆ ಹೆಂಡತಿ ಓಡಾಡುತ್ತಿದ್ದಾಳೆ. ಇವನನ್ನು ಅರ್ಥ

ಮಾಡಿಕೊಳ್ಳದ ಜೀವವೊಂದು ಕೊರಳಿಗೆ ಜೋತುಬಿದ್ದಿದೆ. ಹಿರಿಯರಿಗೆ ಒಬ್ಬನೇ ಮಗ. ಮಗನಾದುದರ ಹೊಣೆಗಾರಿಕೆಯೂ ಇದೆ. ಇದೆಲ್ಲ ವನ್ನೂ ಹರಿದೊಗೆದು ತನ್ನ ಧ್ಯೇಯಸಾಧನೆಗಾಗಿ ಮುನ್ನಗ್ಗಬೇಕಾದರೆ ಅಂಥ ನಿಶ್ಚಿತ ಧ್ಯೇಯದ ಕಲ್ಪನೆಯೂ ಕೂಡ ನಿಚ್ಚಳವಾಗಿ ತನ್ನಲ್ಲಿ ಇಲ್ಲ. ಊರೊಳಗಿನ ಉಳಿದ ತರುಣರಂತೆ ಬಂದುದೆಲ್ಲದಕ್ಕೂ ಬಾಗಿ ಬಾಳಬೇಕೆಂದರೆ ವಿಚಾರಮಾಡುವ ಶಕ್ತಿಯೊಂದು ಬಂದುಬಿಟ್ಟಿದೆ! ಅದೊಂದಿಲ್ಲದಿದ್ದರೆ ಸುಖವಾಗಿ ಬಾಳಬಹುದಿತ್ತೇನೋ ಶ್ರೇಯಾಂಸ! ಓದಿನಿಂದ ಒದಗುವ ಅನಾಹುತಗಳಲ್ಲಿ ಅದೊಂದು. ಇನ್ನೇನು ಮಾಡ ಬೇಕು ಶ್ರೇಯಾಂಸ? ತನ್ನ ಸುತ್ತಲಿನ ಜನರ ಜೀವನವನ್ನು ಕಣ್ದೆರೆದು ನೋಡುವದನ್ನು ಕಲಿತಿದ್ದಾನೆ, ಅದರ ಬಗ್ಗೆ ವಿಚಾರಮಾಡುತ್ತಾನೆ. ಅದರಂತೆ ನಡೆಯಲು ಯತ್ನಿಸುತ್ತಾನೆ. ಆದರೆ ಸಮಾಜವೊಂದು ಹಾಗೆ ನಡೆಯಲಿಕ್ಕೆ ಕೊಡಬೇಕಲ್ಲ. ಅದಕ್ಕೆ ಅನೇಕ ಅಡೆ ತಡೆಗಳನ್ನು ಒಡ್ಡುತ್ತದೆ, ಸಂಕಟದಲ್ಲಿ ಕೆಡವುತ್ತದೆ. ಆಗ ತನ್ನ ಶಕ್ತಿಯ ಅಳತೆ ಯನ್ನು ಗಮನಿಸಿ ಹಿಂದೆ ಸರಿಯುವನು. ಕಾರ್ಯದಲ್ಲಿ-ಪ್ರತ್ಯಕ್ಷ ಜೀವನದಲ್ಲಿ – ಸಾಧಿಸದಿದ್ದುದನ್ನು ಚಿಕ್ಕ ಕತೆಯಲ್ಲಿಯೋ ನಾಟಕ ದಲ್ಲಿಯೋ ಚಿತ್ರಿಸಿ ಸಫಲತೆಯನ್ನು ಪಡೆಯುವನು, ಮನಸ್ಸಿಗೆ ಸಮಾ ಧಾನವನ್ನು ತಂದು ಕೊಳ್ಳುವನು. ಆದರೆ ಅದರಿಂದ ಮನಸ್ಸಿಗೆ ಸಂಪೂರ್ಣ ಶಾಂತಿಯಿಲ್ಲ. ತಾನು ಮಾಡಬೇಕೆಂದುದೇನು, ಮಾಡಿ ದುದೇನು ಎಂಬ ಪ್ರಶ್ನೆಗಳು ಒಂದೇ ಸಮನೆ ಮನಸ್ಸಿನ ಎದುರಿಗೆ ನಿಂತು ಕಾಡುವವು. ಆಗ ಆಶ್ರಮದ ಜೀವನವೊಂದು ಕ್ಷಣಿಕ ಶಾಂತಿಯನ್ನು ಕೊಡುವುದು. ಅದೂ ಆಗ ಅಲ್ಲಿ ನಡೆದಿರುವ ಜೀವನದಿಂದಲ್ಲ, ಶ್ರೇಯಾಂಸನ ಕಲ್ಪನೆಯಂತೆ ಆಶ್ರಮ ನಡೆದಾಗಿನ ಆಶ್ರಮದ ಚಿತ್ರ ಅವನ ಮನಸ್ಸಿಗೆ ನೆಮ್ಮದಿಯನ್ನು ತರುತ್ತಿದ್ದುದು. ಸಮಾಜದ ಯಾವ ಸಂಬಂಧವನ್ನು ಇಟ್ಟುಕೊಳ್ಳದೆ, ಇಂಥ ಒಂದು ಆಶ್ರಮದಲ್ಲಿ ಕೆಲವು ಎಳೆಯ ಮಕ್ಕಳನ್ನು ಇಟ್ಟುಕೊಂಡು ಕಲಿಸಿ, ಹೊಸ ಬಾಳಿನ ಪ್ರಯೋಗ

ಒಂದನ್ನು ಮಾಡಬಹುದಲ್ಲ, ನಾಳಿನ ಸಮಾಜದ ತಳಹದಿಯನ್ನು ಹಾಕಬಹುದಲ್ಲ ಎಂದು ವಿಚಾರಿಸುವನು. ಮತ್ತೆ ವಿಚಾರ ! ವಿಚಾರ! ಅಪ್ಪಾ ಇದೆಂಥ ಅದ್ಭುತ ಪಿಶಾಚಿ ಹಿಡಿಯಿತೆನಗೆ !

"ಏನು ವಿಚಾರಿಸುತ್ತಿರುವಿರಿ ಶ್ರೇಯಾಂಸ ?" ದತ್ತಮೂರ್ತಿ ಮೌನವನ್ನು ಮುರಿದ.

"ವಿಚಾರ ? ಹೂಂ !"

"ದೆವ್ವ ಒಡಿದವರಂತೆ ಸುಮ್ಮನೆ ಕುಳಿತಿರುವೆಯಲ್ಲ ತಾಸಾಯಿತು...."

"ಅಹುದು ನಿಜ...."

"ಏನು ನಿಜ ?"

"ನೀನನ್ನುವುದು....!"

"ಮನಸ್ಸು ಹಗುರಾಗಲೆಂದು ತಿರುಗಾಡಲಿಕ್ಕೆ ಬರುವುದಿಲ್ಲವೇ ?"

"ಇಲ್ಲಿ ಬಂದರೆ ಮನಸ್ಸು ಹಗುರಾಗುವುದೆ ?" ವಿಷಾದದ ನಗೆಯೊಂದು ಶ್ರೇಯಾಂಸನ ತುಟಿಗಳನ್ನು ಬಿಡಿಸಿ ಹೊರಗೆ ಬಂದಿತು.

"ಆಗದೇನು ? ಇತ್ತನೋಡು....ಆಶ್ರಮದ ಭವ್ಯ ದಿವಾಣಖಾನೆ ಅದರ ಕಿಡಿಕಿಯೊಳಗಿಂದ ಆಚೆಗೆ ದೃಷ್ಟಿ ಬೀರಿದರೆ ಧರ್ಮವೀರ ಧಾನ ವೀರರು ಕಟ್ಟಿಸಿದ ಬಾವಿಯ ದೃಶ್ಯ, ಇತ್ತ ಮುನಿ ನಿವಾಸ, ಅತ್ತ ಭೂಮಿಯಿಂದ ಮೇಲೇಳುತ್ತಿರುವುದೇನೋ ಎನ್ನುವಂತೆ ನಿರ್ಮಾಣ ವಾಗುತ್ತಿರುವ ಚತುರ್ಮುಖ ಬಸದಿ, ಅಲ್ಲಿ ಆಶ್ರಮ ಅದರ ಮುಂದೆ ಹೂದೋಟ....ಇವೆಲ್ಲವುಗಳ ಮೇಲೂ ಇದೀಗ ಮುಳುಗುತ್ತಿರುವ ಸೂರ್ಯನ ಸ್ವರ್ಣಕಾಂತಿ ! ಎಂಥ ಸೌಮ್ಯ ಶಾಂತ ವಾತಾವರಣವಿದು ! ಒಂದು ವರ್ಣ ಚಿತ್ರಕ್ಕೆ ಒಳ್ಳೆಯ ಮಾದರಿಯಿದು.!"

"ಆಗಬಹುದು, ವಸ್ತುವಿನ ಬಾಹ್ಯ ಸೌಂದರ್ಯವಷ್ಟೇ ಚಿತ್ರದ ವಸ್ತುವಾಗುತ್ತಿದ್ದರೆ ಇದೂ ಒಂದು ಸುಂದರ ಚಿತ್ರದ ಮಾದರಿಯಾದೀತು. ಆದರೆ ಈ ಆಶ್ರಮದ ಹೃದಯ ಏನು ನುಡಿಯುತ್ತಿದೆ ಕೇಳು....ಭವ್ಯ

ದಿವಾಣಖಾನೆಯ ಹತ್ತಿರ ಹೋಗಲಿಕ್ಕೆ ಕೂಡ ಬಡವರಿಗೆ ಹಕ್ಕಿಲ್ಲ..ದಾನ ವೀರರು ಕಟ್ಟಿಸಿದ ಬಾವಿಗೆ ನೀರಿಲ್ಲ. ಅದನ್ನು ಇಸ್ಸಿಷ್ಟು ಅಗಿಸುವವರು ದಿಕ್ಕಿಲ್ಲ. ಮುನಿವಾಸದ ಹಂಚು ಹಾರಿ ಹೋಗಿವೆ....ಹಕ್ಕಿನ ಹೋರಾಟದಲ್ಲಿ ಮುನಿವಾಸ ಹೋಗಿ ಮುನಿಸಿನವಾಸವಾಗಿ ಕುಳಿತಿದೆ. ಅರ್ಥಕ್ಕೆ ನಿಂತ ಚತುರ್ಮುಖ ಬಸದಿ ಒಂದು ಮುಖಕ್ಕೂ ದಿಕ್ಕಿಲ್ಲದೆ ಧ್ಯೇಯದ ಹಾಳುತನವನ್ನು ಪ್ರದರ್ಶಿಸುತ್ತದೆ. ಅದೇನೋ ಆಶ್ರಮ ಅದರ ಮುಂದಿರುವ ಮಲ್ಲಿಗೆಯ ಮಂಟಪಗಳು ಕಣ್ಣಿಗೆ ಚೆಂದವೇನೋ ಕಾಣುತ್ತವೆ. ಆದರೆ ಕನ್ನಡ ಮಕ್ಕಳಿಗೆ ಮರಾಠಿಯನ್ನು ಕಲಿಸುವ ವ್ಯರ್ಥ ಪ್ರಯತ್ನ ಸಾಗುತ್ತದೆ ಅಲ್ಲಿ. ಅದರ ಮುಂದೆ ಹೃದಯದಲ್ಲಿ ಹಾವನ್ನಿಟ್ಟುಕೊಂಡ ಮಲ್ಲಿಗೆಯ ಮಂಟಪ....! ಇವೆಲ್ಲವುಗಳ ಮೇಲೆ ದಿನವರನು ಚಿಮ್ಮುತ್ತಿರುವ ರಕ್ತವರ್ಣ! ನಾಳಿನ ದಿನಗಳು ಎಷ್ಟು ಭಯಂಕರವಾಗಿವೆಯೆಂಬುದನ್ನು ತೋರಿಸುತ್ತದೆಯಲ್ಲವೆ ಆಶ್ರಮ?"

"ಜಗತ್ತಿನಲ್ಲಿ ಇದೆಲ್ಲ ಇರತಕ್ಕದೇ."

"ಇಷ್ಟೆಂದರೆ ಮುಗಿದೆ ಹೋಯಿತಲ್ಲ ಪ್ರಶ್ನೆ...."

"ಅಲ್ಲ; ಇದನ್ನೇ ಕಲಾಜೀವಿ ಚಿತ್ರಿಸುವದಿರುತ್ತದೆ...."

"ಚಿತ್ರಿಸುವುದಷ್ಟೇ ಕಲಾಜೀವಿಯ ಕರ್ತವ್ಯವೋ....?"

"ಅಂದರೆ....?"

"ನೀನೇ ಹೇಳು...."

"ಚಿತ್ರಿಸಿ ಜನತೆಯ ಮುಂದೆ ಇಡುವುದು....ಅದನ್ನು ಬಲ್ಲವರು ವಿಮರ್ಶಿಸುವರು...."

"ಚಿತ್ರವನ್ನೋ ಜೀವನವನ್ನೋ....?"

ದತ್ತಮೂರ್ತಿ ಸ್ವಲ್ಪ ಸ್ತಬ್ಧನಾದ....ತುಸು ವಿಚಾರಿಸಿ ಹೇಳಿದ.

"ಚಿತ್ರವನ್ನು....!"

"ಅದಕ್ಕೇ ಬರೆಯುವುದೋ ನಾವು....?"

"ಹೌದು ಮತ್ತೆ?"

"ಇದರಿಂದೇನು ಮಾಡಿದಂತಾಯಿತು ನಾವು ?"

"ಸಾಹಿತ್ಯ, ಚಿತ್ರ, ಶಿಲ್ಪ ಕಲೆಗಳೆಂದರೆ ನಮ್ಮ ಸಂಸ್ಕೃತಿಯ ಪ್ರತೀಕಗಳವು....ಸುಸಂಸ್ಕೃತ ಮಾನವನ 'ಹ್ಯಾಬಿಟ್' ಅಂದರೆ ಇವುಗಳಲ್ಲೊಂದು ಇರಬೇಕು, ಇರುತ್ತದೆ...."

"ನನಗೇನೋ ಅರ್ಥವಾಗದು...."

"ನೀನಿನ್ನೂ ಅಂಥದನ್ನೆಲ್ಲ ಓದಲಿಲ್ಲ.... ಇಲ್ಲೇ ಹಳ್ಳಿಯಲ್ಲಿ ಕುಳಿತು ಏನನ್ನೋ ತಲೆಯಲ್ಲಿ ತುಂಬಿಕೊಂಡಿರುವಿ ..ಅದಕ್ಕೇ 'ಜಯಂತಿ'ಗೆ ಹತ್ತು ಸಲ ಕತೆ ಕಳಿಸು ಅಂದರೂ ಕಳಿಸಲಿಲ್ಲ... ನೀನು... ಇಷ್ಟರಲ್ಲಿಯೇ ನಾಲ್ಕು ಜನರ ಬಾಯಲ್ಲಿ ನಿನ್ನ ಹೆಸರು ಕುಣಿದಾಡುತ್ತಿತ್ತು. ನಾನು ಕೊಟ್ಟ 'ಜಯಂತಿ'ಯ ಹಳೆಯ ಸಂಚಿಕೆಗಳನ್ನು ಓದಿದೆಯೋ ಇಲ್ಲೋ? ಅವುಗಳಲ್ಲಿ ಯಾವ ಕತೆಗೆ ನಿನ್ನ ಕತೆಗಳು ಸರಿಗಟ್ಟುವದಿಲ್ಲ ಹೇಳು... ಹೇಳು ನೋಡೋಣ.. ?"

"ಆಯಿತು, ಕತೆ ಕಳಿಸಲಿಕ್ಕೆ ಅಂಚೆಯ ಚೀಟಿಗೆ ದುಡ್ಡು ಬೇಕಲ್ಲ.?" ನಿಧಾನವಾಗಿ ನುಡಿದ ಶ್ರೇಯಾಂಸ.

"ಮೂರು ಬಿಲ್ಲಿ ಹುಟ್ಟಲಿಲ್ಲ ನಿನಗೆ....? ಹೂಂ !"

"ಅಹುದು. ಬರೆಯಲಿಕ್ಕೆ ಕಾಗದ ಕೊಳ್ಳಲಿಕ್ಕೆ ದುಡ್ಡು ಇಲ್ಲ... ಏನನ್ನುವಿ...?"

"ಎಂಥಾ ಜೀವನ ವಿಮರ್ಶಕನೋ ನೀನು ?"

"ಅವನ ಹತ್ತಿರ ದುಡ್ಡು ಇರಲಿಕ್ಕೆ ಬೇಕೇನು ?"

"ಇದ್ದೇ ಇರುವವು..."

"ಅಂಥವನಿಂದ ಜೀವನ ವಿಮರ್ಶೆಯಾಗದು ದತ್ತ ?"

"ಹಾಗಾದರೆ ನಿನ್ನಂಥವನಿಂದ ಆಗುವದೇನು ?"

"ಆಗುವದೆಂದು ಹೇಳಲಿಲ್ಲ ನಾನು...."

"ಅಂದರೆ ಏನು ಹೇಳುವಿ ? ನಿನ್ನ ಮಾತು ವಿಚಿತ್ರವಾಗಿ ತೋರುವುದು ನನಗೆ...."

"ತೋರಿತು ; ಆದರೆ ನಾವು ಮಾಡಬೇಕೆಂದಿರುವದನ್ನು ಮಾಡುತ್ತಿದ್ದೇವೆಯೇ? ಏನು ನಾವು ಮಾಡುತ್ತಿರುವುದು ನಾವು ಮಾಡಬೇಕೆಂದಿರುವುದರ ಅಭಾಸವಾಗಿದೆಯೋ....?"

"ಅದನ್ನೇನೂ ಈಗ ಹೇಳಲಾರೆ...."

"ಇದರ ಬಗ್ಗೆ ವಿಚಾರಮಾಡಿರುವೆಯಾ?"

"ಇದರಲ್ಲಿ ವಿಚಾರಮಾಡುವದೇನಿದೆ? ಪ್ರತಿಯೊಂದು ವಿಷಯದಲ್ಲಿಯೂ ಪ್ರತಿಯೊಬ್ಬರೂ ವಿಚಾರಮಾಡಿದರೆ ಆಗುವದಿಲ್ಲ....ಬಲ್ಲವರು ವಿಚಾರಿಸಿಯೇ ಮುಂದೆ ಸಾಗಿರುತ್ತಾರಲ್ಲ....! ಅವರ ಹಾದಿಯಲ್ಲಿ ನಡೆದರೆ ತೀರಿತು...."

"ಅಂತೂ ನಮ್ಮ ಬುದ್ಧಿಯನ್ನು ಇನ್ನೊಬ್ಬರಲ್ಲಿ ಒತ್ತೆ ಇಡುವದೆನ್ನು...."

"ಹಾಗೆ ಹೇಗನ್ನುವಿ?"

"ಈಗ ನೀನೇ ಹೇಳಿದೆಯಲ್ಲ....?"

"ಅಂದರೆ ಸಂಪೂರ್ಣ ಸ್ವತಂತ್ರವಾಗಿಯೇ ನಾವು ಬೆಳೆಯಬಹುದೇ? ಏನಾದರೂ ಪರಂಪರೆ ನಮ್ಮ ಬೆನ್ನನ್ನು ಬಿಡುವದಿಲ್ಲ......?"

"ಪರಂಪರೆಯ ಪರಿಣಾಮವಿರಲಿ, ಸಂಸ್ಕೃತಿಯ ಸತ್ವವನ್ನು ಹೀರಿಕೊಂಡೇ ನಾವು ಬೆಳೆಯಬೇಕಾಗಿದೆ .... ಆದರೆ ವಿಚಾರದಲ್ಲಿ ಅಂಧಾನುಕರಣ ಉಪಯೋಗದ್ದಲ್ಲ...."

"ಇದೆಲ್ಲ ಹೇಳುವ ಮಾತಾಯಿತು ಶ್ರೇಯಾಂಸ....! ಸಂಸ್ಕೃತಿ ಎನ್ನುವಿ, ಸಂಸ್ಕಾರದ ಸತ್ವದಿಂದ ನಮ್ಮ ಜೀವನ ರೂಪುಗೊಳ್ಳುವದೆನ್ನುವಿ .... ಆದರೆ ಅದರಲ್ಲಿ ನಾವು ಬಯಸಿದಷ್ಟು ಪ್ರಗತಿ ಇರುವದಿಲ್ಲ...."

"ಏಕೆ ಇರುವದಿಲ್ಲ?"

"ನೀನೇ ನೋಡಲ್ಲ; ನಿನ್ನ ಬೆಳವಣಿಗೆಗೆ ಅನುಕೂಲವಾದ ವಾತಾವರಣ ಇದೆಯೇ? ಮನೆಯಲ್ಲಿ ಕುಮಾರವ್ಯಾಸನ ಭಾರತ ಓದ

ತೊಡಗಿದರೆ ಅದನ್ನೊಯ್ದು ನಿಮ್ಮ ತಂದೆ ಹಾಳು ಬಾವೀ ಕಾಣಿಸಿದರು... ಇದು ಹಿರಿಯರ ಸಂಸ್ಕೃತಿ....ಇದರ ಸತ್ವವನ್ನು ಸಂಪಾದಿಸಿ ನಾವು ಬೆಳೆಯಬೇಕು...."

"ಅದು ಹಿರಿಯರ ಸಂಸ್ಕೃತಿಯಲ್ಲ ಮೂರ್ತಿ! ಅಜ್ಞಾನ, ಮೋಹಗಳು ಹಾಗೆ ಮಾಡಹಚ್ಚಿದವು .... ಓದಲಿಕ್ಕೆ ಬೇಡವೆಂದಿದ್ದಾರೆಯೇ ಅವರು ನನಗೆ. ಅಕ್ಷರಸ್ಥರಲ್ಲ ಅವರು. ಏನೋ ತಲೆಯಲ್ಲಿ ಹೊಕ್ಕಿತು; ತಮ್ಮ ಮಗ ಯಾವುದೋ ಒಂದು ಹಳೆಯ ಗ್ರಂಥ ಓದಿ ಹಾಳಾಗುತ್ತಿದ್ದಾನೆ ಮಂತ್ರ ತಂತ್ರದ ಹೊತ್ತಗೆಯದು. ಅದನ್ನು ಓದಿದವರಿಗೆ ಮುಂದೆ ಸಂತತಿಯೂ ಇಲ್ಲ.... ಹೀಗೇನೇನೋ ಕಲ್ಪನೆ ಬಂದುಬಿಟ್ಟಿತು.... ಆದರಿಂದ ಒಯ್ದು ಬಾವೀ ಕಾಣಿಸಿದರು.... ನೀನೇ ನೋಡಿರುವೆಯಲ್ಲ....ಕಲಾನಿಧಿಯ ಮುದ್ರಣ ಹೇಗಿದೆ ಎಂಬುದನ್ನು. ಅದನ್ನು ಕಂಡು ಯಾರಿಗಾದರೂ ಹಾಗೆ ಕಲ್ಪನೆಯಾಗುವುದು ಸಹಜವಿದೆ...."

"ನಾನು ಕೊಟ್ಟ ಅ.ನ.ಕೃ. ಅವರ 'ಸಂಧ್ಯಾರಾಗ'ವನ್ನು ಜಪಿಸಿ ಇಡಪ್ಪ....ಅದೂ ಬಾವೀ ಕಂಡೀತು...."

ನಗೆಯಲ್ಲಿ ತೇಲಿಸಿ ದತ್ತಮೂರ್ತಿ ಹೇಳಿದ

"ಅದೋ? ಈಗಾಗಲೇ ಲಲಿತೆಯ ಕೈಸೇರಿದೆ....ಅವಳು ಓದಿ ಆದಮೇಲೆ ನಾನು ಓದಬೇಕು...."

ಸಂಜೆಯಾಯಿತೆಂದು ಎದ್ದು ಮನೆಗೆ ಸಾಗಿದರು. ದಾರಿಯುದ್ದಕ್ಕೂ ಇಬ್ಬರೂ ಮೌನವಾಗಿಯೇ ನಡೆದಿದ್ದರು. ದತ್ತಮೂರ್ತಿಗೆ ಇಂದು ಶ್ರೇಯಾಂಸನ ಮಾತಿನಿಂದ ಏನೋ ಒಂದು ಹೊಸ ಬೆಳಕು ಕಂಡಂತೆ ಅನಿಸಿದ್ದಿತು ಅದರ ಶೋಧನೆಯಲ್ಲಿಯೇ .... ತನ್ನ ಮನಸ್ಸಿನ ಬಹು ಭಾಗವನ್ನೆಲ್ಲ ತೊಡಗಿಸಿದ್ದನಾತ. ಶ್ರೇಯಾಂಸನ ಕಣ್ಣಮುಂದೆ ಭಾರತದ ಪ್ರತಿ ಬಂದು ನಿಂತಿತ್ತು. ಎಂಥ ಅಮೌಲ್ಯ ಗ್ರಂಥ, ಹಿರಿಯರ ಅಜ್ಞಾನಕ್ಕಾಗಿ ಹಾಳಾಗಿ ಹೋಯಿತಲ್ಲ, ಇನ್ನೊಂದೆರಡು

ವಾರ ಓದಿದ್ದರೆ ಮುಗಿಯುತ್ತಿತ್ತು. ಯಾವಾಗಲೂ ಹತ್ತಿರ ಇರಬೇಕಾದ ಪುಸ್ತಕ ! ಕಲಾವತಿಯ ಕಾಣಿಕೆ !

ಕುಮಾರವ್ಯಾಸ ಭಾರತ ಶ್ರೇಯಾಂಸನ ಬಗೆಗಣ್ಣಿನೆದುರಿನಿಂದ ಸರಿಯಿತು. ಅದರ ಸ್ಥಳದಲ್ಲಿ ಕಲಾವತಿಯ ಮೂರ್ತಿ ಬಂದು ನಿಂತಿತು. ಎಂಥ ಮುದ್ದು ಹುಡುಗಿ! ವಾಚನಾಭಿರುಚಿ ಎಷ್ಟು! ಜಾಣೆ....ಹೇಳಿ ಕೊಟ್ಟದ್ದೆಲ್ಲವನ್ನೂ ಕಲಿತುಕೊಳ್ಳುವ ಚದುರೆ! ಸೌಂದರ್ಯದ ಪುತ್ತಳಿ! ಇನ್ನೂ ಕೆಲವು ದಿನ ನನ್ನ ಸಹವಾಸದಲ್ಲಿ ಇರಬೇಕಾಗಿತ್ತು ಅವಳು !

"ಅಲ್ಲೋ, ಇಂದು ಯಾವ ನಾಟಕ?"

ದತ್ತಮೂರ್ತಿಯ ಈ ಪ್ರಶ್ನೆಯಿಂದ ಶ್ರೇಯಾಂಸ ಹೊರಗಿನ ಲೋಕಕ್ಕೆ ಬಂದ. ಅಷ್ಟರಲ್ಲಿಯೇ ಅವರು ಊರ ಅಗಸೆಯ ಹತ್ತಿರ ಬಂದಿದ್ದರು.

"'ರಾಮಪಾದುಕಾ ಪಟ್ಟಾಭಿಷೇಕ' ಅಂತಿದೆ, ಗರುಡ ಸದಾಶಿವ ರಾಯರು ಬರೆದದ್ದು...."

"ಹೋಗೋಣವೇನು?"

"ಬೇಡ, ನನಗಿನ್ನೂ ಜಾಗರಣೆ ಅಷ್ಟು ತಡೆಯದು.... ನಿನ್ನೆಯ ನಿದ್ರೆಯೇ ಇನ್ನೂ ತೀರಿಲ್ಲ...."

"ಪಾಸು ವ್ಯರ್ಥ ಹೋಗತದಲ್ಲ?"

"ಪುಕ್ಕಟೆ ಪಾಸು ಇದ ಅಂತ ದಿನಾಲು ಹೋಗೋದೇನು?"

"ಕಂಪನಿಯ ಮ್ಯಾನೇಜರರೇ ಆಗ್ರಹ ಮಾಡಿದರಲ್ಲೋ ನಿನ್ನೆ? ಆಗ ನೀನೂ 'ಹೂಂ!' ಅಂದಿ. ಅದಕ್ಕೆ ಕೇಳಿದೆ.... ನನಗೆಲ್ಲಿ ಬೇಕಾಗೇದ ಇಂಥ ಕಂಪನಿ ನಾಟಕ ನೋಡೋದು?"

"ಹಾಗೆ ಅನ್ನಬೇಡಪ್ಪ ದತ್ತ!"

"ಯಾಕೆ ನಿನ್ನ 'ವಿಜಯ ಸಾಮ್ರಾಜ್ಯ' ನಾಟಕ ಅವರು ಆಡ ಲಿಕ್ಕಿಲ್ಲೆಂದು ಹೆದರಿಕೆ ಏನು ಮತ್ತೆ? ಅವರು ಆಡದಿದ್ದರೆ ನಮ್ಮ

ಹಾಯಸ್ಕೂಲಿನ ಗ್ಯಾದರಿಂಗಿನಲ್ಲಿ ಆಡಲಿಕ್ಕೆ ಹಚ್ಚುವೆ ಆಯಿತಿಲ್ಲೋ? ಗಾಬರಿಯಾಗಬೇಡ."

"ಯಾವುದಕ್ಕೂ ಗಾಬರಿಯಾಗುವದಿಲ್ಲ ಬಿಡು ನಾನು.... ನಿನ್ನಂತೆ ನನಗೆ ನನ್ನ ಹೆಸರು ನಾಲ್ಕು ಜನರ ನಾಲಿಗೆಯ ಮೇಲೆ ನಲಿದಾಡಬೇಕೆಂಬ ಹವಣಿಕೆಯಾದರೂ ಎಲ್ಲಿದೆ? ಏನೋ ಒಮ್ಮೆ ಕನ್ನಡ ಸಾಮ್ರಾಜ್ಯದ ದೃಶ್ಯ ಜನರ ಕಣ್ಣೆದುರಿಗೆ ಹಾಯಲಿ ಎಂದು ಯತ್ನಿಸೋದು ಇಷ್ಟೇ. ಕರ್ತವ್ಯ ಮುಖ್ಯ ನನಗೆ...."

"ಹಾಗೇ ಆಗಲಿ."

"ಯಾಕೆ ಧ್ವನಿ ಬೇರೆಯಾಯಿತು ?"

"ಏನಿಲ್ಲ; ಹೀಗೆ ಬಾಯಿಂದ ಹೇಳುತ್ತ ಎಲ್ಲರೂ ಹೋಗುವುದು ಅಲ್ಲೇ....ಅಂದೆ...."

"ಎಲ್ಲಿ ?"

"ಕೀರ್ತಿಮಂದಿರದ ಪೂಜಾರಿಯಾಗಿ...."

"ನೋಡೋಣಲ್ಲ!"

"ಹೀಗೆ ಹೇಳುವವರು ಬಹು ಜನರು ಆಗಿಹೋಗಿದ್ದಾರೆ....!"

ದತ್ತಮೂರ್ತಿಯ ಈ ಮಾತು ಶ್ರೇಯಾಂಸನ ತಲೆಯಲ್ಲಿ ಬಹಳ ಹೊತ್ತಿನವರೆಗೆ ಸುತ್ತುತ್ತಿದ್ದಿತು. ಇರುಳು ಹಾಸಿಗೆಯಲ್ಲಿ ಹೊರಳಾಡುತ್ತಿದ್ದಾಗಲೂ ತಿರುತಿರುಗಿ ಅದೇ ಮಾತು ನೆನಪಿಗೆ ಬರುತ್ತಿತ್ತು. '....ಬಹು ಜನರು ಆಗಿಹೋಗಿದ್ದಾರೆ! ಬಹು ಜನರು ಆಗಿಹೋಗಿದ್ದಾರೆ!' ಎಂಬ ಪದಗಳನ್ನೇ ನೂರೆಂಟು ಸಲ ನಮೋಕಾರ ಮಂತ್ರವನ್ನು ಜಪಿಸಿದಂತೆ ಜಪಿಸತೊಡಗಿದನು.

ಇದರಿಂದ ಶ್ರೇಯಾಂಸನಿಗೆ ಮುಕ್ತಿ ಸಿಗುವದೇನೋ ನೋಡಬೇಕು.

೨೧

ರಾಮತೀರ್ಥದ ಶ್ರೀ ಸರಸ್ವತೀ ಸಂಗೀತ ನಾಟ್ಯವಿನೋದಿನಿ ಕಂಪನಿಯು ಊರಲ್ಲಿ ನವರಾತ್ರಿಯಾಗುತ್ತಲೇ ಬಂದು ತಳವೂರಿತ್ತು. ಊರ ಹೊರಗಿನ ಬಸವಣ್ಣದೇವರ ಗುಡಿಯ ಆವಾರದಲ್ಲಿ ಆ ಕಂಪನಿಯು, ಹರಕು ಪರದೆಯ ಮುರುಕು ಥೇಟರ ಒಂದನ್ನು ನಿರ್ಮಿಸಿ ಕೊಂಡಿತ್ತು. ನೆರೆಯಲ್ಲಿರುವ ಹಳೆಯ ಧರ್ಮಶಾಲೆಯೇ ನಾಟಕ ಮಂಡಳಿಯ ವಾಸಸ್ಥಾನ ಹಾಗೂ ಬಣ್ಣ ಬಳಿದುಕೊಳ್ಳುವ ಮನೆ ಯಾಗಿದ್ದಿತು. ಕಂಪನಿಯ ಒಡೆಯರು ಮಾತ್ರ ಊರಲ್ಲಿ ಒಂದು ಚಿಕ್ಕ ಮನೆಯನ್ನು ಬಾಡಿಗೆಗೆ ಹಿಡಿದು ವಾಸಿಸುತ್ತಿದ್ದರು. ಅವರ ಜೊತೆ ಯಲ್ಲಿಯೇ ನಾಟಕದಲ್ಲಿ ಮುಖ್ಯ ಸ್ತ್ರೀ ಪಾತ್ರವನ್ನು ವಹಿಸುತ್ತಿದ್ದ ಮೀನಾಕ್ಷಿ ಹಾಗೂ ಮಾಲಕನ ದೂರಿನ ಆಪ್ತರು–ಕಂಪನಿಯ ಆಧಾರ ಸ್ತಂಭರು–ಇರುತ್ತಿದ್ದರು. ಅವರೆಲ್ಲರ ಊಟ ಉಡಿಗೆಗಳು ಮನೆ ಯಲ್ಲಿಯೇ ಆಗುತ್ತಿದ್ದುವು. ಕಂಪನಿಯ ಅಡಿಗೆ ಮಾತ್ರ ಧರ್ಮಶಾಲೆ ಯಲ್ಲಿಯೇ ನಡೆಯುತ್ತಿದ್ದಿತು. ಅಡಿಗೆಯೆಂದರೇನು, ಏನಾದರೂ ನುಚ್ಚನ್ನೋ ಅಕ್ಕಿಯನ್ನೋ ಸ್ವಲ್ಪ ಕುದಿಸಿಕೊಳ್ಳುವುದು. ಎಲ್ಲರಿಗೂ ಸಾಲುವಷ್ಟು ರೊಟ್ಟಿಗಳನ್ನು ಊರೊಳಗೆ ಯಾರಲ್ಲಾದರೂ ದುಡ್ಡು ಕೊಟ್ಟು ಮಾಡಿಸಿಕೊಂಡು ಬಂದು ತಿನ್ನುವುದು. ಕಂಪನಿಯ ದಿನದ ವೆಚ್ಚ ಸುಮಾರು ಇಪ್ಪತ್ತು ರೂಪಾಯಿ ಇತ್ತು – ಅದೂ ನಾಟಕ ಆಡಿದ ದಿವಸ. ಉಳಿದ ದಿನಗಳಲ್ಲಿ ಹತ್ತೆಂಟು ರೂಪಾಯಿಗಳಾದರೆ ಸಾಲುತ್ತಿತ್ತು. ಆದರಿಂದ ಒಂದು ನಾಟಕಕ್ಕೆ ಇಪ್ಪತ್ತೈದು ರೂಪಾಯಿಗಳಾದರೆ ಮಾಲಕರ ಮುಖ ಅರಳಿರುತ್ತಿತ್ತು.

ಮಾಲಕರ ಮುಖ ಅರಳಿರಲಿ ಬಾಡಿರಲಿ ದಿನಾಲು ಪ್ರೇಕ್ಷಕರಿಂದ ಥೇಟರವೇನೋ ತುಂಬಿಯೇ ಇರುತ್ತಿದ್ದಿತು. ಸಾಲೆಯೊಳಗಿನ ಕುರ್ಚಿ ಬೆಂಚುಗಳೆಲ್ಲ ಇರುಳ ಕಂಪನಿಯುವರ ಸ್ವಾಧೀನವಾಗುತ್ತಿದ್ದುದರಿಂದ ಶಿಕ್ಷಕರಿಗೆಲ್ಲ ಫ್ರೀ ಪಾಸುಗಳಿದ್ದವು. ಮುಂಜಾನೆ ಅವುಗಳನ್ನು ಸಾಲೆಗೆ ಒಯ್ದು ಕೊಡುವುದಕ್ಕೂ ಸಾಯಂಕಾಲ ತರುವುದಕ್ಕೂ ಓಡಾಡುವ ಹುರುಪಿನ ಹಳ್ಳಿಯ ಹುಡುಗರಿಗೆಲ್ಲ ನಾಟಕಕ್ಕೆ ಪುಕ್ಕಟೆ ಪ್ರವೇಶವಿತ್ತು. ಕಂಪನಿಯು ಊರಲ್ಲಿ ಇರುವಾಗ ತುಡುಗು ದರೋಡೆಗಳಾಗದಂತೆ ಊರನ್ನು ಕಾಯುವ ಸನದಿಯವರೂ ಬೇಡರೂ ದಿನಾಲು ನಾಟಕ ನೋಡಲಿಕ್ಕೆ ಇರುವವರೇ. ಒಂದೊಂದು ದಿನ ತಪ್ಪಿ ಅವರು ಊರ ಕಾಯಲಿಕ್ಕೆ ಹೋದರೆ ಹೋಗುವ ಮುಂಚೆ ತಮ್ಮ ಮನೆಯವ ರನ್ನಾಗಲಿ ಆಪ್ತರನ್ನಾಗಲಿ ತಂದು ಥೇಟರಿನಲ್ಲಿ ಕೂಡಿಸಿಯೇ ಹೋಗು ತ್ತಿದ್ದರು. ಅಲ್ಲದೆ ನಾಟಕ ಆರಂಭವಾದೊಡನೆ ತಾವೂ ಬಂದು ಅವರೊಡನೆ ಸೇರುತ್ತಿದ್ದರು. ಊರೊಳಗಿನ ಪ್ರಮುಖರಿಗಂತೂ ಮಾಲಕರೇ ಸ್ವತಃ ಮನೆತನಕ ಹೋಗಿ ಪಾಸು ಕೊಟ್ಟು ಬಂದಿದ್ದರು ಅಂದಮೇಲೆ ಕೇಳುವದೇನು ? ಗೌಡರು, ಪಂತರು, ಸೆಟ್ಟರು, ಸಾವುಕಾರರು, ಸರಪಂಚರು ಎಲ್ಲರೂ ದಿನಾಲು ನಾಟಕ ಭವನವನ್ನು ಅಲಂಕರಿಸುತ್ತಿದ್ದರು. ಅಲ್ಲಿಟ್ಟಿದ್ದ ಕುರ್ಚಿಗಳು ಸಾಲದಿದ್ದರೆ ತಮ್ಮ ಮನೆಯಿಂದ ಕುರ್ಚಿಯನ್ನು ತರಿಸಿಕೊಂಡು ಕೂತು ನಾಟಕ ನೋಡುವ ರಸಿಕ ಗೌಡರಿಗೇನೂ ಕೊರತೆಯಿರಲಿಲ್ಲ ಊರಲ್ಲಿ. ಮೇಲಾಗಿ ಗೌಡರ ನೆರೆಮನೆಯವರಿಗೂ ಆಳುಹೋಳುಗಳಿಗೂ ನಾಟ್ಯವೇದಿಕೆಯ ಮೇಲೆ ಕೂಡ ಹೋಗಲಿಕ್ಕೆ ಪರವಾನಿಗೆ ಇತ್ತು. ಇನ್ನು ಕಂಪನಿಯವರಿಗೆ ರೊಟ್ಟಿಯನ್ನು ಬಡಿದುಕೊಡುವವರಿಗೂ ಗೇಟಿನಲ್ಲಿ ನಿಲ್ಲುವವರಿಗೆ ಚುಟ್ಟ ಕಡ್ಡಿಯ ಪೆಟ್ಟಿಗೆಗಳನ್ನು ಪೂರೈಸುವವರಿಗೂ ಪುಕ್ಕಟೆ ಪ್ರವೇಶ ದೊರೆಯು ವುದು ಸ್ವಾಭಾವಿಕವಾಗಿತ್ತು. ನೀರಲಕಟ್ಟಿಮಾಸ್ತರರ ನಾಟ್ಯರಸಿಕರಂತೂ ಹಗಲು ಇರುಳು ನಾಟಕ ಮನೆಯಲ್ಲಿಯೇ ಇರುತ್ತಿದ್ದರು. ಅವರ ಮಥಾ

ಹ್ನದ ಚಹ ಧರ್ಮಶಾಲೆಯಲ್ಲಿಯೋ ಆಗುವುದು. ಥೇಟರಿನ ಯಾವ ಬಾಗಿಲಲ್ಲಿಯೂ ಅವರನ್ನು ತಡೆಯುವವರು ಯಾರೂ ಇರುತ್ತಿರಲಿಲ್ಲ. ನೀರಲಕಟ್ಟಿ ಮಾಸ್ತರರಿಗಂತೂ ಮಾಲಕರ ಪಂಕ್ತಿಗೆ ದಿನಾಲು ಊಟ ಇರುತ್ತಿತ್ತು. ಅದಕ್ಕೆ ಪ್ರತಿಫಲವೆಂದು ದಿನಾಲು ನಾಟಕ ಮುಗಿಯುವ ಮುಂಚೆ ರಂಗಭೂಮಿಯ ಮೇಲೆ ಬಂದು ನಿಂತು, ಬಡ ಕಂಪನಿಗೆ ನಿತ್ಯ ಇದೇ ರೀತಿ ಸಹಾಯ ಸಲ್ಲಿಸಲಿಕ್ಕೂ ನಾಟಕಗಳನ್ನು ನೋಡಿ ಪ್ರೋತ್ಸಾಹಿಸಲಿಕ್ಕೂ ಊರ ಮಹಾಜನಗಳಲ್ಲೂ ನಾಗರಿಕರಲ್ಲೂ ವಿನಂತಿಸಿಕೊಳ್ಳುವ ಕಾರ್ಯವನ್ನು ಕಂಪನಿಯ ಆತ್ಮೀಯ ಗೆಳೆಯರಾಗಿ ನಾಟ್ಯಾನಂದರು ಮಾಡುತ್ತಿದ್ದರು. ಆಗ ಮರುದಿನ ಆಡುವ ನಾಟಕದ ಹೆಸರನ್ನು ಪ್ರಕಟಮಾಡುವ ಕರ್ತವ್ಯಕರ್ಮವೂ ಅವರ ಪಾಲಿನದಾಗಿರುತ್ತಿತ್ತು. ಹೀಗೆ ಊರ ಜನರಿಂದ ನಿರಂತರ ಪ್ರೋತ್ಸಾಹ ನಾಟಕ ಕಂಪನಿಗೆ ಸಲ್ಲುತ್ತಿತ್ತು !

ಅದರಲ್ಲೂ ನಾಟ್ಯಾನಂದ ನೀರಲಕಟ್ಟಿಯವರು ತಮ್ಮ ನಾಟಕವೊಂದನ್ನು ಅದೇ ರಂಗಭೂಮಿಯ ಮೇಲೆ ಆಡಿ ತೋರಿಸುವದೆಂದು ನಿರ್ಧರಿಸಿದ್ದರು. ಅದಕ್ಕೆ ಮಾಲಕರೂ ಒಪ್ಪಿಕೊಂಡಿದ್ದರು. ಇಷ್ಟೇ ಅಲ್ಲ, ಕಡಿಮೆ ಬಿದ್ದ ಪಾತ್ರಗಳನ್ನು ಕೂಡ ಕೊಟ್ಟು ಪೂರೈಸುವುದಾಗಿ ಅಭಿವಚನವಿತ್ತಿದ್ದರು. ಇದರಿಂದ ಊರೊಳಗಿನ ನಾಟ್ಯ ರಸಿಕರಿಗೆ ಬಹಳ ಹುರುಪು ಬಂದಿದ್ದಿತು. ಈ ರಾಮತೀರ್ಥ ಕಂಪನಿಯವರಿಗಿಂತ ಒಂದು ಕೈಮೇಲೆ ಮಾಡಿ ತೋರಿಸಬೇಕೆಂಬ ಹವಣಿಕೆಯು ಅವರಲ್ಲಿತ್ತು. ಅದರಿಂದ ದಿನಾಲು ನಾಟಕಕ್ಕೆ ಬಂದು ಸ್ಟೇಜಿನ ಮೇಲೆ ಹೇಗೆ ನಿಲ್ಲಬೇಕು, ಪ್ರವೇಶಿಸುವ ಕ್ರಮವೇನು, ನಿಷ್ಕ್ರಮಿಸುವ ರೀತಿಯೇನು, ಅಭಿನಯದ ಗುಟ್ಟೇನು, ಮಾತಿನ ಮಲ್ಲಗಾರಿಕೆ ಹೇಗಿದೆ, ಪ್ರಾಮ್ಟ ಮಾಡುವವರನ್ನು ಹೇಗೆ ಕೇಳಿಕೊಳ್ಳುವುದು ಇತ್ಯಾದಿ ಸಂಗತಿಗಳನ್ನೆಲ್ಲ ನಿರೀಕ್ಷಿಸುತ್ತಿದ್ದರು. ಅದರಂತೆ ತಮ್ಮ ತಾಲೀಮು ಮನೆಯಲ್ಲಿ ಅಭ್ಯಾಸ ಮಾಡುತ್ತಿದ್ದರು. ತಮ್ಮ ನಾಟಕದಲ್ಲಿ ಮೀನಾಕ್ಷಿಯೂ ಪಾತ್ರ

ವಹಿಸುವಳೆಂಬ ಸಂಗತಿಯನ್ನು ಕೇಳಿಯಂತೂ ಅವರ ಉತ್ಸಾಹ ಇಮ್ಮಡಿಯಾಯಿತು. ಸೀರಲಕಟ್ಟಿ ಮಾಸ್ತರರ ಪ್ರಯತ್ನದಿಂದ ಕಂಪನಿ ಮಾಲಕರ ಮೀನಾಕ್ಷಿಯು ಇವರ ನಾಟಕದಲ್ಲಿ ಮುಖ್ಯ ಸ್ತ್ರೀಪಾತ್ರವನ್ನು ವಹಿಸುವುದಕ್ಕೆ ಒಪ್ಪಿದ್ದಳು. ಅವಳ ಜೊತೆಗೆ ಮೂರು ನಾಲ್ಕು ಜನ ಕಂಪನಿಯ ನಟರೂ ಇದರಲ್ಲಿ ಬಂದು ಸೇರಿಕೊಂಡರು. ಮಾಸ್ತರರು ಕಂಪನಿಯಿಂದ ತಾವೇನಾದರೂ ಲಾಭ ಮಾಡಿಕೊಳ್ಳಬೇಕೆಂದು ಹೊಂಚು ಹಾಕಿದ್ದರೆ ಕಂಪನಿಯವರು ಅನಾಯಾಸವಾಗಿ ಹೊಸ ನಾಟಕವೊಂದನ್ನು ಕೂಡಿಸಿಕೊಂಡಂತಾಗುವುದೆಂದು ತಮ್ಮ ನಟರನ್ನು ಹೆಚ್ಚಾಗಿ ಕೊಟ್ಟುಬಿಟ್ಟರು. ಈ ಊರಲ್ಲಿ ಅಲ್ಲದಿದ್ದರೂ ಮುಂದಿನ ಊರಲ್ಲಿ ಆಡಲಿಕ್ಕೆ ಹೆಚ್ಚಿನ ನಾಟಕದ ಅಭ್ಯಾಸವಾದಂತಾಯಿತೆಂದು ಭಾವಿಸಿ ಕಂಪನಿಯ ಮಾಲಕರು ಮಾಸ್ತರರೊಡನೆಯೂ ಅವನ ಸಂಗಡಿಗರೊಡನೆಯೂ ಧಾರಾಳವಾಗಿ ನಡೆದುಕೊಳ್ಳತೊಡಗಿದರು.

ಇದೇ ಸಂದರ್ಭದಲ್ಲಿ ದತ್ತಮೂರ್ತಿಯನ್ನು ಮುಂದೆ ಮಾಡಿಕೊಂಡು ಶ್ರೇಯಾಂಸನೂ ನಾಟಕದವರ ಬಳಗವನ್ನು ಸೇರಿದನು. ಮೊದಲು ಕಂಪನಿಯ ಮಾಲಕರ ಪರಿಚಯವನ್ನು ಮಾಡಿಕೊಳ್ಳಲಿಕ್ಕೆಂದು ಅವರ ಮನೆಗೇನೇ ನೇರವಾಗಿ ದತ್ತಮೂರ್ತಿಯೊಡನೆ ಹೋದ. ಆದೂ ಇರುಳು ಹತ್ತುಗಂಟೆಯ ಸುಮಾರಿಗೆ. ಮಾಲಕರು ಮೀನಾಕ್ಷಿಯೊಡನೆ ಇದೀಗ ಊಟ ಮುಗಿಸಿಕೊಂಡು ಎಲೆ ಅಡಿಕೆ ಹಾಕಿಕೊಳ್ಳುತ್ತಿದ್ದರು. ಉಳಿದ ಬಳಗದವರು ಇನ್ನೆರಡು ತಾಸುಗಳಲ್ಲಿ ಆರಂಭವಾಗಲಿರುವ ನಾಟಕದ ಪೂರ್ವ ಸಿದ್ಧತೆಗೆಂದು ಥೇಟರಿನ ಕಡೆಗೆ ಹೋಗಿದ್ದರು. ಸೀರಲಕಟ್ಟಿ ಮಾಸ್ತರರಂತೂ ತಮ್ಮ ನಾಟಕದ ಪ್ರ್ಯಾಕ್ಟೀಸಿನಲ್ಲಿ ಆ ಹೊತ್ತಿಗೆ ಇರಬೇಕು. ಇದೇ ಸಂದರ್ಭವು ಕಂಪನಿಯ ಮಾಲಕರನ್ನು ಕಾಣಲು ಯೋಗ್ಯವೆಂದು ಗೆಳೆಯರಿಬ್ಬರೂ ನಿರ್ಧರಿಸಿ ಹೋಗಿದ್ದರು.

"ಏನು ಬಂದಿರಿ ?" ದೇಶಾವರಿ ನಗೆಯೊಂದನ್ನು ಬೀರಿ

ಮಾಲಕರು ಕೇಳಿದರು.

"ನನ್ನದೊಂದು ನಾಟಕ...."

ನೇರವಾಗಿಯೇ ವಿಷಯವನ್ನು ಪ್ರಸ್ತಾಪಿಸಲಿಕ್ಕೆ ಶ್ರೇಯಾಂಸ ಆರಂಭಿಸಿದ. ಆದರೂ ಅಪರಿಚಿತರೊಡನೆ ಮಾತನಾಡುತ್ತಿದ್ದುದರಿಂದ ಧ್ವನಿಯಲ್ಲಿ ಸ್ವಲ್ಪ ಸಂಕೋಚವೂ ಇತ್ತು. ಅಷ್ಟರಲ್ಲಿ ಶ್ರೇಯಾಂಸನ ಮಾತನ್ನು ತಡೆದು ದತ್ತಮೂರ್ತಿಯೇ ಮಾತಿಗೆ ಆರಂಭಿಸಿದ.

"ಸಹಜ ಬಂದಿದ್ದೆವು.... ನಮ್ಮ ಗೆಳೆಯ-ಶ್ರೇಯಾಂಸನೆಂದು ಇವರ ಹೆಸರು. ಇವರು ಈ ಭಾಗದ ಸುದ್ದಿಗಾರರು.... 'ಸಂದೇಶ' ಪತ್ರಿಕೆಗೆ. ತಮ್ಮ ಸಂದರ್ಶನವಾಗಬೇಕೆಂದರು. ಕರೆದುಕೊಂಡು ಬಂದಿರುವೆ...."

"ಅಹಃ! ಹಃ! ಹಃ! ಬಹಳ ಒಳ್ಳೇದಾಯ್ತು....ಒಳಗೆ ಬನ್ನಿ!"

ಎಂದು ಆನಂದದಿಂದ ಶ್ರೇಯಾಂಸನ ಕೈಹಿಡಿದು ಸ್ವಾಗತಿಸಿದರು ನಾಟಕ ಕಂಪನಿಯ ಮಾಲಕರು.

ಶ್ರೇಯಾಂಸ ಹುಚ್ಚುನಗೆಯೊಂದನ್ನು ಬೀರಿ, ಹೆದರಿಕೆಯಿಂದ ಗೆಳೆಯನ ಮುಖದ ಕಡೆಗೊಮ್ಮೆ ಆ ಮಾಲಕರ ಮುಖದ ಕಡೆಗೊಮ್ಮೆ ನೋಡಿ ಅವರ ಸಂಗಡ ಒಳಗೆ ಹೋದ.

ಮಾಲಕರು ಶ್ರೇಯಾಂಸನನ್ನೂ ದತ್ತಮೂರ್ತಿಯನ್ನೂ ಕರೆದೊಯ್ದು ಆಗ್ರಹದಿಂದ ಆರಾಮ ಕುರ್ಚಿಗಳಲ್ಲಿ ಕೂಡಿಸಿದರು. ಆಮೇಲೆ ಮೀನಾಕ್ಷಿಯ ಪರಿಚಯ ಮಾಡಿಕೊಟ್ಟ. ಹಾಗೆಯೇ ಸಂದರ್ಶಕರಿಬ್ಬರಿಗೂ ಚಹ ಆಗಬೇಕೆಂದು ಮೀನಾಕ್ಷಿಗೆ ಸೂಚಿಸಿದ.

"ಈಗ ಶಿವಪ್ಪ ಬಂದೊಡನೆ ಮಾಡಿಸುತ್ತೇನೆ...."

"ಎಲ್ಲಿ ಹೋದನೋ ಶಿವ್ಯಾ ಇಂಥಾ ಹೊತ್ತಿನೊಳಗೆ.... ಯಾವಾಗಲೂ .... ಒಬ್ಬರಿಗೆ ಇಲ್ಲಿ ಇರಲಿಕ್ಕೆ ಹೇಳಿದರೆ ಎಲ್ಲಿಯೋ ಫರಾರಿಯಾಗಿ ಬಿಟ್ಟಿರತಾರೆ ಧಡ್ಡರು...."

ನಾಟಕೀಯ ರೋಷದಿಂದ ನುಡಿದರು ಮಾಲಕರು. ಅವರೇ ತುಸು ಹೊತ್ತಿನ ಮುಂಚೆ ಥೇಟರಿನ ಕಡೆಗೆ ಕಳಿಸಿದ್ದರೆಂಬುದನ್ನು ಅರಿತ ಮೀನಾಕ್ಷಿಯು,

"ಈಗ ಥೇಟರಿನ ಕಡೆಗೆ ಹೋಗಿದ್ದಾನೆ....ಬಂದಾನು...." ಎಂದು ಸಮಾಧಾನ ಹೇಳಿದಳು.

"ನೀನು ಕಳಸಿದೆಯೇನು ಮತ್ತ....?"

ಹಣೆಗೆ ಹದಿನಾರು ಗಂಟುಹಾಕಿ, ರಭಸದಿಂದ ಕೇಳಿದ ಮಾಲಕ.

"ನಟರು ಬಣ್ಣ ಹಚ್ಚಿಕೊಂಡರೊ ಇಲ್ಲೋ ನೋಡಲಿಕ್ಕೆ ಕಳಿಸಿದೆ ಸ್ವಾಮಿ...."

ಯಾವುದೋ ಒಂದು ನಾಟಕದೊಳಗಿನ ಸೂತ್ರಧಾರನ ಎದುರಿಗೆ ನಿಂತು ನುಡಿಯುವ ನಟಿಯು ಮಾತನ್ನೊಂದನ್ನು ಆಡಿ ಸುಮ್ಮನಾದಳು.

ಇಷ್ಟು ನಾಟಕ ಮುಗಿಯುವಷ್ಟರಲ್ಲಿ ದತ್ತಮೂರ್ತಿ ತನ್ನ ನಾಟಕವನ್ನು ಆರಂಭಿಸಿದ.

"ಅನುಚಿತ ವೇಳೆಯಲ್ಲಿ ಬಂದೆವೇನೋ ನಾವು! ತಾವು ನಾಟಕದ ಪೂರ್ವ ಸಿದ್ಧತೆಗೆ ಹೋಗಬೇಕೇನೋ?"

"ಇಲ್ಲ! ಎಲ್ಲ ಸ್ಟೇಜ ಮ್ಯಾನೇಜರ ನೋಡಿಕೊಳ್ಳುತ್ತಾನೆ.... ನಾವು ನಮ್ಮ ಪ್ರವೇಶ ಬಂದಾಗ ಹೋದರೂ ನಡೆಯುವುದು...."

"ಇನ್ನೂ ಬಣ್ಣ ಭೂಷಣಗಳು ಬೇರೆ ಆಗಬೇಕೇನೋ?"

"ಅಯ್ಯೋ, ಅದಕ್ಕೇನು ಅವಸರ....? ಇನ್ನೂ ತುಂಬ ಅವಕಾಶ ಇದೆ....ಧಾರಾಳವಾಗಿ ಮಾತನಾಡಿ....ನಮಗೇನು ಐದು ನಿಮಿಷವಾದರೆ ಸಾಕು ಬಣ್ಣ ಹಚ್ಚಿಕೊಳ್ಳಲಿಕ್ಕೆ ನಾವು ಮನೆಯಲ್ಲಿಯೇ ಬಣ್ಣಮಾಡಿ ಕೊಂಡು ಹೋಗುತ್ತಿರುತ್ತೇವೆ...."

"ಆಯಿತು; ನಮಗೇನೂ ಹೆಚ್ಚಿಗೆ ಮಾತನಾಡಬೇಕಿಲ್ಲ....ತಮ್ಮ ಪರಿಚಯ ಕೊಡಬೇಕಾಗಿದೆ ಪತ್ರಿಕೆಯಲ್ಲಿ....ಒಂದು ಭಾವಚಿತ್ರ ಇದ್ದರೆ ಬೇಕು. ಸ್ವಲ್ಪ ಪರಿಚಯವನ್ನೂ ಹೇಳಿ...."

ಎಂದು ದತ್ತಮೂರ್ತಿ ಶ್ರೇಯಾಂಸನ ಸಂಗಡ ತಂದ 'ವಿಜಯ ಸಾಮ್ರಾಜ್ಯ'ದ ಪುಟಗಳನ್ನೇ ತೆರೆದು ತೆರವಿದ್ದ ಸ್ಥಳವನ್ನು ಟಿಪ್ಪಣಿ ಬರೆದುಕೊಳ್ಳಲಿಕ್ಕೆ ಹುಡುಕ ಹತ್ತಿದ. ಹಾಗೆಯೇ,

"ಹೆಚ್ಚಿಗೇನೂ ಬೇಕಾಗಿಲ್ಲ....ನಿಮ್ಮ ನಾಟಕಗಳನ್ನಂತು ದಿನಾಲು ನೋಡುತ್ತಲೇ ಇದ್ದೇವೆ...." ಎಂದ.

"ನಿಮಗೆ ಪಾಸು ಇದೆಯೇ ?"

"ಇಲ್ಲ....! ಪಾಸು ಏತಕ್ಕೆ ಬೇಕಾಗಿದೆ ? ಕೈಲಾದಷ್ಟು ಕಂಪನಿಗೆ ಸಹಾಯ ಮಾಡೋಣಲ್ಲ....ಈ ಚಲಚಿತ್ರ ಯುಗದಲ್ಲಂತೂ ನಾಟಕ ಕಂಪನಿಗಳ ಸ್ಥಿತಿಯಂತೂ ಬಹಳ ಕೆಟ್ಟು ಹೋಗಿದೆ. ಇಂಥ ಸ್ಥಿತಿಯಲ್ಲಿ ಕಂಪನಿ ನಡೆಸುವದೆಂದರೆ ಬಹು ಬಿಗಿಯಾಗಿ ಕೂತಿದೆ. ಅವರಲ್ಲಿ ನಮ್ಮಂಥ ನಾಲ್ಕು ಜನ ಬಲ್ಲವರು ಫ್ರೀ ಪಾಸಿನ ಕುರ್ಚಿಗಳನ್ನು ಹಿಡಿದುಕೊಂಡು ಕುಳಿತುಬಿಟ್ಟರೆ ತೀರಿತು."

ಮಾಲಕರ ಮನಸ್ಸಿನೊಳಗಿದ್ದುದನ್ನೇ ಎತ್ತಿ ಆಡಿದ ದತ್ತಮೂರ್ತಿ. ಆದರೆ ಮಾಲಕ ಆ ಮಾತನ್ನು ಎತ್ತಿ ಹಿಡಿಯುವ ನುಡಿದ.

"ನಮ್ಮ ಕಂಪನಿಯ ಸ್ಥಿತಿಯೇನೂ ಹಾಗಿಲ್ಲ ಬಿಡಿರಿ.! ದಿನಾಲು ನೀವೇ ನೋಡುವಿರಲ್ಲ....ಥೇಟರ ಹೇಗೆ ತುಂಬಿರುವುದೆಂಬುದನ್ನು...." ಸ್ವಲ್ಪ ತಡೆದು.... "ನೀವು ಅನ್ನುವುದೇನೂ ಸುಳ್ಳಲ್ಲ....ಅನೇಕ ಕಂಪನಿಗಳ ಸ್ಥಿತಿ ಹಾಗೆ ಇರುತ್ತದೆ ಮಾತ್ರ....ಆ ಸ್ಥಿತಿಗೆ ಬಂದ ಮೇಲೆ ಕಂಪನಿಯನ್ನೇಕೆ ನಡೆಯಿಸಬೇಕು ನಮ್ಮಂಥವರು.? ಎಲ್ಲಿ ಬೇಕಾದಲ್ಲಿ ತಿಂಗಳಿಗೆರಡು ಸಂಗೀತ ಕಚೇರಿಗಳನ್ನು ನಡೆಯಿಸಿದರೆ ಸಾಕು.... ಸಾವಿರಾರು ರೂಪಾಯಿ ಬಂದು ಹೋಗುತ್ತದೆ."

ಮಾಲಕರ ಈ ಮಾತುಗಳನ್ನು ಕೇಳಿ ಶ್ರೇಯಾಂಸನ ಮುಖ ಸಪ್ಪಗಾಯಿತು. ಇಂಥವರು ತನ್ನ ನಾಟಕವನ್ನು ಆಡುವರೋ ಇಲ್ಲವೋ ಎಂಬ ಸಂಶಯ ಅವನಿಗೆ. ದತ್ತಮೂರ್ತಿಯಂತೂ ನಾಟಕದ ವಿಷಯವನ್ನೇ ಎತ್ತಲಿಲ್ಲ. ಕಂಪನಿಯ ಮಾಲಕರು ಬರೆದು ಕೊಟ್ಟ

ಫ್ರೀ ಪಾಸುಗಳನ್ನು ಮೊದಲು ಸ್ವೀಕರಿಸಿದ. ಆಮೇಲೆ ಮೀನಾಕ್ಷಿಯು ತನ್ನೊಂದು ಪೆಟ್ಟಿಗೆಯನ್ನು ತೆರೆದು, ಒಂದು ಕವರಿನಲ್ಲಿ ಜಪ್ತಿಸಿ ಇಟ್ಟು ತನ್ನ ಹಾಗೂ ಯಜಮಾನರ ಪರಿಚಯ ಕಾಗದಗಳನ್ನು ಕೊಟ್ಟಳು. ತಕ್ಕೊಂಡ. ಅವೆರಡೂ ಯಾವುದೋ ಒಂದು ಮರಾಠಿಯ ಪತ್ರಿಕೆಯ ತುಂಡುಗಳಾಗಿದ್ದುವು. ಅದರಲ್ಲಿ ಅವರಿಬ್ಬರ ಭಾವ ಚಿತ್ರಗಳೂ ಪ್ರಕಟವಾಗಿದ್ದುವು. ಅವುಗಳನ್ನು ನೋಡಿ ದತ್ತಮೂರ್ತಿಯು,

"ನನಗೂ ಭಾವಚಿತ್ರಗಳು ಬೇಕಲ್ಲ....!" ಎಂದು ಕೇಳಿದ.

"ಪಡಿಯಚ್ಚುಗಳೇ ಅವರೆ ನಡೆಯಲಿಕ್ಕಿಲ್ಲವೆ ?"

"ಯಾವುದಿದ್ದರೂ ನಡೆದೀತು. ಪಡಿಯಚ್ಚುಗಳನ್ನೇ ಕೊಡಿರಿ. ಮತ್ತಿಷ್ಟು ನಮ್ಮ ಕಾರ್ಯ ಹಗುರಾಯಿತು."

ಮಾಲಕರೇ ಸ್ವತಃ ಎದ್ದು ತಮ್ಮ ಟ್ರಂಕಿನೊಳಗಿನ ಪಡಿಯಚ್ಚು ಗಳನ್ನು ತೆಗೆದು ದತ್ತಮೂರ್ತಿಯ ಕೈಗೆ ಕೊಟ್ಟರು. ಆಮೇಲೆ ಚಹಾ ಪಾನವಾದ ತರುವಾಯ ಗೆಳೆಯರಿಬ್ಬರೂ ಹೊರಟು ಬಂದರು. ಕಂಪನಿಯ ಮಾಲಕರು ಬಾಗಿಲವರೆಗೂ ಕಳಿಸಲಿಕ್ಕೆ ಬಂದು, ದಿನಾಲು ನಾಟಕಕ್ಕೆ ಬರಲು ಆಗ್ರಹದಿಂದ ವಿನಂತಿ ಮಾಡಿಕೊಂಡರು.

ಸ್ವಲ್ಪ ಮುಂದೆ ಹೋದ ಕೂಡಲೆ ಶ್ರೇಯಾಂಸ ದತ್ತಮೂರ್ತಿಯ ಭುಜವನ್ನು ತಟ್ಟಿ,

"ಇದೇನೋ ದತ್ತ ?" ಎಂದು ಕೇಳಿದ.

"ನಿನಗೆ ಈಗ ಗೊತ್ತಾಗೋದಿಲ್ಲ....ಸ್ವಲ್ಪ ದಿನ ತಡೆ."

"ಅಲ್ಲೋ ನಮ್ಮ ನಾಟಕದ ಮಾತು ಎಲ್ಲೋ ಉಳಿಯಿತಲ್ಲೋ! ನಾವು ಹೋದದ್ದು ಏತಕ್ಕೆ, ಮಾಡಿಕೊಂಡು ಬಂದುದೇನು?"

"ಹುಚ್ಚಾ! ನೇರವಾಗಿ ನಮ್ಮ ನಾಟಕವನ್ನು ಆಡಿರೆಂದು ಹೇಳ ಲಿಕ್ಕೆ ಹೋಗಿದ್ದರೆ ಒಪ್ಪುವನೇ ಆ ಪ್ರಾಣಿ? ಅದರಲ್ಲೂ ಸೀರಲಕಟ್ಟಿ ಮಾಸ್ತರರ ಮುಗ್ಗುಲು ನಾರಿ ಬೇರೆ ಅದ....ಅಂಥವರ ಮೇಲೆ ಹೀಗೆ ಏನಾದರೂ ಇಂಪ್ರೆಶನ್ ಹೊಡೆದಾಗಲೇ ನಮ್ಮ ಕಾರ್ಯ ಸಾಧಿಸುವುದು!"

"ಇಂಥದೇನು ನನಗೆ ಒಪ್ಪಿಗೆಯಿಲ್ಲ ನೋಡು.!"

"ಸುಮ್ಮನೆ ಇರುವೆಯೋ ಇಲ್ಲೋ ನೀನು..? ನಾನೆಲ್ಲ ಮಾಡಿವೆ. ನಿನ್ನ ನಾಟಕ ಆಡಲಿಕ್ಕೆ ಹಚ್ಚುವೆ ಎಲ್ಲ ಮಾಡುವೆ...."

"ಈ ಪರಿಯಿಂದ ಇವರು ನನ್ನ ನಾಟಕವನ್ನು ಆಡುವುದೇ ಬೇಡ."

"ಮಳ್ಳಗ ಗಿಳ್ಳಗ ಏನಾದರೆ ಆಗಬೇಕೇನೋ ನೀನು . ? ವರ್ತಮಾನ ಪತ್ರದ ಪ್ರಸಿದ್ಧಿ ಎಂದರೆ ಎಷ್ಟು ಬಾಯಿ ಬಿಡತಾರ ನೋಡಿದ್ಯೋ ಇಲ್ಲೋ–? ಎಲ್ಲರೂ ನಿನ್ನ ಹಾಗೇ ಇರತಾರೇನು ?"

ಹೀಗೆ ಕಂಪನಿಯ ಮಾಲಕರೊಡನೆ ಮೊದಲನೆಯ ಸಂದರ್ಶನ ಮುಗಿಯಿತು. ಅನಂತರ ದತ್ತಮೂರ್ತಿಯು ಶ್ರೇಯಾಂಸನನ್ನು ಕರೆದು ಕೊಂಡು ಆಗಾಗ ನಾಟಕಕ್ಕೂ ಹೋಗತೊಡಗಿದ. ಬರಬರುತ್ತ ಕಂಪನಿಯ ಉಳಿದ ಜನರ ಪರಿಚಯವೂ ಬೆಳೆಯಿತು. ಅವರ ಕೂಡ ಸರಾಗವಾಗಿ ಮಾತುಕತೆಗಳೂ ಸಾಗತೊಡಗಿದುವು. ಆಗ ಒಂದೊಂದೇ ಸಂಗತಿಗಳು ಶ್ರೇಯಾಂಸನಿಗೆ ತಿಳಿಯುತ್ತ ಬಂದವು. ಮೀನಾಕ್ಷಿಯು ನೀರಲಕಟ್ಟಿಯವರ ಬಲೆಯೊಳಗೆ ಬಿದ್ದಿರುವಳೆಂದೂ ಸಧ್ಯದಲ್ಲಿ ಅವಳು ಕಂಪನಿಯನ್ನೇ ಬಿಟ್ಟರೂ ಬಿಡಬಹುದೆಂದೂ ಗುಟ್ಟಾಗಿ ಸುದ್ದಿಯಿದ್ದಿತು. ಅಲ್ಲದೆ ಮೀನಾಕ್ಷಿಯ ಮನವನ್ನು ಒಲಿಸಿಕೊಳ್ಳಲಿಕ್ಕೆ ಜಿನಗೌಡರಲ್ಲಿಯೂ ಮಾಸ್ತರರಲ್ಲಿಯೂ ಏರಾಟವೇ ನಡೆದಿವೆ–ಎಂಬ ಸಂಗತಿಯೂ ಕಿವಿಗೆ ಬಿದ್ದಿತು. ಅದಕ್ಕಾಗಿಯೇ ಮೊನ್ನೆ ಅಕ್ಕಾಸಾನಿಯ ಮನೆಯಲ್ಲಿ ಮೀನಾಕ್ಷಿಯ ಸಂಗೀತ ಕಚೇರಿ ನಡೆಯಿತೆಂದು ಗೊತ್ತಾಯಿತು. ಇದೆಲ್ಲವನ್ನೂ ಕೇಳಿ ಶ್ರೇಯಾಂಸನಿಗೆ ಈ ಕಂಪನಿಯವರ ಸಹವಾಸವೇ ಬೇಡವೆಂವೆನಿಸಿತು. ಆದರೆ ದತ್ತಮೂರ್ತಿಯೊಂದು ಸುಮ್ಮನಿರಬೇಕಲ್ಲ. ಅವನ ಕಾರ್ಯ ಹಾಗೇ ಮುಂದುವರಿದಿತ್ತು.

ನಾಲ್ಕಾರು ದಿನಗಳಲ್ಲಿ 'ಸಂದೇಶ' ಪತ್ರಿಕೆಯಲ್ಲಿ 'ಶ್ರೀ ಸರಸ್ವತೀ ಸಂಗೀತ ನಾಟ್ಯ ವಿನೋದಿನಿ' ಕಂಪನಿಯ ಪರಿಚಯ ಪ್ರಕಟವಾಗಿ ಬಂತು. ಅದರಲ್ಲಿ ಕಂಪನಿಯ ಮಾಲಕರಿಗೆ 'ವಿನೋದ ರತ್ನಾಕರ'

ಎಂದೂ, ಮೀನಾಕ್ಷಿಗೆ 'ಸಂಗೀತ ಶಾರದೆ' ಎಂದೂ ವಿಶೇಷಣಗಳನ್ನು ಹಚ್ಚಿ, ಅವರ ಭಾವಚಿತ್ರಗಳನ್ನೂ ಪರಿಚಯವನ್ನೂ ಕೊಡಲಾಗಿದ್ದಿತು. ಮೇಲಾಗಿ ಕನ್ನಡ ಗಡಿನಾಡಿನಲ್ಲಿ ಕಂಪನಿಯು ಮಾಡಿದ ನಾಟ್ಯಸೇವೆಯನ್ನೂ ಕಲಾಸೇವೆಯನ್ನೂ ಧಾರಾಳವಾಗಿ ಹೊಗಳಲಾಗಿದ್ದಿತು. ಈ ಸೇವೆಗೆಲ್ಲ ನಾಟ್ಯಾನಂದ ನೀರಲಕಟ್ಟೆಯವರೂ ರಸಿಕ ಶಿಖಾಮಣಿಗಳಾದ ಜಿನಗೌಡರೂ ಕಾರಣವೆಂದು ಇವರ ಬೆನ್ನನ್ನೂ ಚಪ್ಪರಿಸಿ ಬರೆದಿದ್ದಿತು. ಇದನ್ನು ನೋಡಿ ಎಲ್ಲರೂ ಉಬ್ಬಿದರು. ಆದರೆ ಗೌಡರ ಹೆಸರೂ ಬಂದಿತಲ್ಲ ಎಂದು ನಾಟ್ಯಾನಂದರೂ, ನೀರಲಕಟ್ಟೆ ಮಾಸ್ತರರ ಹೆಸರನ್ನೂ ಹುಚ್ಚು ಹುಡುಗರು ಸೇರಿಸಿರುವರಲ್ಲ ಎಂದು ಗೌಡರೂ ಒಳಗೊಳಗೇ ಕೊರಗುತ್ತಿದ್ದರು.

ಇನ್ನೊಂದು ವಾರ ಉರುಳಿತು. ಆಮೇಲೆ ದತ್ತಮೂರ್ತಿಯು ತಾನೊಬ್ಬನೇ ಕಂಪನಿಯ ಮಾಲಕರನ್ನು ಕಂಡು 'ವಿಜಯ ಸಾಮ್ರಾಜ್ಯ'ದ ವಿಷಯಕ್ಕೆ ಮಾತನ್ನೆತ್ತಿದ. ಮಾಲಕರೂ ಸಂತೋಷದಿಂದ ಒಪ್ಪಿದರು. ಇಷ್ಟೇ ಅಲ್ಲ, ಮರುದಿನದಿಂದಲೇ ಈ ಹೊಸ ನಾಟಕವನ್ನು ರಿಹರ್ಸಲ್ಲಿಗೆ ತಕ್ಕೊಂಡರು. ಆಗ ಮಾತ್ರ ಶ್ರೇಯಾಂಸ ಎಲ್ಲವನ್ನೂ ಮರೆತು ಪಾತ್ರಗಳ ಮಾತು ಅಭಿನಯಗಳನ್ನು ತಿದ್ದಲಿಕ್ಕೆ ನಿಂತುಕೊಂಡು ಬಿಟ್ಟ.

ನಾಟಕದ ರಿಹರ್ಸಲ್ಲು ಮಧ್ಯಾಹ್ನ ಧರ್ಮಶಾಲೆಯಲ್ಲಿಯೇ ನಡೆಯುತ್ತಿತ್ತು. ಆಗ ದತ್ತಮೂರ್ತಿ ಶ್ರೇಯಾಂಸರಿಬ್ಬರೂ ಕೂಡಿಯೇ ಅಲ್ಲಿ ಹೋಗುತ್ತಿದ್ದರು. ಒಮ್ಮೆ 'ವಿಜಯ ಸಾಮ್ರಾಜ್ಯ'ವನ್ನು ರಂಗಭೂಮಿಯ ಮೇಲೆ ತಂದು, ಯಶಸ್ವಿಯಾಗಿ ಮಾಡಿ ತೋರಿಸಿಬಿಟ್ಟರೆ ಈ ಕಂಪನಿಯವರ ಸಹವಾಸವೇ ಬೇಡವೆನ್ನುವಷ್ಟು ಗೆಳೆಯರಿಬ್ಬರೂ ಬೇಸತ್ತುಹೋಗಿದ್ದರು. ಆ ನಾಟಕದ ಜನರ ಹೊಲಸು ಹರಟೆ, ಕೀಳು ವಿಚಾರಗಳನ್ನು ಕಂಡು ಇವರ ಮನಸ್ಸು ಹೇಸಿಹೋಗಿತ್ತು. ರಿಹರ್ಸಲ್ಲಿಗೆ ಒಮ್ಮೆಯೂ ವೇಳೆಗೆ ಸರಿಯಾಗಿ ಕೂಡುವಂತಿಲ್ಲ. ಅವರೆಲ್ಲರನ್ನೂ ಹಿಡಿದು ತಂದು, ಪ್ರ್ಯಾಕ್ಟೀಸು ಆರಂಭಿಸಬೇಕಾದರೆ ದತ್ತ

ಮೂರ್ತಿಗೆ ಸಾಕುಬೇಕಾಗುತ್ತಿತ್ತು. ಮೀನಾಕ್ಷಿಯಂತೂ ಜಂಭದ ಕೋಳಿ. ಅವಳಿಗೆ ಒಂದು ಮಾತನ್ನೂ ಚೆನ್ನಾಗಿ ಆಡಲಿಕ್ಕೆ ಬಾರದು. ಆದರೆ ಅವಳ ಮಾತುಗಳನ್ನು ಯಾರೂ ತಿದ್ದುವಂತಿಲ್ಲ. ಆದರಲ್ಲೂ ನೀರಲಕಟ್ಟಿ ಮಾಸ್ತರರು ಬೇರೆ 'ಮೀನಾಕ್ಷಿಯ ಬಾಯಿಂದ ಮುತ್ತುಗಳು ಉದುರಿದಂತೆ ಮಾತುಗಳು ಹೊರಡುತ್ತವೆ,' ಎಂದು ಹೇಳಿ ಅಟ್ಟಕ್ಕೇರಿಸಿ ಬಿಟ್ಟಿದ್ದರು ಆಕೆಯನ್ನು ಅಂದ ಮೇಲೆ ಕೇಳುವದೇನು. ಅವಳ ಬಿಂಕು ಬೆಡಗುಗಳನ್ನು? ನೀರಲಕಟ್ಟಿ ಮಾಸ್ತರರ ನಾಟಕದಲ್ಲಿಯಂತೂ ಅವಳು ಮಾಡಿದ್ದೇ ಸಾರೋದ್ಧಾರ! ಇಲ್ಲಿ ಹಾಗೆ ನಡೆಯದು ಅದರಿಂದ 'ವಿಜಯ ಸಾಮ್ರಾಜ್ಯ'ದ ರಿಹರ್ಸಲ್ಲಿಗೆ ಬರುವದೆಂದರೆ ಅವಳು ಮೂಗನ್ನು ಮುರಿಯುತ್ತಿದ್ದಳು. ಅಲ್ಲದೆ ಬೇಸರದಿಂದಲೇ ಬರುತ್ತಿದ್ದಳು. ನೀರಲಕಟ್ಟಿ ಮಾಸ್ತರರಿಗೂ ಇಷ್ಟೇ ಬೇಕಾಗಿದ್ದಿತು. ಶ್ರೇಯಾಂಸನ 'ವಿಜಯ ಸಾಮ್ರಾಜ್ಯ'ಕ್ಕಿಂತಲೂ ತಮ್ಮ ನಾಟಕ ಮೊದಲು ರಂಗಭೂಮಿಯ ಮೇಲೆ ಬರಬೇಕೆಂದು ಅವರ ಹವಣಿಕೆ ಇದ್ದಿತು. ಆಮೇಲೆ 'ವಿಜಯ ಸಾಮ್ರಾಜ್ಯ' ಆಡುವ ಮೊದಲೇ ಕಂಪನಿಯನ್ನು ಈ ಊರಿಂದ ಹೊರಗೆ ಹಾಕಿಸಿಬಿಟ್ಟರಾಯಿತೆಂದು ವಿಚಾರಿಸಿದ್ದರು. ಈ ವಿಚಾರ ತಲೆಯಲ್ಲಿ ಸುಳಿದಾಗಲೆಲ್ಲ ಅವರ ಮುಖದ ಮೇಲೊಂದು ಮಂದಹಾಸ ಮೂಡುವುದು. ಮುಂದೆ ಕಂಪನಿ ಉಳಿದರಲ್ಲವೆ ಇವೆಲ್ಲ ಎಂಬ ಮಧುರ ಕಲ್ಪನೆಯೋ ಅವರ ಆ ನಗೆಗೆ ಪ್ರೇರಕವಾಗಿರುತ್ತಿತ್ತು.

ಇಂಥ ಯಾವ ವಿಚಾರಗಳೂ ದತ್ತಮೂರ್ತಿಗಾಗಲಿ ಶ್ರೇಯಾಂಸನಿಗಾಗಲಿ ಇರಲಿಲ್ಲ. ಆದರೂ ತಮ್ಮ ನಾಟಕ ಶಕ್ಯವಿದ್ದಷ್ಟು ಬೇಗನೆ ರಂಗಭೂಮಿಯ ಮೇಲೆ ಬರಲೆಂದು ತುಂಬ ಯತ್ನಿಸುತ್ತಿದ್ದರು. ಅದಕ್ಕಾಗಿ 'ವಿಜಯ ಸಾಮ್ರಾಜ್ಯ' ನಾಟಕದ ದೃಶ್ಯಗಳಿಗೆ ಅನುಕೂಲವಾಗುವಂತೆ ಹಂಪೆಯ ವಿರುಪಾಕ್ಷ ದೇವರಗುಡಿ, ಮಾಲ್ಯವಂತ ಪರ್ವತ, ವಿದ್ಯಾರಣ್ಯರು ತಪಸ್ಸು ಮಾಡುತ್ತ ಕುಳಿತ ಮೂರ್ತಿ, ಕರ್ನಾಟಕ

ಮಾತೆ ಇತ್ಯಾದಿ ಸಲಕರಣೆಗಳನ್ನು ರಟ್ಟಿನಿಂದ ತನ್ನ ಮನೆಯಲ್ಲಿಯೇ ವಸ್ತ್ರಪೂರ್ತಿ ರಚಿಸುತ್ತಿದ್ದ. ತಾನು ಕಲಿತ ಚಿತ್ರಕಲೆಯೆಲ್ಲವನ್ನೂ ಅವರಲ್ಲಿ ಪ್ರದರ್ಶಿಸಲು ಹೊರಗಿದ್ದ. ಈ ಸಂಗತಿಯನ್ನು ತನ್ನೊಬ್ಬನ ವಿನಹ ಯಾರಿಗೂ ತಿಳಿಯಗೊಟ್ಟಿರಲಿಲ್ಲ. ನಾಟಕದ ದಿನವೇ ಎಲ್ಲರಿಗೂ ತೋರಿಸಿ ಬೆರಗುಗೊಳಿಸುವದೆಂದು ಆತ ಯೋಚಿಸಿದ್ದ. ಹಲವು ಸಲ ಶ್ರೇಯಾಂಸನಿಗಷ್ಟು ಹೇಳಿ ಸಂತಸಗೊಳಿಸಬೇಕೆಂದು ಮನಸ್ಸಿನಲ್ಲಿ ಬಂದರೂ ತುಂಬ ಪ್ರಯತ್ನದಿಂದ ತಡೆದುಕೊಂಡಿದ್ದನು.

ಎರಡು ಕಡೆಯೂ ನಾಟಕದ ತಾಲೀಮುಗಳು ಹಗಲು ಹುರುಪಿನಿಂದ ಸಾಗಿದ್ದುವು. ರಾತ್ರಿ ನಿತ್ಯದಂತೆ ನಾಟಕಗಳೂ ಇರುತ್ತಿದ್ದುವು. ಹೀಗಾಗಿ ಕಂಪನಿಯ ಜನವೆಲ್ಲ ಸೋತು ಹೋಗಿದ್ದರು. ಆದರೆ ಊರಲ್ಲಿ ಎಲ್ಲಿ ಹೋದರೂ ನಾಟಕದ ಮಾತೇ ಮಾತು. ಕಂಪನಿಯ ಕಲೆಯೇ ಕಲೆ ಕಂಪನಿಯ ಮಾಲಕನಿಗೂ ಗೊತ್ತಿಲ್ಲದ ಅನೇಕ ವಿಷಯಗಳು ಊರೊಳಗಿನ ಜನರಿಗೆ ಗೊತ್ತಿರುತ್ತಿದ್ದುವು. ಅದರಿಂದ ಊರ ಜನರೆಲ್ಲ ಇದೆಲ್ಲವನ್ನೂ ಒಳ್ಳೇ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು.... ಪ್ರವಾಹದ ಸೆಳವಿಗೆ ಸಿಕ್ಕು ಭರದಿಂದ ಸಾಗುತ್ತಿರುವ ದೋಣಿಯು ಯಾವ ಕ್ಷಣದಲ್ಲಿ ಎಂಥ ಬಂಡೆಗಲ್ಲಿಗೆ ಅಪ್ಪಳಿಸಿ ಒಡೆಯುವುದೋ ನಿಯಮವಿರುವದಿಲ್ಲ. ಇದೇ ಭಾವದಿಂದ ನಾಟಕ ಕಂಪನಿಯ ಸುತ್ತಲೂ ಸೇರಿದ ಜನರ ಗುಂಪನ್ನು ನಾಗರಿಕರು ನೋಡುತ್ತಿದ್ದರು. ಅನೇಕರಿಗೆ ಅದರಲ್ಲಿ ಆಸಕ್ತಿಯೂ ಇತ್ತು. ಪೇಟೆಯಲ್ಲಿ ಅಂಗಡಿಯ ಕಟ್ಟೆಗಳ ಮೇಲೆ ಕುಳಿತು ಹಲವು ಜನ ಮುದುಕರೂ ಕೂಡ ಹೀಗೆ ಮಾತನಾಡುತ್ತಿದ್ದರು.

"ಹೆಣ್ಣು ಇದ್ದಲ್ಲಿ ಇದು ಇರೋದೇ...."

"ಅಂಥಾ ಇಂಥಾ ಹೆಣ್ಣು ಅಲ್ಲ. ಮತ್ತ....!"

"ಏನೇ ಆಗಲಿ ಒಳ್ಳೇ ಚೀಜ ತಂದಾನ ನೋಡೋ ಕಂಪನಿಯವ...."

"ಅಂತೇ ನಾಲ್ಕು ದುಡ್ಡು ಆಗತಾವ...."

"ಇನ್ನು ಮಾಡಿಕೊಳ್ಳಲಿಲ್ಲ...."

"ಆಕೇನು ಇರತಾಳ ಇವನ ಹತ್ತಿರ! ಎಲ್ಲಿಯೋ ತಪ್ಪಿ ಬಂದಾಳು....ಶ್ರೀಮಂತರ ಮಗ್ಗಲೊಳಗಿರುವ ಹೆಣ್ಣು.....ಈ ನಾಟಕ ಕಂಪನಿಯವರಿಗೆ ದಕ್ಕೀತ....?"

"ಇರಲೀ, ಇರುವ ತನಕಾದರೂ ಸುಖಾ ಭೋಗಸ್ತಾನ ಇಲ್ಲೋ?"

"ಅದಕ್ಕs ನಿಂತಾನಲ್ಲೋ.... ಅವ.... ಮನೆಯೊಳಗೆ ಹೇಗೋ ಆದೀತು. ನಾಟಕದೊಳಗೂ ಆಕೆ ಸೀತಾ ಆದರೆ ಇವ ರಾಮ, ಆತ ಶಿವ ಅದರೆ ಇವಳು ಪಾರ್ವತಿ ಇದ್ದೇ ಇದ್ದಾರ ಜೋಡಿ...."

"ನಾಟಕದೊಳಗೆ ನೋಡಬೇಕು ಆಕೆಯ ಚೆಲುವಿಕೆಯನ್ನ. ರತಿ ನಾಚಿ ತಲೆ ತಗ್ಗಿಸಬೇಕು ಅವಳ ಮುಂದೆ...."

"ಅಂತೇ ಈ ಗೌಡರೂ ಪಂಚರೂ ಎಲ್ಲಾ ಎದುರಿಗೆ ಹೋಗಿ ಬಾಯಿ ತೆರೆದು ಕೂಡತಾವಲ್ಲ .... ಬಾಯೊಳಗ ನೊಣ ಹೋದರೂ ಎಚ್ಚರಿರುವದಿಲ್ಲ....ಇವಕ್ಕ....!"

"ಹೀಗೆ ಹೇಳುವವ ನೀ ಯಾಕೆ ಹೋಗಿದ್ದೆಯಪ್ಪ ಮೊನ್ನೆ....?"

ಈ ರೀತಿ ಇನ್ನೂ ಎಷ್ಟು ಹೊತ್ತು ಮೀನಾಕ್ಷಿಯ ಸೌಂದರ್ಯದ ಪುರಾಣ ಸಾಗುತ್ತಿತ್ತೋ ಯಾರಿಗೆ ಗೊತ್ತು? ಆದರೆ ನಡುವೆಯೇ ನಾಟಕದ ಆಳು ಬಂದು, ತುತೂರಿಯಲ್ಲಿ ಒದರಿ ಏನೋ ಹೇಳಹತ್ತಿದ. ಎಲ್ಲರ ಲಕ್ಷ್ಯ ಅತ್ತ ಹರಿಯಿತು.

ಮರುದಿನವೇ ಶ್ರೇಯಾಂಸ ಬರೆದ 'ವಿಜಯ ಸಾಮ್ರಾಜ್ಯ' ನಾಟಕದ ಪ್ರಯೋಗವೆಂಬ ಪ್ರಕಟನೆಯನ್ನು ಕೇಳಿ ಹಲವರ ಕುತೂಹಲ ಕೆರಳಿತು. ಅನೇಕರಿಗಂತೂ ನದಿಯಲ್ಲಿ ಬಂಡೆಗಲ್ಲೊಂದು ತೇಲಿ ಬಂದುದನ್ನು ಕಂಡರೆ ಆಗುವಷ್ಟು ಆಶ್ಚರ್ಯವಾಯಿತು. ಊರ ಪ್ರಮುಖರೆಲ್ಲ ನೀರಲಕಟ್ಟಿ ಮಾಸ್ತರರ ನಾಟಕವನ್ನು ನೋಡಲು

ಆತುರಗೊಂಡು ಕುಳಿತಿದ್ದರು. ಮಾಸ್ತರರ ರಸಿಕತೆ ಪಾಂಡಿತ್ಯಗಳ ಪರಿಚಯ ಅವರಿಗೆ ಚೆನ್ನಾಗಿ ಇತ್ತು. ಅಂಥದು ಹೋಗಿ ಈ ಹುಡುಗನ ನಾಟಕವೆಂದರೆ ಅವರ ಮನಸ್ಸಿಗೆ ಹೇಗೆ ಹೇಗೋ ಅನ್ನಿಸಹತ್ತಿತು.

ಹೊರಗಿನ ಜನರಿಗೇ ಹೀಗೆ ಅನ್ನಿಸಿದ ಮೇಲೆ ಸೀರಲಕಟ್ಟಿ ಯವರಿಗೆ ಎಷ್ಟು ಕೆಡಕೆನಿಸಿರಬೇಡ! ನಾಟಕದ ಮಾಲಕರಿಗೆ ಹೇಳಿ ಕೆಲವು ದಿನ ಶ್ರೇಯಾಂಸನ ನಾಟಕವನ್ನು ಮುಂದೂಡಲು ಯತ್ನಿಸಿ ದರು. ಆದರೆ ಅದು ಸಫಲವಾಗಲಿಲ್ಲ. ಆಮೇಲೆ ಮೀನಾಕ್ಷಿಗೂ ಶರಣುಹೋದರು. ಅವಳೇನೋ ಪ್ರಯತ್ನಿಸುತ್ತೇನೆ ಎಂದು ವಚನ ವಿತ್ತಿದ್ದಳು. ಆದರೂ ಪ್ರಕಟಣೆಯಂತೂ ಹೊರಟೇಬಿಟ್ಟಿತು. ನಾಳಿನ ಹೊಸ ನಾಟಕದ ತಯಾರಿಗಾಗಿ ಕಂಪನಿ ಜನರಿಗೆ ಒಂದು ದಿನ ಬಿಡುವನ್ನೂ ಕೊಟ್ಟಿದ್ದರು. ಅಲ್ಲದೆ ರಂಗಭೂಮಿಯ ಸಿದ್ಧತೆಯೂ ಭರದಿಂದಲೇ ಸಾಗುತ್ತಿದ್ದಿತು. ದತ್ತಮೂರ್ತಿಯು ತನ್ನ ಚಿತ್ರಗಳನ್ನೆಲ್ಲ ತಂದು ಈಗಾಗಲೇ ಹೊಂದಿಸುತ್ತಿದ್ದ. ಅದನ್ನು ಕಂಡಂತೂ ಕಂಪನಿಯ ಮಾಲಕರು ಆನಂದಸಾಗರದಲ್ಲಿ ಮುಳುಗಿದ್ದರು. ಅಷ್ಟೇ ನಾಟ್ಯಾನಂದರ ಮುಖ ನಿರಾಶೆಯಲ್ಲಿ ಮುಳುಗಿತು. ಇದನ್ನು ಕಂಡು ಕಂಪನಿಯ ಮಾಲಕರೇ ಸೀರಲಕಟ್ಟಿಯವರಿಗೆ ಸಮಾಧಾನ ಹೇಳಿದರು.... ಹಿರಿಯ ಋಣಾನುಬಂಧವೆಂದುಕೊಂಡು,

"ನಿಮ್ಮ ನಾಟಕವೇ ಮೊದಲು ಆಗಿದ್ದರೆ ಚೆನ್ನಾಗಿತ್ತು!"

"ಇನ್ನೊಂದು ವಾರ ತಡೆಯಿರಿ ಅಂದರೆ ತಡೆಯಲಿಲ್ಲವಲ್ಲ ನೀವು....!"

ಸ್ವಲ್ಪ ಬಿಗುವಿನಿಂದಲೇ ಸೀರಲಕಟ್ಟಿ ನುಡಿದ.

"ಒಂದು ವಾರವೇಕೆ, ಎರಡು ವಾರಗಳಷ್ಟೂ ಮುಂದೂಡಬಹು ದಾಗಿತ್ತು. ಆದರೆ ನಿಮ್ಮ ನಾಟಕದ ತಯಾರಿಯೇ ಇಲ್ಲವಲ್ಲ.... ಇನ್ನೂ ನೀವು ಬರೆದು ಮುಗಿಸಿಲ್ಲ ನಾಟಕವನ್ನು....!"

ಕಂಪನಿಯ ಮಾಲಕರ ಮಾತು ನಿಜವಾಗಿಯೇ ಇತ್ತು. ಆರಂಭ

ದಲ್ಲೇನೋ ನೀರಲಕಟ್ಟಿ ಮಾಸ್ತರರು ನಾಟಕದ ಒಂದಂಕವನ್ನು ಬರೆದು, ಪಾತ್ರಗಳಿಗೆ ಬರೆದುಕೊಳ್ಳಲಿಕ್ಕೆ ಕೊಟ್ಟರು. ಅದರ ಅಭ್ಯಾಸ ಸಾಗುವಷ್ಟರಲ್ಲಿ ಮುಂದಿನ ಅಂಕಗಳನ್ನು ಬರೆದುಕೊಡುತ್ತ ಹೋಗುವದೆಂದು ನಿಶ್ಚಯಿಸಿದ್ದರು. ಆದರೆ ಮುಂದೆ ಲೆಕ್ಕಣಿಕೆಯೇ ಸಾಗದಾಯಿತು. ಹಲವು ರಾತ್ರಿಗಳನ್ನು ನಿದ್ದೆಯಿಲ್ಲದೆ ಕಳೆದರು. ಅದೂ ಉಪಯೋಗವಾಗಲಿಲ್ಲ. ನೂರಾರು ಹಾಳೆಗಳನ್ನು ಬರೆದು ಬರೆದು ಹರಿದುಹಾಕಿದರು. ಆದರೆ ಒಂದು ದೃಶ್ಯವನ್ನೇನೂ ಚಿತ್ರಿಸಲಿಕ್ಕೆ ಆಗಲಿಲ್ಲ. ಕೊನೆಗೆ ಆ ನಾಟಕವನ್ನೇ ಬಿಟ್ಟು ಇನ್ನೊಂದು ನಾಟಕವನ್ನು ಅಭ್ಯಾಸಕ್ಕೆ ತಕ್ಕೊಳ್ಳಬೇಕೆಂದೂ ಯೋಚಿಸಿದರು. ಆದರೆ ಅವರಲ್ಲಿರುವ ನಾಟಕದ ಹಸ್ತಪ್ರತಿಗಳೆಲ್ಲ ಆತ್ಮಾರಾಮರು ಬರೆದಂಥವುಗಳಾಗಿದ್ದುವು. ಅವೆಲ್ಲವುಗಳನ್ನೂ ಶ್ರೇಯಾಂಸ ಓದಿದ್ದ ಬೇರೆ ಅದರಿಂದ ಅವುಗಳನ್ನು ಇಲ್ಲಿ ಆಡಿಸುವಂತಿರಲಿಲ್ಲ. ಗರುಡ ಸದಾಶಿವರಾಯರ ನಾಟಕವನ್ನಾಗಲಿ, ಕಂದಗಲ್ಲ ಹನುಮಂತರ ನಾಟಕವನ್ನಾಗಲಿ ತರಿಸಿ ಆಡುವದೆಂದರೆ ತನ್ನ ಮರ್ಯಾದೆಗೇ ಕುಂದು. ಹೀಗಾಗಿ ಅವರ ನಾಟಕದ ಪ್ರಯೋಗ ಮುಂದೆ ಬೀಳುತ್ತ ಬಂತು. ಇದಕ್ಕೆ ಕಂಪನಿಯ ಮಾಲಕರೇನು ಮಾಡಬೇಕು ಪಾಪ! ಇಂಥ ಹಿರಿಯ ಹುದ್ದರಿಯನ್ನು ನೋಯಿಸಿ ಹುಡುಗರ ಬೆನ್ನು ಹತ್ತಲಿಕ್ಕೆ ಅವರಿಗೂ ಮನಸ್ಸಿರಲಿಲ್ಲ. ಆದರೂ ಉಪಾಯವಿರಲಿಲ್ಲ.

ಹುಡುಗರೇ ಆದರೇನಾಯಿತು ? ಈಗಾಗಲೇ ಊರಲ್ಲಿ ನೂರಾರು ರೂಪಾಯಿಗಳ ತಿಕೀಟು ಮಾರಿದ್ದರು. ಸುತ್ತಲಿನ ಹಳ್ಳಿಗಳಿಗೂ ಹೋಗಿ ತಿಕೀಟು ಕೊಟ್ಟು ಬಂದಿದ್ದರು. ವೆಚ್ಚ ಕಳೆದ ಮೇಲೆ ಆ ದುಡ್ಡೆಲ್ಲ ಕಂಪನಿಗೇ ಸಲ್ಲುವದಾಗಿತ್ತು. ಮೇಲಾಗಿ ನಾಟಕದ ಉದ್ಘಾಟನಕ್ಕೆ ಬೆಳಗಾಂವಿಯ ಪ್ರಸಿದ್ಧ ವಕೀಲರಾದ ಕೃಷ್ಣರಾಯರನ್ನು ಆಮಂತ್ರಿಸಿದ್ದರು. ಅದೇ ರಂಗಭೂಮಿಯ ಮೇಲೆ ನಾಟಕಕಾರನಾದ ಶ್ರೇಯಾಂಸನ ಪರಿಚಯವನ್ನು ನೇವಾನಿವೃತ್ತ ಮುಖ್ಯಾಧ್ಯಾಪಕರಾದ ಆತ್ಮಾರಾಮರು

ಮಾಡಿಕೊಡುವವರಿದ್ದರು. ಇವೆಲ್ಲ ಸೇರಿ ನಾಟಕ ಕಂಪನಿಗೇ ಒಂದು ಹೊಸ ದೃಷ್ಟಿ ಉದಯಿಸಿದಂತಾಗಿತ್ತು. ಎಲ್ಲೆಲ್ಲೂ ಉತ್ಸಾಹದ ಉಕ್ಕು! ವಿಜಯದ ಸಾಮ್ರಾಜ್ಯ....!

ಆದರೆ ನಾಟ್ಯಾನಂದ ನೀರಲಕಟ್ಟಿಯವರಿಗೆ ಮಾತ್ರ ಸಮಾಧಾನ ವಿಲ್ಲ....!

ನಾಟಕದ ಮುನ್ನಾದಿನ ಇರುಳೆಲ್ಲ ಶ್ರೇಯಾಂಸ, ದತ್ತಮೂರ್ತಿ, ಕಂಪನಿಯ ಮಾಲಕರು ಮೂವರೂ ಸೇರಿ ನಾಟ್ಯಗೃಹವನ್ನೆಲ್ಲ ಮೊದಲು ಸಜ್ಜುಗೊಳಿಸಿದರು. ಆಮೇಲೆ ಮರುದಿನದ ಕಾರ್ಯಕ್ರಮ ವನ್ನೆಲ್ಲ ಚರ್ಚಿಸಿ ನಿರ್ಧರಿಸಿದರು. ಮುಂದಿನ ಹಲವು ಹಂಚಿಕೆಗಳನ್ನು ಹಾಕಿದರು. ತಮ್ಮ ತಮ್ಮ ಭಾಷಣಗಳ ಸಿದ್ಧತೆಯನ್ನು ಮಾಡಿ ಕೊಂಡರು. ಇಷ್ಟಾಗುವುದರಲ್ಲಿ ಬೆಳಗಿನ ಕೋಳಿಯೇ ಕೂಗಿತು. ಇನ್ನೇನು ಮಲಗುವದೆಂದು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಶ್ರೇಯಾಂಸನು ಇನ್ನೊಂದು ಕೆಲಸ ಮಾಡುವದುಳಿದಿತ್ತು. ಅಕ್ಕಾಸಾನಿಯ ಮನೆತನಕ ಹೋಗಿ ಅವಳಿಗೂ ಲಲಿತೆಗೂ ನಾಟಕಕ್ಕೆ ಬರಲು ಆಮಂತ್ರಣಕೊಟ್ಟು ಬರಬೇಕಾಗಿತ್ತು. ಚಂಪೂರ ಗೌಡರಿ ಗಂತೂ ಔತಣ ಈ ಮೊದಲೇ ಹೋಗಿತ್ತು.

ಶ್ರೇಯಾಂಸ ಮನೆಗೆ ಹೋಗಿ ಸ್ನಾನಕ್ಕೆ ನೀರು ಕಾಯುವವರೆಗೆ ಅಡ್ಡಾಗಬೇಕೆಂದು ಹಾಸಿಗೆಗೆ ಮೈ ಹಚ್ಚಿದವ ತಿರುಗಿ ಹತ್ತು ಗಂಟೆಗೇನೇ ಎದ್ದ. ದಣಿದ ದೇಹ ಮನಸ್ಸುಗಳೆರಡಕ್ಕೂ ವಿಶ್ರಾಂತಿ ಬೇಕಾಗಿತ್ತು. ನಾಟಕದ ಪೂರ್ವಸಿದ್ಧತೆಯೆಲ್ಲ ಮುಗಿದಿದೆಯೆಂಬ ಸಮಾಧಾನವು ನಿಶ್ಚಿಂತೆಯ ನಿದ್ರೆಯನ್ನು ಅವನಿಗೆ ಒದಗಿಸಿದ್ದಿತು. ಕನಸೇ ನನಸಾಗಿ ಮುಂದೆ ನಿಂತಾಗ ಸಧ್ಯ ತನಗೆ ಅವಕಾಶವೆಲ್ಲಿ?

ಸುಖ ನಿದ್ರೆಯಿಂದ ಎಚ್ಚತ್ತು ಹೊರಗೆ ನೋಡಿದಾಗ ಬಿಸಿಲು ತುಂಬ ಏರಿತ್ತು. ಶ್ರೇಯಾಂಸ ಅವಸರದಿಂದ ಎದ್ದು ಸ್ನಾನ ತೀರಿಸಿ ಕೊಂಡು ಹೊಟ್ಟೆಗೆ ನಾಲ್ಕು ತುತ್ತು ಹಾಕಿ ಹೊರಬಿದ್ದ. ಇನ್ನು ಥೇಟರಿ

ನಲ್ಲಿ ಹೋಗಿ ಸಿಕ್ಕು ಬಿದ್ದರೆ ಲಲಿತೆಯ ಭೆಟ್ಟಿ ಹಾಗೇ ಉಳಿಯುವದೆಂದು ಭಾವಿಸಿ ಮೊದಲು ಅವಳ ಮನೆಯ ಕಡೆಗೇನೇ ತೆರಳಿದ....ನಡಿಗೆಯಲ್ಲಿ ಉತ್ಸಾಹವಿತ್ತು, ಮುಖದಲ್ಲಿ ಸಂತಸವಿತ್ತು. ಕುಣಿಯುವ ಕಂಠದಿಂದಲೇ ಕರೆದ ಶ್ರೇಯಾಂಸ,

"ಲಲಿತಾ!"

"ಓ! ಬನ್ನಿ! ಇಂದು ನನ್ನ ನೆನಪಾಯಿತೇ?"

"ಚಂದೂರ ಗೌಡರು ಬಂದಿರುವರೇನು?"

"ಅವರೇಕೆ ಈಗ ಬರಬೇಕು?"

"ಮೊನ್ನೆಯೇ ನಮ್ಮ ಕಂಪನಿಯಿಂದ ಔತಣ ಹೋಗಿದೆಯಲ್ಲ ಅವರಿಗೆ...."

ನಕ್ಕು ನುಡಿದ ಶ್ರೇಯಾಂಸ.

"ತಮ್ಮ ಔತಣ ಹೌದು....? ಇನ್ನೂ ಸಾಯಂಕಾಲದವರೆಗೂ ಬಂದಾರು...."

"ಆಯಿತು; ನೀನೂ ನಿನ್ನ ತಾಯಿಯೂ ನಾಟಕಕ್ಕೆ ಬರಬೇಕು. ಅದನ್ನು ಹೇಳಲಿಕ್ಕೆಂದೇ ಬಂದಿರುವೆ...."

"ಒಳಗೆಯಾದರೂ ಬನ್ನಿರಲ್ಲ! ಏನು ಅಲ್ಲಿಯೇ ಬಾಗಿಲಲ್ಲಿ ನಿಂತೇ ಹೇಳಿ ಮುಗಿಸುವ ಪ್ರತಿಜ್ಞೆ ಮಾಡಿರುವಿರೋ?"

"ಹಾಗೇನಿಲ್ಲ....ಆದರೆ ಬೇಗನೇ ಥೇಟರದ ಕಡೆಗೆ ಹೋಗಬೇಕು ನಾನು. ಎಷ್ಟಾದರೂ ಅದು ಕಂಪನಿಯ ಜನ. ಒಂದು ಶಿಸ್ತು ಅಂಬುವುದೇ ಇಲ್ಲ ಅವರಲ್ಲಿ. ನಾಟ್ಯಕಲೆಯ ಗಂಧವೂ ಕೂಡ ಇಲ್ಲ. ಅದರಿಂದ ಇನ್ನೊಮ್ಮೆ ರಿಹರ್ಸಲ್ ತಕ್ಕೊಳ್ಳಬೇಕೆಂದಿರುವೆ...."

"ಅದಂತೂ ಇದ್ದೇ ಇದೆಯಲ್ಲ....!" ದನಿಯನ್ನು ಬದಲಿಸಿ "ನನಗೆಷ್ಟು ರೂಪಾಯಿಯ ತಿಕೀಟು ಹಾಕಿರುವಿರಿ?" ಎಂದು ಕೇಳಿದಳು ಲಲಿತೆ.

"ನಿನಗೆ?"

"ಅಹುದು ನನಗಷ್ಟೇ ಹೇಳಿ. ಇನ್ನೊಬ್ಬರ ಉಸಾಬರಿ ನನಗೇತಕ್ಕೆ ಬೇಕು ?

"ಸಾವಿರ ರೂಪಾಯಿಯ ತಿಕೀಟು ಹಾಕಬೇಕೆಂದಿರುವೆ. ಕೊಡಬಲ್ಲೆಯಾ ?"

"ಆ ದುಡ್ಡು ನಿಮಗೋ ಕಂಪನಿಯವರಿಗೋ ಮೊದಲು ವಿಚಾರಿಸಿರಿ....!"

"ಯಾರಿಗೆ ಹೋದರೇನಾಯಿತು" ಕಲೆಯನ್ನು ಪ್ರಕಟಗೊಳಿಸುವವರು ಅವರೇ ಅಲ್ಲವೆ? ನಟರು ಅಭಿನಯಿಸದಿದ್ದರೆ ನಾಟಕ ಜನರಿಗೆ ಮುಟ್ಟುವದಾದರೂ ಹೇಗೆ? ಅದಕ್ಕಾಗಿ ದುಡ್ಡು ಅವರಿಗೆ ಸಂದರೂ ತಪ್ಪೇನಿದರಲ್ಲಿ....?"

"ತಪ್ಪೇನಿಲ್ಲ....ಸಹಜ ಕೇಳಿದೆ...."

"ಆಯಿತು, ಮಾತಿಗೆ ಮಾತು....ಸಾಯಂಕಾಲಕ್ಕೆ ನಾಟಕಕ್ಕೆ ಬರ್ರಿ ಅಂದರಾಯಿತು...."

"ಎಲ್ಲಿ ಪಾಸು ತಂದಿಲ್ಲವಲ್ಲ ?"

"ನಾನೇ ಇದ್ದೇನಲ್ಲ....ಮೂರುವರೆ ಮೊಳದ ಪಾಸು...."

"ನೋಡಿಂ ಮತ್ತ! ಥೇಟರಿನೊಳಗೆ ಹೋಗಿ ಕುಳಿತರೆ ಇತ್ತಿನವರ ಲಕ್ಷ್ಯ ಉಳಿಯಲಿಕ್ಕಿಲ್ಲ...."

"ಸಾಕು ಸುಮ್ಮನಿರು ಇನ್ನು....!"

ತುಸು ತಡೆದು ಶ್ರೇಯಾಂಸ ಅತ್ತಿತ್ತ ನೋಡಿ, ಅಕ್ಕಾಸಾನಿಯ ಸುಳುವು ಇಲ್ಲದುದಕ್ಕೆ ಕೇಳಿದ,

"ನಿಮ್ಮ ತಾಯಿ ಎಲ್ಲಿ ಕಾಣುವದಿಲ್ಲ ?"

"ನಿನ್ನೆ ರಾತ್ರಿ ಜಿನಗೌಡರು ಹನ್ನೆರಡು ಗಂಟೆಗೆ ಬಂದು ಎಬ್ಬಿಸಿ ಕೊಂಡು ಹೋದರು.... ಇನ್ನೂ ಮನೆಗೇ ಬಂದಿಲ್ಲ ಅವಳು.... ಎಲ್ಲಿ ಯಾದರೂ ಪರ ಊರಿಗೆ ಹೋಗಿರಬೇಕು...."

"ನಿನಗೆ ಹೇಳದೇ ?"

"ನನಗೇನು ಹೇಳುವದು? ಅಗತ್ಯದ ಕೆಲಸವಿದ್ದಮೇಲೆ ಹೋಗಿರಬೇಕು.... ನಾನು ಹಿಂದಕ್ಕೆ ಮಿರಜಿಗೆ ಬರುವಾಗ ಅವಳಿಗೇನು ಹೇಳಿ ಬಂದಿದ್ದೆನೇ ?"

"ಒಳ್ಳೇ ಇದೆಯಲ್ಲ ತಾಯಿ ಮಗಳಿಗೆ ಸಂಬಂಧ!"

"ಇರುವುದು ಹೀಗೇ...."

ವಿಷಾದದ ನಗೆಯೊಂದನ್ನು ಬೀರಿ ಸುಮ್ಮನಾದಳು ಲಲಿತೆ. ಶ್ರೇಯಾಂಸ ಎದ್ದು ಹೊರಟ. ತಲೆಬಾಗಿಲವರೆಗೂ ಲಲಿತೆ ಕಳಿಸಲಿಕ್ಕೆ ನಡೆದಳು. ಬಂಕದಲ್ಲಿ ತೂಗುಹಾಕಿದ ಪಂಜರದೊಳಗಿನ ಗಿಳಿಯು 'ಹೋಗಿ ಬನ್ನಿ ದೊರೆಗಳೆ ಹೋಗಿ ಬನ್ನಿ!' ಎಂದು ನುಡಿಯುತ್ತಿತ್ತು. ಗಿಳಿಯ ಕಡೆಗೊಮ್ಮೆ ಲಲಿತೆಯ ಕಡೆಗೊಮ್ಮೆ ನೋಡಿ, ಬಿಸಿಯುಸಿರೊಂದನ್ನು ಹೊರಸೂಸಿ ಮುನ್ನಡೆದ ಶ್ರೇಯಾಂಸ....

"ಜಗತ್ತು ಹೊರಗೆ ಕಂಡಂತೆ ಒಳಗೆ ಇರುವದಿಲ್ಲ ಶ್ರೇಯಾಂಸ...."

ಎಂದಳು ಲಲಿತೆ, ತಗ್ಗಿದ ಸ್ವರದಲ್ಲಿ.

"ಒಳಗಿನದನ್ನು ಕಾಣಲು ಹೃದಯದ ಒಳಗಣ್ಣು ಬೇಕು.... ಲಲಿತಾ!"

"ಅದು ಕಲಾಜೀವಿಗೆ ಹುಟ್ಟಾ ಇರುತ್ತದಲ್ಲವೇ ಶ್ರೇಯಾಂಸ..?"

"ಇರುವದಾದರೂ ಅದು ಸದಾ ತೆರೆದಿರಬೇಕು, ನಿರ್ಮಲವಾಗಿರಬೇಕು. ಹಾಗಿರುವುದು ಎಲ್ಲರಲ್ಲೂ ಸಾಧ್ಯವಿಲ್ಲ...."

"ಅದೇಕೆ ?"

"ತಾನು ಎಲ್ಲವನ್ನೂ ಕಂಡಿರುವೆನೆಂಬ ಅಹಂಕಾರವಿರುತ್ತದೆ. ತಾನು ಕಂಡಷ್ಟೇ ಪೂರ್ಣ ಸತ್ಯವೆಂಬ ಅಜ್ಞಾನವಿರುತ್ತದೆ. ತಾನು ಕಂಡದ್ದು ಕಾಣಿಸುವುದು ಅಖಂಡ ಸತ್ಯದ ಒಂದು ಅಂಶ ಮಾತ್ರವೆಂಬ ಅರಿವು ಎಲ್ಲಿಯವರೆಗೆ ಕಲಾವಿದನಿಗೆ ಆಗುವದಿಲ್ಲವೋ ಅಲ್ಲಿಯವರೆಗೆ ಅವನು ಚಿತ್ರಿಸಿದ್ದು ನಿಜವಾದ ಕಲೆಯಾಗಿರದು. ಕಲೆಯ ಆಭಾಸ ಮಾತ್ರ ಆಗಿರುವುದು. ಅದನ್ನೇ ಕಲೆಯೆಂದು ಲೋಕ ಭ್ರಮಿಸುವುದು.

ಅದರಿಂದ ಜನತೆ ಕಲೆಯಿಂದ ಪಡೆಯಬೇಕಾದುದನ್ನು ಪಡೆಯುವದಿಲ್ಲ, ಜನತೆಯು ವಂಚನೆಯಾಗುತ್ತದೆ."

"ಹಾಗೇ ಆಯಿತೆಂದು...."

ಶ್ರೇಯಾಂಸನನ್ನು ಹುಡುಕುತ್ತ ಬಂದ ದತ್ತಮೂರ್ತಿಯು ನಿರಾಶೆಯ ಸ್ವರದಲ್ಲಿ ನುಡಿದ.

ದತ್ತಮೂರ್ತಿಯ ಆಕಸ್ಮಿಕ ಬರವನ್ನು ಕಂಡು, ಲಲಿತೆ ತುಸು ಗೊಂದಲದಲ್ಲಿ ಬಿದ್ದಂತಾದಳು. ಸ್ವಲ್ಪ ಹಿಂದೂ ಸರಿದಳು. ಶ್ರೇಯಾಂಸನೂ ಚಮಕಿತನಾಗಿ ಕೇಳಿದ—

"ಯಾವ ಕಡೆಯಿಂದ ಬಂದೆ ದತ್ತ ? ನನಗೆ ಮುಂಜಾನೆ ತುಂಬ ನಿದ್ರೆ ಹತ್ತಿಬಿಟ್ಟಿತು. ಈಗ ಎದ್ದು ಇತ್ತ ಬಂದಿರುವೆ ನೋಡು....! ಇನ್ನೇನು ಥೇಟರದ ಕಡೆಗೇ ಹೋಗುವದಲ್ಲವೇ ? ವಕೀಲರು ಬಂದರೇನು ?"

"ಇನ್ನೇನು ಇದೆ ಥೇಟರದಲ್ಲಿ ನಮ್ಮ ಕೆಲಸ ?"

ಕಳೆಗುಂದಿದ ಮುಖದಿಂದ ಜಗ್ಗಿದ ಸ್ವರದಲ್ಲಿ ದತ್ತಮೂರ್ತಿ ಕೇಳಿದ. ಸೋಲಿನ ಮ್ಲಾನತೆಯಿಂದ ಅವನ ತುಟಿ ಕಣ್ಣುಗಳೆಲ್ಲ ಒಣಗಿದ ಕಿತ್ತಳೆಯ ಹಣ್ಣಿನ ಹೋಳುಗಳಂತಾಗಿದ್ದುವು....

ಡವ ಡವ ಹೊಡೆದುಕೊಳ್ಳುತ್ತಿರುವ ಹೃದಯವನ್ನು ತಡೆಹಿಡಿದು ಶ್ರೇಯಾಂಸ ಕೇಳಿದ,—

"ಏನಾಯಿತೀಗ ?"

"ಒಳಗೆ ನಡೆಯಿರಿ; ಎಲ್ಲ ಹೇಳುವೆ...."

ಮೂವರೂ ಭಾರವಾದ ಹೆಜ್ಜೆಗಳಿಂದ ತಿರುಗಿ ಲಲಿತೆಯ ಮನೆಯನ್ನು ಹೊಕ್ಕರು !

ಒಳಗೆ ಹೋಗ ಹೋಗುತ್ತಲೇ ದತ್ತಮೂರ್ತಿಯು ಬಂಕದಲ್ಲಿಯೇ ಕುಕ್ಕರಿಸಿದ.

"ಹೀಗೇಕೆ ದತ್ತಮೂರ್ತಿ, ಏನಾಯಿತು ?"

ಶ್ರೇಯಾಂಸ ಗಾಬರಿಯಿಂದ ಅವನನ್ನು ಹಿಡಿದು, ಎತ್ತಿ ಕುಳ್ಳಿರಿಸುತ್ತ ಕೇಳಿದ. ಲಲಿತೆ ಸೆರಗಿನಿಂದ ಗಾಳಿಯನ್ನು ಹಾಕ ತೊಡಗಿದಳು.

"ನೀ....ರು !" ಎಂದ ದತ್ತಮೂರ್ತಿ. ಒಣಗಿದ ತುಟಿಯ ಮೇಲೆ ಆರಿದ ನಾಲಿಗೆಯನ್ನು ಆಡಿಸುತ್ತ.

ಲಲಿತೆ ಓಡುತ್ತ ಹೋಗಿ....ಒಂದು ಗ್ಲಾಸಿನಲ್ಲಿ ನೀರನ್ನು ತಂದು ಅವನ ಬಾಯಿಗೆ ಹಿಡಿದಳು. ಅಷ್ಟು ನೀರನ್ನೆಲ್ಲ ಒಂದೇ ಗುಟುಕಿಗೆ ಹೀರುವಂತೆ ಕುಡಿದ ದತ್ತಮೂರ್ತಿ. ಆಮೇಲೆ ಬೆವೆತ ಹಣೆ ಮುಖ ಗಳನ್ನು ಒರಿಸಿಕೊಳ್ಳುತ್ತ ಸುತ್ತಲೂ ನೋಡಹತ್ತಿದ.

ಗೆಳೆಯನ ಭಾವವನ್ನು ಅರಿತುಕೊಂಡು ಶ್ರೇಯಾಂಸ ಹೇಳಿದ,

"ಇಲ್ಲಿ ಇನ್ನಾರೂ ಇಲ್ಲ ಹೇಳು...."

"ಮೀನಾಕ್ಷಿ ಹೋದಳು....!"

"ಎಲ್ಲಿ ?"

"ಯಾರಿಗೆ ಗೊತ್ತು ? ಕಂಪನಿಯ ಇಬ್ಬರು ಹುಡುಗರೂ ಇಲ್ಲ....!"

ಶ್ರೇಯಾಂಸ ಬೆಪ್ಪಾಗಿ ನಿಂತ. ಅವನ ಕಣ್ಣೆದುರಿಗೆ ಕತ್ತಲೆ ಕವಿದಂತಾಯಿತು. ತಲೆ ಗರ್ರನೆ ತಿರುಗಿ, ಅವನನ್ನು ಆಕಾಶದ ವರೆಗೆ ಮೇಲೆತ್ತಿ ಕೆಳಗೆ ಒಗೆದಂತಾಯಿತು. ತಲೆಯನ್ನು ಹಿಡಿದುಕೊಂಡು ನೆಲಕ್ಕೆ ಕುಳಿತ.

"ಇಷ್ಟಕ್ಕೇ ತೀರಲಿಲ್ಲ ಶ್ರೇಯಾಂಸ...." ದತ್ತಮೂರ್ತಿ ಮುಂದೆ ಹೇಳತೊಡಗಿದ. "ಮೀನಾಕ್ಷಿಯನ್ನು ಓಡಿಸಿದವರು ನಾನೂ ನೀನೂ ಸೇರಿಯೇ ಅಂತೆ. ಅದಕ್ಕೆ ನೀರಲಕಟ್ಟಿ ಮಾಸ್ತರರು ನಮಗೆ ಬೆಂಬಲಿಗರಂತೆ...."

"ಅಯ್ಯೋ ಹೀಗಾಯಿತೇ ?" ಶ್ರೇಯಾಂಸನ ಉದ್ಗಾರವಿದು.

"ಕಂಪನಿಯ ಮಾಲಕರೂ ಜಿನಗೌಡರೂ ಸೇರಿ ಪೋಲೀಸ

ಠಾಣೆಗೆ ವರದಿ ಕೊಡಲಿಕ್ಕೆ ಹೋಗಿದ್ದಾರೆ .... ಕಂಪನಿಗೆ ಹಾನಿಯನ್ನುಂಟುಮಾಡಿದ್ದಕ್ಕೆ ನಮ್ಮೆಲ್ಲರ ಮೇಲೆ ವಾರೆಂಟು ತೆಗೆಯಿಸುವರು...."

"ತೆಗೆಯಿಸಲಿ, ಅದನ್ನು ನಾನು ನೋಡಿಕೊಳ್ಳುವೆ........ ಸುಮ್ಮನಿರ್ರಿ !"

ಲಲಿತೆ ಗಂಭೀರವಾಗಿ ನುಡಿದಳು. ಅವಳ ಧ್ವನಿಯಲ್ಲಿ ನಿರ್ಭೀತಿಯಿತ್ತು.

ಶ್ರೇಯಾಂಸ ಕಣ್ಣೆತ್ತಿ ಲಲಿತೆಯ ಮುಖವನ್ನೊಮ್ಮೆ ನೋಡಿದ. ಅಲ್ಲಿ ಏನೋ ಒಂದು ರಹಸ್ಯ, ಅದನ್ನು ಭೇದಿಸಿಯೂ ನಿಂತ ನಿರ್ಧಾರ ಅವನಿಗೆ ಕಂಡವು !

೨೨

ಮಗನ ನಡತೆಯು ಅರ್ಥವೇ ಬಾಳಪ್ಪನಿಗೆ ಆಗದು. ಇಷ್ಟೇ ಅಲ್ಲ, ಶ್ರೇಯಾಂಸನ ಯಾವ ಕಾರ್ಯವೂ ಅವನಿಗೆ ಸೇರದಾಯಿತು. ಆದರೂ ಬಾಯಿಬಿಟ್ಟು ಏನೂ ಅನ್ನುವಂತೆ ಇಲ್ಲ. ಎದೆಯುದ್ದ ಬೆಳೆದು ನಿಂತ ಮಗ, ಮನೆಯಲ್ಲಿ ಸೊಸೆ ಬೇರೆ ಬಂದಿದ್ದಾಳೆ, ಇಂಥದರಲ್ಲಿ ತಾವೇ ತಂದೆ ಮಕ್ಕಳು ಬಾಯಿ ಬಡಿಯುತ್ತ ಕುಳಿತರೆ ಮರ್ಯಾದೆ ಏನು ಉಳಿದೀತು-ಎಂಬ ವಿಚಾರ ಅವನ ನಾಲಿಗೆಯನ್ನು ತಡೆದು ಹಿಡಿದಿತ್ತು. ಆವರೆ ಹೃದಯ ಮಗನಿಗಾಗಿ ಒಳಗೊಳಗೇ ಕಳವಳಗೊಳ್ಳುತ್ತಿತ್ತು. ಮಗ ಒಕ್ಕಲತನಕ್ಕೆ ಬರುವದಿಲ್ಲ ಹೋಗಲಿ, ತಿಂದುಂಡು ಎರಡು ಬಿಳಿಯ ಅರಿವೆಗಳನ್ನು ತೊಟ್ಟುಕೊಂಡು ತಿರುಗಾಡಿ ಇರಲಿ, ಆಡಿ ಉಣ್ಣುವ ಹುಡುಗರಂತೆ ಎಂದರೆ ಅದೂ ಇಲ್ಲ. ಇಲ್ಲದ ತಿಪ್ಪೆಯನ್ನು ಕೆದರಿ ತಲೆಯ ಮೇಲೆ ಹಾಕಿಕೊಳ್ಳುತ್ತಾನೆ. ಹಿಂದಕ್ಕೆ ಕೂಲಿಕಾರರ ಗುಂಪನ್ನು ಕಟ್ಟಿಕೊಂಡು ಊರೊಳಗೆ ನಾಲ್ಕು ಜನರಿಗೆ ಬೇಡವಾದನೆಂದು ಮಿರಜಿಗೆ ಒಯ್ದು ಇಟ್ಟೆವು. ಏನೋ ಹೊಲದ ಕೆಲಸ ಬೇಡ ಎನ್ನುವ. ಅದಾಗದಿದ್ದರೆ ಬಿಡಲಿ, ಎಲ್ಲಿಯಾದರೂ ಅಂಗಡಿಯ ಲೆಕ್ಕವನ್ನಾದರೂ ಬರೆದುಕೊಂಡು ಇರಲಿ, ಎಂದು ಮಾಡಿದರೆ ಅಲ್ಲಿಯೂ ವೇಳೆಗೆ ಅಂಗಡಿಗೆ ಹೋಗಲಿಲ್ಲ. ಕೆಲಸದ ಮೇಲೆ ಮನಸ್ಸಿಲ್ಲ. ಹೇಗೋ ತಿಂದು ಏನೋ ಓದಿ ಬೇನೆ ಬಿದ್ದ. ಡಾಕ್ಟರರಿಗೆ ನೂರಾರು ರೂಪಾಯಿ ವೆಚ್ಚಮಾಡಿದೆವು.... ನೂರಾರು ರೂಪಾಯಿ ಇವನ ಹೊಟ್ಟೆಯ ಖರ್ಚಾಯಿತು. ಮತ್ತೆ 'ಉಧೋ!'- ಅಂತ ಮನೆಗೆ ಬಂದ. ಈಗ ಊರಿಗೆ ಬಂದಿರುವ. ತಲೆಗೆ ತಾಗಿದೆ.

ಬುದ್ಧಿ ಬಂದೀತು ಅಂದರೆ ಮತ್ತೆ ನಾಯಿಯ ಬಾಲ ಡೊಂಕೇ. ಎಂದು ವಿಚಾರಿಸಿ ವಿಚಾರಿಸಿ ಕೊನೆಗೆ ಬಾಳಪ್ಪ ಆತ್ಮಾರಾಮರ ಮನೆಗೇನೇ ಮಗನ ವಿಷಯಕ್ಕೆ ಸಲಹೆ ಕೇಳಲಿಕ್ಕೆ ಹೋದ.

"ಏನರೀ, ನಮ್ಮ ಶ್ರೇಯಾಂಸ ಮಾಡೋದಾವದೂ ಏನು? ಇದರಿಂದ ಮುಂದೆ ಏನಾದರೂ ಉಪಯೋಗ ಆದೀತು? ಓದಲಿಕ್ಕೆ ಬರೆಯಲಿಕ್ಕೆ ಬಾರದ ನನಗೇನೂ ತಿಳಿಯುವದಿಲ್ಲ ಇದರೊಳಗೆ.... ನಿಮ್ಮನ್ನಾದರೂ ಕೇಳೋಣ ಅಂತ ಬಂದೆ...." ಬಾಗಿಲಲ್ಲಿರುವಾಗಲೇ ತಾನು ಬಂದ ಉದ್ದೇಶ ಸಾರಿದ ಬಾಳಪ್ಪ.

"ಆದೀತಲ್ಲ ಉಪಯೋಗ! ಮಾಡಿದ್ದು ಯಾವುದು ವ್ಯರ್ಥ ಹೋಗತದ?"

ಬಾಳಪ್ಪನ ಸ್ವಭಾವವನ್ನು ತಿಳಿದ ಆತ್ಮಾರಾಮರು ಸೌಮ್ಯವಾಗಿಯೇ ಉತ್ತರಿಸಿದರು.

"ಹಾಗಾದರೆ ಏನಡ್ಡಿಯಿಲ್ಲ...."

ಒತ್ತಾಯದಿಂದ ನಗೆಯನ್ನು ತಂದು ಬಾಳಪ್ಪ ನುಡಿದು, ಹಾಸುಗಂಬಳಿಯ ತುದಿಗೆ ಬಂದು ಕುಳಿತ. ಆಮೇಲೆ ಆತ್ಮಾರಾಮರು ತಮ್ಮ ವ್ಯಾಖ್ಯಾನ ಆರಂಭಿಸಿದರು :

"ಹುಡುಗ ಹುಶ್ಯಾರ ಇದ್ದಾನ, ಸುಮ್ಮನೆ ಕೂಡುವ ಜೀವ ಅಲ್ಲ, ಮುಂದೆ ಕಲಿಯಲಿಕ್ಕೆ ಕಳಿಸಿರಿ, ಒಳ್ಳೇದಾಗತದ ಅಂತ ಹೇಳಿದರೆ ನನ್ನ ಮಾತು ಕೇಳಲಿಲ್ಲ ನೀವು. ಈಗ ನಾವು ಮಾಡಿದ ಪ್ರಯತ್ನವೆಲ್ಲ ನೀರೊಳಗೆ ಹೋಮ ಮಾಡಿದಂತೆ ಆಯಿತು. ಎಲ್ಲಿಯೋ ಮಿರಜಿಯೊಳಗೆ ಅಂಗಡಿಯ ಲೆಕ್ಕ ಬರೆಯಕೊಳ್ಳಲಿಕ್ಕೆ ಇಟ್ಟಿರಿ. ಅದೂ ದಂಡೆಗೆ ಹತ್ತಲಿಲ್ಲ. ದುಡ್ಡೂ ಹಾಳಾಯಿತು, ಪ್ರಕೃತಿಯೂ ಹಾಳಾಯಿತು."

"ಏನು ಮಾಡುವುದದೆ.... ಒಳಗಿನ ಒಳಗೇ ಒಡಲ ಮುರಕೊಳ್ಳಲಿಕ್ಕೆ ಹತ್ತಿದೇನಿ. ಯಾರ ಮುಂದ ಹೇಳುವುದು ಅದೆ....?"

ಬಾಳಪ್ಪ ಪಶ್ಚಾತ್ತಾಪದ ನುಡಿ ನುಡಿದ.

"ಅದೇ ದುಡ್ಡನ್ನು ಕಲಿಯಲಿಕ್ಕೆ ಹಾಕಿದ್ದರೆ ಬರುತ್ತಿರಲಿಲ್ಲವೇ ? ಮನೆಯೊಳಗೆ ಹೇಗಾದರೂ ಸುಂದರವ್ವ ಇದ್ದಾಳೆ. ಇಂಗ್ಲಿಷ ಸಾಲೆ ಇದ್ದ ಊರಲ್ಲಿ ಒಂದು ಕೋಣೆ ಮಾಡಿಕೊಟ್ಟು, ಮನೆಯಿಂದ ಕಾಳು ಕಡ್ಡಿ ಒಯ್ದು ಕೊಟ್ಟಿದ್ದರೆ ಇಷ್ಟರೊಳಗೆ ಶ್ರೇಯಾಂಸ ಮ್ಯಾಟ್ರಿಕ್ ಆಗತಿದ್ದ. ಮುಂದೆ ಅವನ ದೈವ ಇದ್ದಂತೆ ಆಗತಿತ್ತು."

"ಸುಂದರವ್ವ ಪದ್ಮಪ್ಪರನ್ನು ಜನುಯೊಳಗೆ ಹಿಡಿಯಬೇಡಿರಿ ನೀವು—ಅವರಾಯಿತು. ಅವರ ಬಸ್ತಿ ಆಯಿತು."

"ಆಗಲಿ ಅಲ್ಲ! ಅಲ್ಲೇನು ಬಸದಿಯಿಲ್ಲೋ, ಜೈನರಿಲ್ಲೋ.... ಸೋದರಳಿಯನಿಗೆ ಎರಡು ರೊಟ್ಟಿ ಮಾಡಿ ಹಾಕೋದು ಅದ. ಮತ್ತು ತನ್ನ ದೇವ ದೇವ ಅನ್ನುತ್ತ ಕೂಡೋದಿತ್ತು."

"ಅದೇನೂ ಆಗುತ್ತಿರಲಿಲ್ಲ ಬಿಡರಿ....!" ಸ್ವಲ್ಪ ದನಿಯನ್ನು ತಗ್ಗಿಸಿ .... ಬಾಳಪ್ಪ ಮುಂದೆ ಹೇಳಹತ್ತಿದ .... "ಅವರೆಲ್ಲ ನಮ್ಮ ಮನೆಯೊಳಗಂತೇ ತಿಳಿದಾರರೀ ಮಾಸ್ತರರೇ! ಏನು ಹೇಳುವದು ನಿಮ್ಮ ಮುಂದೆ. ಇದು ಸಂಸಾರ ಮಾಡುವವರ ಮಾತು ಅಲ್ಲರೀ.... ಈಗ ನೋಡಿರಿ....ಪದ್ಮಪ್ಪ ಈ ಸಲ ದಿಗ್ವ್ರತ, ದೇಶವ್ರತ ಅಂತ ಏನೋ ಮಾಡಿದಾನ. ಊರ ಬಿಟ್ಟು ಒಂದು ಮೈಲೂ ಹೊರಗೆ ಹೋಗುವಂತಿಲ್ಲ. ಕುಡಿದಾಗ ನೀರು ಕಾಸಿ ಸೋಸಿ ಕುಡಿಯೋದು....ಮೇಲೆ 'ದಶಲಕ್ಷಣ ಪರ್ವ' ಬಂತು ಅಂದರೆ ಭಾದ್ರಪದದೊಳಗೆ....ವ್ರತ ಉಪವಾಸಗಳಿಗೇನು ಮಿತಿ ಅಂತೀರಾ? ಆಕಾಶ ಪಂಚಮಿ, ನಿರ್ದೋಷ ಸಪ್ತಮಿ, ಷೋಡಶ ತಾರಣ, ದಶಲಕ್ಷಣ, ಸುಗಂಧ ದಶಮಿ, ಅನಂತ ಚತುರ್ದಶಿ, ರತ್ನತ್ರಯ, ಪುಷ್ಪಾಂಜಲಿ....ಏನು ಹೇಳಲಿ ಮಾಸ್ತರರೇ ಈ ಎಲ್ಲಾ ತಿಥಿಗಳೂ ಆಗಲಿಕ್ಕೇ ಬೇಕು. ಇದೆಲ್ಲ ಪರ ಊರೊಳಗೆ ಹೇಗೆ ನಡೆಯ ಬೇಕು. ಅದರೊಳಗ ಪದ್ಮಪ್ಪ ಮೌನ ಬೇರೆ. ಒಂದು ಮಾತು ಸೋದರಳಿಯನಿಗೆ ಬದ್ಧಿ ಹೇಳಿದರೆ ಕೇಳುವದಿಲ್ಲ ಅವ....? ಆದರೆ

ತುಟಿ ಬಿಚ್ಚಿ ಮಾತನಾಡುವುದಿಲ್ಲ ನೋಡಿರಿ ಈ ವಿಷಯಕ್ಕೆ. ಪುರಾಣ ಪುಸ್ತಕಗಳ ಮಾತು ಬಂತೆಂದರೆ ಬೇಕಾದಷ್ಟು ಮಾತನಾಡತಾರೆ. ಅವನ ಹುಚ್ಚೇ ನಮ್ಮ ಶ್ರೇಯಾಂಸನಿಗೆ ಬಡಿದುಕೊಂಡಿತು ಅಂತೇನೆ ನಾನು. ಇವನೂ ಹಗಲು ರಾತ್ರಿ ಕೈಯೊಳಗೆ ಪುಸ್ತಕ ಹಿಡಿದಿರತಾನೆ. ಅವನದೊಂದು ರೀತಿ ಆದರೆ ಇವನದೊಂದು ರೀತಿ..ಮನೆಯೊಳಗೆ ಪದ್ಮಪ್ಪನ ಹಿಂದೆ ಒಬ್ಬ ಇರಲಿಕ್ಕೆ ಬೇಕಲ್ಲ...."

ಆತ್ಮಾರಾಮರು ತಡೆಯನ್ನು ಒಡ್ಡದಿದ್ದರೆ ಬಾಳಪ್ಪನ ವಾಕ್ ಪ್ರವಾಹ ಇನ್ನೂ ಎಷ್ಟು ಹೊತ್ತು ಪ್ರವಹಿಸುತ್ತಿತ್ತೋ ಯಾರಿಗೆ ಗೊತ್ತು ? ಆದರೆ ಅವನ್ನು ತಡೆದು ಆತ್ಮಾರಾಮರು ಕೇಳಿದರು.

"ಇನ್ನಾವರೂ ನಾನು ಹೇಳಿದಂತೆ ಕೇಳುವಿರಾ ?"

"ಕೇಳಲಿಕ್ಕೆ ಅಂತೇ ಬಂದೇನಲ್ಲಿರಿ !"

"ಆದರೆ, ನಾನು ಹೇಳಿದಷ್ಟು ಮಾಡಿನ್ನು...." ಮಾಸ್ತರರ ದನಿ ಸ್ವಲ್ಪ ಬದಲಾಯಿಸಿತು. ಆವೇಶವೂ ಬಂತು.. "ಶ್ರೇಯಾಂಸ ಮಾಡೋ ದೆಲ್ಲವೂ ಸರಿಯಾದದ್ದೇ ಅದೆ. ಆದರೆ ನಮ್ಮ ಊರಿನ ಜನ ಕೆಟ್ಟ. ಇಲ್ಲಿ ಯಾರ ಬೆಳವಣಿಗೆಯೂ ಆಗದು. ಸಾರ್ವಜನಿಕ ಕೆಲಸದೊಳಗೆ ಕೈಹಾಕಿದರೂ ಅದರೊಳಗೆ ತನಗೇನು ಸಿಕ್ಕೀತು....ಎಂಬ ದೃಷ್ಟಿಯೇ ಇವರಿಗೆ. ಇಂಥವರಿಗೆ ನೀರಲಕಟ್ಟಿ ಮಾಸ್ತರರಂಥವರೇ ಮದ್ದು. ಅವರದು ಇವರಿಗೆ ಹೇಳಿ, ಇವರದು ಅವರಿಗೆ ಹೇಳಿ, ತನ್ನ ಬೇಳೆ ಬೇಯಿಸಿಕೊಂಡು, ಎಲ್ಲರ ನೆತ್ತಿಯ ಮೇಲೂ ಕೈಯಿಟ್ಟು ಬಾಳುವೆ ಮಾಡುವವರೇ ಇಲ್ಲಿ ಬೇಕು ಸರಳ ಜೀವನಕ್ಕೆ ಇಲ್ಲಿ ಸ್ಥಾನವಿಲ್ಲ.... ಅದಕ್ಕೆ ಶ್ರೇಯಾಂಸನನ್ನು ಆದಷ್ಟು ಲಗೂನೆ ಇಲ್ಲಿಂದ ಹೊರಗೆ ತೆಗೆಯಲಿಕ್ಕೆ ಪ್ರಯತ್ನಮಾಡೋಣ. ಹೊರಗೆ ನಾಡಿನೊಳಗೆ ಸ್ವಾಭಾವಿಕವಾಗಿ ಅವನು ಬೆಳೆಯುವನು. ಬೆಳೆಯಲಿ. ಹುಟ್ಟುವಲ್ಲಿ ಹೂವು ಮಾರುವದಿಲ್ಲವಂತೆ....ತಿಳೀತು ?"

"ಅದಕ್ಕೇ ನಾನು ಮಿರಜಿಗೆ ಕಳಿಸಿದ್ದೆನಲ್ಲರಿ...." ತನ್ನ ನಡತೆ

ಯನ್ನು ಸಮರ್ಥಿಸಿಕೊಳ್ಳಲಿಕ್ಕೆ ಹವಣಿಸಿದ ಬಾಳಪ್ಪ....

"ಅಂಥಾ ಕೆಲಸಾ ಏನು ಸುಡುವಿ? ತನ್ನ ಹೊಟ್ಟೆಯನ್ನು ತುಂಬಿಕೊಂಡಿರಬೇಕು, ಲೋಕದ ಕಲ್ಯಾಣವನ್ನೂ ಮಾಡಿರಬೇಕು."

"ಅಂಥದೇನು ಕೆಲಸ ಅದರಿ... ಇಂಥ ದಿವಸದೊಳಗೆ....?"

"ಕನ್ನಡ ಸಾಲಿಯಲ್ಲಿ ಮಾಸ್ತರ ಆಗೋದು.. ಅದರೊಳಗೇನದೆ?"

"ಒಳ್ಳೊಳ್ಳೆ ಕಲಿತವರು ಮೂಲೆಯೊಳಗೆ ಕುಳಿತಾರೆ.... ನಮ್ಮ ಶ್ರೇಯಾಂಸನಿಗೆ ಎಲ್ಲೀದ ಸಿಕ್ಕೀತರೀ ಮಾಸ್ತರಕೀ? ಕಟ್ಟೆಯ ಮೇಲಿನ ದೇವರೆಲ್ಲ ಉರುಳಾಡಿ ಹೋದುವಂತೆ .... ಕಳ್ಳಿಯೊಳಗಿನ ದೇವರು ಬಂದು ಕಸಲು ಕೊಟ್ಟೆತಂತೆ....ಅದೇನು ಆಗ್ತದ ಬಿಡರಿ......"

"ಹಾಗನ್ನಬಾರದು ಬಾಳಪ್ಪ....! ಬಾಳುವೆ ಮಾಡುವವರು ಹಾಯ್ದಾಡಿ ನೋಡಬೇಕಾಗತದ .... ಹಾಯ್ದಾಡದೇ ಏನೂ ಹಾದಿ ಸಿಗುವದಿಲ್ಲ....? ಅವರವರ ದೈವ ಅವರ ಸುತ್ತಾ ಇರತದಲ್ಲ......ಯಾಕೆ ಸಿಗಬಾರದು ನಮ್ಮ ಶ್ರೇಯಾಂಸನಿಗೆ ಮಾಸ್ತರ ಕೆಲಸ.... ಅದಕ್ಕೇ ಹೇಳಿದೆನಲ್ಲ ನಾನು....ಪತ್ರ ಕೊಡತೇನಿ ಬೆಳಗಾಂವಿಯ ತನಕ ಹೋಗಿ ಬಾ ಅಂತ...."

"ಯಾರು ನಾನ?"

"ಹೌದು ನೀನೇ. ಯಾಕೆ? ಹೆದರುವಿ ಗಿದರುವಿ ಏನು ಮತ್ತ....!"

"ಹೆದರಿಕೆ ಅಲ್ಲ .... ಮುಂಬಯಿ ತನಕ ಹೋಗಿ ಬರವಲ್ಲೆ ನೇನು ನಾ...."

ಬಾಳಪ್ಪ ನಕ್ಕು ಹೇಳಿದ .... "ಆದರೆ ಶ್ರೇಯಾಂಸನನ್ನೇ ಕಳಿಸೋಣವೇನು?"

"ಅವನನ್ನು ಬೇಡ. ನೀನೇ ಹೋಗು...."

ಆತ್ಮಾರಾಮರ ಹೇಳಿಕೆಯಂತೆ ಮುಂದೆ ಒಂದೆರಡು ದಿನಗಳಲ್ಲಿಯೇ ಬಾಳಪ್ಪ ಬೆಳಗಾಂವಿಗೆ ಹೋದ. ಆತ್ಮಾರಾಮರು ತನ್ನ

ಶಿಷ್ಯನೊಬ್ಬನಿಗೆ ಪತ್ರ ಕೊಟ್ಟಿದ್ದರು. ಅವರ ಶಿಷ್ಯನು ಸ್ಕೂಲ ಬೋರ್ಡ ಆಫೀಸಿನಲ್ಲಿ ಕಾರಕೂನನಾಗಿದ್ದನು. ಅವನ ಪ್ರಯತ್ನದಿಂದ ಮುಂದೆ ತಿಂಗಳೊಪ್ಪತ್ತಿನಲ್ಲಿ ಶ್ರೇಯಾಂಸನಿಗೆ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕನ ಕೆಲಸವೂ ದೊರೆಯಿತು. ಅದೂ ತಮ್ಮೂರ ಸಮೀಪವಲ್ಲಿರುವ ಜುಗುಳದ ಕನ್ನಡ ಶಾಲೆಯಲ್ಲಿಯೇ. ಅದರಿಂದ ಶ್ರೇಯಾಂಸನಿಗೂ ಅವನ ಮನೆಯವರಿಗೂ ಹಿಡಿಸಲಾರದಷ್ಟು ಆನಂದವಾಯಿತು.

ಪದ್ಮಪ್ಪನಿಗೆ ಶ್ರೇಯಾಂಸನ ಈ ಕೆಲಸದ ವಿಷಯಕ್ಕೆ ಅಷ್ಟು ಆಸಕ್ತಿ ಇರಲಿಲ್ಲ. ಸಂಸಾರಿಗರು ಏನಾದರೊಂದು ಕೆಲಸಮಾಡಿಕೊಂಡು ಇರಲಿಕ್ಕೆ ಬೇಕು. ಇರಲಿ ಜ್ಞಾನದಾನವೇನೋ ಎಲ್ಲಕ್ಕಿಂತ ಮಿಗಿಲಾದುದು. ಆದರೆ ಇವರು ಕಲಿಸುವದು ಸರಕಾರದವರು ಮಾಡಿದ ಪಠ್ಯ ಪುಸ್ತಕಗಳನ್ನು. ಅದರಲ್ಲಿ ಧರ್ಮಕ್ಕೆ ಸ್ಥಾನವಿಲ್ಲ. ಅದರಿಂದ ಇವರು ಕಲಿಸುವುದರಿಂದ ಆತ್ಮಕಲ್ಯಾಣವಾಗುವುದಾದರೂ ಏನು ? ಧರ್ಮ ನೆಲೆಗೊಳ್ಳುವುದು ಹೇಗೆ ? ಆದರೂ ನಾಲ್ಕಕ್ಷರ ಹೇಳಿಕೊಡುವರು. ಮಕ್ಕಳಿಗೆ ಹೊಸದೊಂದು ಕಣ್ಣು ಕೊಟ್ಟಂತಾಗುವದು. ಜ್ಞಾನವರಣೀಯ ಕರ್ಮಕ್ಷಯವಾದ ಜೀವಿಗಳೇನೋ ಇಂಥದರಿಂದ ಧರ್ಮದಲ್ಲಿ ಚಿತ್ತವನ್ನು ಸ್ಥಿರವಾಗಿಸಬಹುದು, ಆತ್ಮಕಲ್ಯಾಣವನ್ನು ಮಾಡಿಕೊಳ್ಳಬಹುದು. ಇವನ್ನು ಮಾತ್ರ ಊರೂರು ತಿರುಗ—ತನ್ನ ಬಾಳುವೆಯನ್ನು ಅನೇಕ ಹಳ್ಳಿಗಳಲ್ಲಿ ನಾಗಿಸುತ್ತ ಆಯುಷ್ಯ ಕಳೆದ— ಮಾಡಬೇಕಾಗುವುದು. ಇದರಿಂದ ಶ್ರೇಯಾಂಸ ತನ್ನ ಚಾರಿತ್ರ್ಯವನ್ನು ಎಷ್ಟರಮಟ್ಟಿಗೆ ಶುದ್ಧವಾಗಿ ಇಟ್ಟುಕೊಳ್ಳುವನೋ ಯಾರಿಗೆ ಗೊತ್ತು ? ಆದರೂ ಆರಂಭದಲ್ಲಿ ಜುಗುಳದಲ್ಲಿ ಕೆಲಸ ದೊರೆತದ್ದು ಸಂತೋಷ. ಬಸ್ತಿಯಿದೆ. ಧರ್ಮದಲ್ಲಿ ಶ್ರದ್ಧೆಯುಳ್ಳ ಜನರೂ ಇದ್ದಾರೆ....ಈ ಮೊದಲು ಮುನಿಗಳ ಸಂಘವು ಅಲ್ಲಿದ್ದಾಗ ಶ್ರೇಯಾಂಸನೂ ಅವರ ಜೊತೆಯಲ್ಲಿ ನಾಲ್ಕುದಿನ ಅಲ್ಲಿ ಹೋಗಿ ಇದ್ದು, ಪುರಾಣ ಓದಿ, ಊರ ಶ್ರಾವಕರಿಗೆ ಪರಿಚಿತನಾಗಿರುವ. ಅದರಿಂದ ಅವನ ಕೆಲಸವೂ ಸುಲಭ

ವಾದೀತು. ಎಂದೇನೇನೋ ಪದ್ಮಪ್ಪ ಮನಸ್ಸಿನಲ್ಲಿ ಒಮ್ಮೊಮ್ಮೆ ಲೆಕ್ಕ ಹಾಕುವನು.

ಮತ್ತೊಮ್ಮೆ ಇದೇನು? ಸಂಸಾರದ ವಿಷಯದಲ್ಲಿ ಇಷ್ಟೇಕೆ ನನ್ನ ಮನಸ್ಸನ್ನು ಹರಿಬಿಟ್ಟೆ? ನಿಜವಾಗಿಯೂ ನನಗೂ ಶ್ರೇಯಾಂಸನಿಗೂ ಏನು ಸಂಬಂಧ? ದಾರಿಕಾರರು ಅರವಟ್ಟಿಗೆಯಲ್ಲಿ ಸೇರಿದಂತೆ, ಒಂದು ಮನೆಯಲ್ಲಿ ಕೆಲವು ದಿನ ಸೇರಿದ್ದೇವೆ. ನನ್ನ ಆತ್ಮಕಲ್ಯಾಣದ ದಾರಿ ನನಗೆ. ಅವನದು ಅವನಿಗೆ. ಏನೋ ಸಹಧರ್ಮಿಯೆಂದು ಶ್ರೇಯಾಂಸನನ್ನು ಕಾಣುವದು. ಧರ್ಮದಿಂದ ಚ್ಯುತನಾಗುವ ಕಾಲಕ್ಕೆ ರಕ್ಷಿಸುವುದು ಅದನ್ನಷ್ಟು ಮಾಡುತ್ತ ಬಂದಿರುವೆ. ಹೆಚ್ಚಿನ ಹವ್ಯಾಸ ನನಗೇಕೆ? ಎಂದುಕೊಳ್ಳುವನು. ಅಂದರೂ ಶ್ರೇಯಾಂಸ ಕೆಲಸದ ಮೇಲೆ ಹೋಗುವಾಗ ಅವನಿಗೆ ಹೇಳಿ, ಆಶೀರ್ವಾದ ಪಡೆದುಕೊಂಡು ಹೋಗಲು ಬಂದಾಗ....ಹೆಚ್ಚಿಗೆ ಏನನ್ನೂ ಹೇಳದಿದ್ದರೂ ಒಂದು ಮಾತನ್ನು ಮಾತ್ರ ಹೇಳದೆ ಇರಲಿಲ್ಲ

"ಸ್ವೀಕರಿಸಿದ ಕೆಲಸವನ್ನು ಮನಃಪೂರ್ವಕವಾಗಿ ಮಾಡು. ಅದರಲ್ಲಿ ಧರ್ಮದೃಷ್ಟಿ ಇರಲಿ. ಅಂದರೆ ನಿನಗೆ ಮುಕ್ತಿಯಿದೆ. ನಿನ್ನಿಂದ ಪಾಠ ಹೇಳಿಸಿಕೊಂಡವರಿಗೂ ಮುಕ್ತಿಯ ಮಾರ್ಗ ಸಿಕ್ಕೀತು."

ಪತಿಯ ಮಾತನ್ನು ಕೇಳಿ ಸುಂದರವ್ವನಿಗೆ ಸಮಾಧಾನವಾಗಲಿಲ್ಲ. ಅಳಿಯನಿಗೆ ಕೆಲಸ ಸಿಕ್ಕಿದಕ್ಕೆ ಒಂದು ರೀತಿಯ ಸಮಾಧಾನವಿದ್ದರೂ ಸೋದರಳಿಯನು ತಮ್ಮನ್ನು ಅಗಲಿ ಪರವೂರಲ್ಲಿ ಹೋಗಿ ಇರುವುದಕ್ಕೆ ಅವಳು ಹೃತ್ಪೂರ್ವಕವಾಗಿ ಸಮ್ಮತಿಸಿರಲಿಲ್ಲ. ಆದರಿಂದ ಅವಳು ಪತಿಯ ಎದುರಿಗೇನೇ ನುಡಿದಳು....

"ಸರಕಾರಿ ಕೆಲಸ ಹಿಡಿದ ಮೇಲೆ ಧರ್ಮ ಎಲ್ಲೀದು ಕರ್ಮ ಎಲ್ಲೀದು? ಹನ್ನೆರಡು ಜಾತಿಯ ಹುಡುಗರನ್ನು ಮುಟ್ಟಬೇಕಾಗತದ ಹನ್ನೆರಡು ಊರು ತಿರುಗಬೇಕಾಗತದ....ಇಲ್ಲದ್ದೊಂದು ಹೇಳುವವರು ನೀವು."

"ಹೂಂ ! ಇನ್ನೂ ಸಣ್ಣ ಮನಸ್ಸು ನಿನ್ನದು....ನಮ್ಮ ತೀರ್ಥಂಕರರ ಸಮವಸರಣದಲ್ಲಿ ಜೈನರಷ್ಟೇ ಇರುತ್ತಿರಲಿಲ್ಲ .... ಎಲ್ಲರೂ ಇರುತ್ತಿದ್ದರು. ಊರೂರು ತಿರುಗುತ್ತಿದ್ದರು."

"ಆಯಿತು, ಪಾಪ ಅಳಿಯ ಕೂಡೇ ಏಕೆ ತಿರಗವಲ್ಲಂ ! ನನ್ನದೇನು ಹೋಗುವುದು ? ಸಾಯುವ ಕಾಲಕ್ಕೆ ಕಿವಿಯೊಳಗೆ ಪಂಚನಮೋಕಾರ ಮಂತ್ರ ಹೇಳಲಿಕ್ಕೆ ಹತ್ತರ ಶ್ರೇಯಾಂಸ ಇದ್ದಾನು ಅನ್ನುವ ಆಶೆಯನ್ನು ಮಾತ್ರ ಇನ್ನು ಇಟ್ಟುಕೊಳ್ಳುವಂತಿಲ್ಲ ನಾನು. ಅವನು ಯಾವ ಊರೊಳಗೆ ಇರುವನೋ ನಾವು ಎಲ್ಲಿ ಬಿದ್ದು ಸಾಯುವೆವೋ.... ಯಾರು ಬಲ್ಲರು ?"

"ಅವನೇ ನಮೋಕಾರ ಮಂತ್ರ ಹೇಳಬೇಕೆನ್ನುವ ಹವ್ಯಾಸ ಯಾಕೆ ನಿನಗೆ? ನಿನ್ನ ಶುಭ ಕರ್ಮೋದಯ ಇತ್ತು ಅಂದರೆ ಯಾರೇ ಬಂದು ಹೇಳಿಯಾರು....ಅದೇ ಇಲ್ಲದಿದ್ದರೆ ಶ್ರೇಯಾಂಸ ಹತ್ತರ ಇದ್ದೂ ಮಂತ್ರಲಾಭ ಆಗಲಿಕ್ಕಿಲ್ಲ ನಿನಗೆ...."

"ಅಂಥ ಆರವುಗೇಡಿಯಲ್ಲ ನಮ್ಮ ಶ್ರೇಯಾಂಸ...."

"ಅವನೇನೋ ಹನ್ನೆರಡು ತಾಸೂ ಮಂತ್ರ ಪಠಿಸಬಹುದು. ಆದರೆ ನಿನ್ನ ಚಿತ್ತ ಅದರಲ್ಲಿ ನೆಲೆಸದಿದ್ದರೆ ಆಗುವದೇನು ? ಸಾಯುವ ಕಾಲಕ್ಕೆ ಯಾವುದೋ ಒಂದು ಮುದುಕಿ, ಆಕಳ ಕರ ಪೋಲಿ ಕುಡಿಯುತ್ತಿದೆ, ತನಗೆ ಹಾಲು ಇಲ್ಲವಾಗುತ್ತದೆ, ಕರವನ್ನು ಕಟ್ಟಬೇಕು ಎಂಬ ರೌದ್ರಧ್ಯಾನದಿಂದ ಜೀವ ಬಿಟ್ಟು, ಮುಂದಿನ ಭವದಲ್ಲಿ ಅದೇ ಆಕಳಿಗೆ ಕರುವಾಗಿ ಜನ್ಮ ತಾಳಿದಂತೆ ಆದೀತು. ಈ ಮಂತ್ರಪಠಣ, ದೇವದರ್ಶನಗಳೆಲ್ಲ ನಿಮಿತ್ತ ಕಾರಣಗಳು ಮಾತ್ರ. ಭಾವಶುದ್ಧಿಯೇ ಸದ್ಗತಿಗೆ ನಿಜವಾದ ಕಾರಣ...."

ಪತಿಯ ವ್ಯಾಖ್ಯಾನ ಹೀಗೆಯೇ ನಡೆಯುತಕ್ಕುದು, ದಿನಾಲು ಇರುವುದೆಂದು ಭಾವಿಸಿ, ಶ್ರೇಯಾಂಸನ ಕಡೆಗೆ ಹೊರಳಿ ಸುಂದರವ್ವ ಹೇಳಿದಳು.

"ಏನೇ ಮಾಡು ನೀನು. ಮೊದಲನೆಯ ಪಗಾರ ಬಂದಕೂಡಲೆ ನನ್ನ ಕಡೆಗೆ ಕಳಿಸಿಕೊಡು.... ಬಸತಿಯ ಶಿಖರ ಕಟ್ಟಲಿಕ್ಕೆ ಹತ್ತಿರುವರು. ಅದಕ್ಕೆ ಕೊಟ್ಟುಬಿಡೋಣ...."

"ಏನು ಆಗುವುದು ಹದಿನೈದು ರೂಪಾಯಿಗಳಿಂದ....?"

ಪದ್ಮಪ್ಪ ಮತ್ತೆ ದನಿಯೆತ್ತಿದ

"ಅಷ್ಟೇ ಇದ್ದಷ್ಟು, ಗುಳ್ಳಕಾಯಜ್ಜಿ ಭಕ್ತಿ!" ಎಂದಳು ಸುಂದರಪ್ಪ.

ಇಷ್ಟೆಲ್ಲ ಉಪದೇಶ ಆದೇಶಗಳನ್ನೆಲ್ಲ ಕೇಳಿಕೊಂಡು ಶ್ರೇಯಾಂಸ ಮನೆಯನ್ನು ಬಿಟ್ಟ. ತಂದೆತಾಯಂದಿರು ಮಗನನ್ನು ಕಳಿಸಿಕೊಡಲಿಕ್ಕೆ ಊರ ಅಗಸೆಯವರೆಗೂ ಬಂದರು. ದಾರಿಯಲ್ಲಿ ಆಗುವ ಶುಭಾಶುಭ ಶಕುನಗಳನ್ನು ನಿರೀಕ್ಷಿಸಿದರು. ಎದುರಿಗೆ ಬಂದ ಗಡ್ಡ ಬಿಟ್ಟ ಬೈರಾಗಿಯನ್ನು ಕಂಡು ಸರಸಪ್ಪ ಮೂಗು ಮುರಿದಳು. ಆದರೂ ಸ್ವಲ್ಪ ದೂರ ಹೋಗುವಷ್ಟರಲ್ಲಿ ಮತ್ತೆ ತುಂಬಿದ ಕೊಡಗಳು ಎದುರಿಗೆ ಬಂದುದರಿಂದ ಹಿರಿಹಿರಿ ಹಿಗ್ಗಿ ಮಗನನ್ನು ಬೀಳ್ಕೊಟ್ಟಳು.

"ಕೊನೆಗೆ ಶುಭ ಆಯ್ತು ಹೋಗು!" ಎಂದು ಹೇಳಿದಳು. ಕಣ್ಣೀರನ್ನೂ ತಂದಳು.

"ಕೊನೆಗೆ ಇದು ನಿನ್ನ ಶಕುನವೇನು?" ಬಾಳಪ್ಪ ಅವಳ ಕಣ್ಣೀರನ್ನು ಕಂಡು ಹೆಂಡತಿಗೆ ಕೇಳಿದ.

"ನಡಿಯೋದೇ ಅದು ತಾಯ್ಗರಳು...." ನೀರಿಗೆ ಹೊರಟ ಇನ್ನೊಬ್ಬ ಹೆಣ್ಣು ಮಗಳು ಅಂದಳು.

"ಹಾಗಾದರೆ ಮಗನನ್ನೇ ಮನೆಯಲ್ಲಿ ಇಟ್ಟುಕೊಂಡು ಕೂಡವಲ್ಲಳೇಕೆ?"

"ಸಾಲಿ ಕಲಿಸಿದೆವು; ಮನೆಯೊಳಗೇನೇ ಇರತಾನ ಅವನು?"

"ಸಾಲೆಯನ್ನು ಕಲಿತರೆ ನೌಕರಿಯನ್ನೇ ಮಾಡಬೇಕೆಂದು ನಿಯಮ ಅದೇ ಏನು? ಹೊಲ ಮನೆ ಕೆಲಸ ಮಾಡಿಕೊಂಡು ಇದ್ದರೆ

ಇತ್ತಲ್ಲ...."

"ಅದು ಇಲ್ಲಂತೇ ಇದನ್ನು ಮಾಡುವುದಲ್ಲ...."

ಹೀಗೆ ಊರ ಅಗಸೆಯಲ್ಲಿ ನಿಂತು ಮಗನ ಎದುರಿಗೆ ಸ್ವಲ್ಪ ಚರ್ಚಿಸಿ ಮಾತು ಮುಗಿಸಿದರು. ಕೊನೆಗೆ ಕಳಿಸಿಕೊಡುವಾಗ ಬಾಳಪ್ಪ ಪರವೂರಲ್ಲಿ ನಡೆಯಬೇಕಾದ ರೀತಿನೀತಿಗಳನ್ನು ಮಗನಿಗೆ ಹೇಳಿದ. ನಾಲ್ಕು ಜನರಿಗೆ ಬೇಕಾಗಿ ಇರುವಂತೆ ಬೋಧಿಸಿದ. 'ಇದ್ದೂರಲ್ಲಿ ಹೇಗೆ ನಡೆದರೂ ಸಾಗಿ ಹೋಗುವುದು, ಹಗಲು ರಾತ್ರಿ ಪುಸ್ತಕದಲ್ಲಿ ಮುಖ ಹಾಕಿಕೊಂಡು ಕೂತರೂ ಯಾರೂ ಕೇಳರು. ಆದರೆ ಪರವೂರಲ್ಲಿ ಹೋದ ಮೇಲೆ ಪುಸ್ತಕ ಬದಿಗೆ ಸರಿಸಿ, ಹತ್ತೆಂಟು ಜನರ ಕೂಡ ಬಾಯಿ ತೆರೆದು ಮಾತನಾಡಬೇಕಾಗತದ. ಅವರ ಮಕ್ಕಳನ್ನು ಸಂಬಾಳಿಸಿ ಕೊಂಡು ಕಲಿಸಬೇಕಾಗತದ. ಅಂದರೆ ನಾಲ್ಕೊಪ್ಪತ್ತು....ಬಾಳ್ವೆ ಯಾಗುವುದು.' ಎಂದು ಹೇಳದೆ ಇರಲಿಕ್ಕೆ ಬಾಳಪ್ಪನಿಂದ ಆಗಲಿಲ್ಲ.

ಶ್ರೇಯಾಂಸನಿಗೆ ಹೊಸ ಊರು, ಹೊಸ ಆವರಣಗಳು ಹುರು ಪನ್ನು ಕೊಟ್ಟವು. ಸಾಲೆಯಲ್ಲಿ ಮಕ್ಕಳ ಜೊತೆ, ಹೊರಗೆ ಊರ ಹಿರಿಯರೂ ಕೂಡ ಹೊಸ ಶಿಕ್ಷಕನೆಂದು ಆದರದಿಂದ ಕಾಣುವಿಕೆ ಇವೆಲ್ಲವುಗಳಿಂದ ಶ್ರೇಯಾಂಸನ ಮನಸ್ಸಿನ ಮೇಲೆ ಒಂದು ಅದ್ಭುತ ಪರಿಣಾಮವಾಯಿತು. ಶಿಕ್ಷಕವೃತ್ತಿಯು ಪವಿತ್ರವಾದೊಂದು ಕೆಲಸ ವೆಂದು ಹಗಲಿರುಳೂ ದುಡಿಯಹತ್ತಿದ. ಸಾಲೆಯಲ್ಲಿ ಶಿಕ್ಷಣ, ಮನೆಯಲ್ಲಿ ಶಿಕ್ಷಣ, ತಿರುಗಾಡಲಿಕ್ಕೆ ಹೋದಾಗ ಶಿಕ್ಷಣ ಎಲ್ಲ ಕಡೆಗೂ ಶಿಕ್ಷಣವೇ ಶಿಕ್ಷಣ. ಯಾವಾಗಲೂ ಮಕ್ಕಳ ಮಧ್ಯದಲ್ಲಿ ಶ್ರೇಯಾಂಸ, ಹುಡುಗರಿಗೂ ಶ್ರೇಯಾಂಸ ಮಾಸ್ತರರೆಂದರೆ ಅಚ್ಚುಮೆಚ್ಚು. ಹೀಗಾಗಿ ಜುಗುಳ ಊರಲ್ಲಿ—ಊರ ಜನರ ಹೃದಯದಲ್ಲಿ—ಬೇಗನೆ ಒಂದು ಸ್ಥಾನವನ್ನು ಶ್ರೇಯಾಂಸ ಸಂಪಾದಿಸಿದ. ತನ್ನ ಹುಟ್ಟೂರಿನಲ್ಲಿ ಈಗೀಗ ತನಗಿರದ ಆದರ ಆತಿಥ್ಯಗಳನ್ನು ಅವನು ಅಲ್ಲಿ ಪಡೆಯಹತ್ತಿದ. ಸವಿಯಾದ ಮಾತು, ವಿನಯಶೀಲ ನಡತೆ, ವಿದ್ಯಾರ್ಥಿಗಳ ಮೇಲಿನ

ಅಕ್ಕರತೆಗಳು ಅವನು ಜನಪ್ರಿಯವಾಗುವಂತೆ ಮಾಡಿದುವು ಅವನ ಓದು ವಿದ್ವತ್ತೆಗಳು ಹಲವು ಜನ ಹಿರಿಯರ ಮನಸ್ಸನ್ನು ಸೆಳೆದು ಕೊಂಡವು. ಹೀಗಾಗಿ ಕೆಲದಿನಗಳಲ್ಲಿಯೇ ಶ್ರೇಯಾಂಸನ ಖ್ಯಾತಿ ಗೊಂದಿಷ್ಟು ಊರಲ್ಲಿ ಮಹತ್ವ ಬರಹತ್ತಿತು.

ಆಗ ಶ್ರೇಯಾಂಸನ ಹೃದಯದೊಳಗಿನ ಸುಪ್ತ ಆಶೆಗಳು ಒಂದೊಂದೇ ಚೇತರಿಸತೊಡಗಿದ್ದವು. ತನ್ನ ಊರಲ್ಲಿ ಅರ್ಧಕ್ಕೆ ಬಿಟ್ಟ ಕಾರ್ಯವನ್ನು ಇಲ್ಲೇಕೆ ಆರಂಭಿಸಬಾರದು, ಎಂದು ಅವನ ತರುಣ ಮನಸ್ಸು ಆಗಾಗ ಮಿಡಿಯಹತ್ತಿತು. ಇಂದಿನ ಬಾಲಕರೇ ನಾಳಿನ ನಾಗರಿಕರೆಂದು ನಂಬಿ ಆತ ಅವರನ್ನು ತಿದ್ದುವಲ್ಲಿ, ಹೊಸ ಹೊಸ ವಿಚಾರಗಳನ್ನು ಅವರಿಗೆ ತಿಳಿಸಿಕೊಡುವಲ್ಲಿ ತುಂಬ ಆಸಕ್ತಿ ಯನ್ನು ವಹಿಸಿದ್ದ. ಆಗಾಗ ವೃತ್ತಪತ್ರವನ್ನು ಮಾಸಪತ್ರಿಕೆಯೊಳಗಿನ ಲೇಖನಗಳನ್ನೂ ಅವರಿಗೆ ಓದಿ ಹೇಳುವ. ಸ್ವತಂತ್ರವಾಗಿ ವಿಚಾರ ಮಾಡುವಂತೆ ಪ್ರೋತ್ಸಾಹಿಸುವನು. ಆದರೂ ಈ ಬೀಜ ಮೊಳಕೆ ಯೊಡೆದು, ಬೆಳೆದು ಫಲಕೊಡಲಿಕ್ಕೆ ಇನ್ನೂ ಬಹುಕಾಲ ಕಳೆಯಬೇಕಲ್ಲ ಎಂದು ಆಗಾಗ ನಿರಾಶೆಯ ಝಳಕೊಂದು ಅವನ ಮನಸ್ಸಿನ ಮೇಲೆ ಹಾಯ್ದು ಹೋಗುವುದು. ಇಂಥ ನಿಮಿಷಗಳಲ್ಲಿ ಅವನು ಊರಲ್ಲಿಯ ತರುಣರ ಗೆಳೆತನಕ್ಕಾಗಿ ಹಂಬಲಿಸುವನು.

ಊರಲ್ಲಿಯ ಯಾವ ತರುಣರನ್ನು ಕಂಡರೂ ಅವನಿಗೆ ನಿರಾಶೆಯೇ ಕಂಡು ಬರತೊಡಗಿತು. ಪ್ರಾಥಮಿಕ ಶಿಕ್ಷಣವನ್ನು ಮುಗಿಸಿಕೊಂಡು-ಅದೂ ಈಗ ಓದು ಬರೆಯಲಿಕ್ಕೆ ಹಿಂಜರಿಯುತ್ತಿರುವ-ತಮ್ಮ ಪುನೆತನದ ಕೆಲಸಗಳನ್ನೇ ನೀಗಿಸಿಕೊಳ್ಳಲಾಗದ ತರುಣರೇ ಎಲ್ಲೆಲ್ಲೂ ಕಂಡರು. ಒಂದೆರಡು ವರ್ಷ ನಗರಗಳಲ್ಲಿ ನಿಂತು ಇಂಗ್ಲೀಷು ಅಕ್ಷರಗಳನ್ನೂ ಕಲಿತು ಬಂದ ತರುಣರಲ್ಲಿ ಹೊಸ ಜಗತ್ತಿನ ಪರಿಚಯ ಹುರುಪುಗಳೇನೋ ಕಂಡವು. ಆದರೆ ಅವರು ಈಗಾಗಲೇ ಹಳ್ಳಿಗರ ವಿಶ್ವಾಸವನ್ನು ಕಳೆದುಕೊಂಡವರಾಗಿದ್ದರು. ಅದರಿಂದ ಅವರು

ಲೆತ್ತ್ರದಾಟದ ನಿರುದ್ಯೋಗಿ ಕೂಟದ ಸದಸ್ಯರಾಗಿದ್ದರು. ಆರಂಭದಲ್ಲಿ ನಗರಗಳಿಂದ ಮರಳಿದಾಗ ಊರಲ್ಲಿ ಏನೇನೋ ಚಟುವಟಿಕೆಗಳನ್ನು ನಡೆಯಿಸಹೋಗಿ ಅನುಭವ ಸಾಲದೆ ಅಯಶಸ್ವಿಯಾದವರೇ ಅವರಲ್ಲಿ ಹೆಚ್ಚು. ಅದರಿಂದ ಶ್ರೇಯಾಂಸ ಅವರ ಹತ್ತಿರ ಏನಾದರೂ ಒಂದು ಕಾರ್ಯಕ್ರಮವನ್ನು ಪ್ರಸ್ತಾಪಿಸಿದೊಡನೆಯೇ ತಮ್ಮ ಹಿಂದಿನ ಪುರಾಣ ವನ್ನೇ ಅವರು ಬಿಚ್ಚುವರು. ಹೀಗಾಗಿ ಶ್ರೇಯಾಂಸನ ಹುಮ್ಮಸ್ಸು ಬೇಸಿಗೆಯಲ್ಲಿ ನದಿಗೆ ಬಂದ ಹೊಸ ನೀರಿನಂತೆ ಬೇಗನೆ ಇಳಿದು ಹೋಗುವುದು.

ಇಂಥದರಲ್ಲೂ ಶ್ರೇಯಾಂಸ ತನ್ನ ಹಂಬಲವನ್ನು ಬಿಟ್ಟಿರಲಿಲ್ಲ. ಊರ ಸಾಮಾಜಿಕ ಸ್ಥಿತಿಯನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದ. ಅದರ ಜೊತೆಗೆ ವಿವಿಧ ಗ್ರಂಥಗಳ ವಾಚನವೂ ಸಾಗಿಯೇ ಇದ್ದಿತು. ಸಾಲೆಯಲ್ಲಿಯ ಚಿಕ್ಕ ವಾಚನಾಲಯವೊಂದು ಅವನ ಕೈಯಲ್ಲಿಯೇ ಸಿಕ್ಕಿದ್ದಿತು. ಅಲ್ಲಿ ಆರಂಭದಿಂದಲೂ 'ಜಯಕರ್ನಾಟಕ' ಮಾಸಪತ್ರಿಕೆಯು ಬರುತ್ತಿದ್ದಿತು. ಅದರ ಹದಿನೈದು ವರ್ಷಗಳ ಸಂಪುಟಗಳನ್ನೆಲ್ಲ ತಿರುವಿ ಹಾಕಲಿಕ್ಕೆ ಅವನಿಗೆ ಸಂಧಿಯೊದಗಿತು. ಅದರಿಂದ ಹೊಸ ಕನ್ನಡ ಸಾಹಿತ್ಯಚರಿತ್ರೆಯ ಕಲ್ಪನೆಯು ಶ್ರೇಯಾಂಸನಿಗೆ ಆಯಿತು. ಅದರ ಜೊತೆಗೆ ಇದೀಗ ಅರಳುತ್ತಿರುವ ಧಾರವಾಡದ 'ಮನೋಹರ ಗ್ರಂಥಮಾಲೆಯ ಕುಸುಮಗಳನ್ನೂ 'ಜಯಂತಿ'ಯನ್ನೂ ಕೊಂಡು ಓದಲಿಕ್ಕೆ ಆರಂಭಿಸಿದ. ತನಗೆ ಬರುತ್ತಿದ್ದ ಹಿಂದಿ, ಮರಾಠಿ ಭಾಷೆ ಗಳಲ್ಲಿ ತನಗೆ ಸಿಕ್ಕ ಪುಸ್ತಕಗಳನ್ನು ಓದಿಬಿಡುವನು. ಇವೆಲ್ಲವುಗಳಿಂದ ಶ್ರೇಯಾಂಸನ ಮನಸ್ಸು ಹದಗೊಳ್ಳತೊಡಗಿತು. ಆಗಲೇ ಆ ಮೃದು ಮನಸ್ಸಿನ ಮೇಲೆ ಸಮಾಜದೊಳಗಿನ ಅನೇಕ ವ್ಯಕ್ತಿಗಳು, ಘಟನೆಗಳು ತಮ್ಮ ಹೆಜ್ಜೆಗಳನ್ನು ಮೂಡಿಸಿ ಮುಂದೆ ಸಾಗತೊಡಗಿದವು. ಆ ಹೊಸ ಹೆಜ್ಜೆಗಳೊಡನೆ ಹಳೆಯ ಹೆಜ್ಜೆಗಳನ್ನು ಅವನ ಒಳಗಣ್ಣು ಹುಡುಕಿ ನಿರೀಕ್ಷಿಸತೊಡಗಿತು. ಅದರ ಫಲವಾಗಿ ನಾಳಿನ ದಾರಿಯನ್ನು ಹುಡುಕ

ಹತ್ತಿತು.

ಇದೇ ಸಂದರ್ಭದಲ್ಲಿ ಶಂಕರಗೌಡರ ಪರಿಚಯ ಶ್ರೇಯಾಂಸನಿಗೆ ಆಯಿತು. ಅದೇನು ಸಹಜ ಒದಗಿದ ಪ್ರಸಂಗವೇನೂ ಅಲ್ಲ. ಶ್ರೇಯಾಂಸನೇ ಮನಃಪೂರ್ವಕವಾಗಿ ಶಂಕರಗೌಡರ ಗೆಳೆತನವನ್ನು ಬಯಸಿದ್ದನು. ಅವರು ಆ ಊರ ಗೌಡರ ಕಿರಿಯ ಮಕ್ಕಳು. ನಾಲ್ಕಾರು ವರ್ಷ ಹಾಯಸ್ಕೂಲಿನಲ್ಲಿ ನಿಂತು ಓದಿ, ಅರ್ಧಕ್ಕೆ ಬಿಟ್ಟು ಮನೆಗೆ ಬಂದ ತರುಣನಾತ. ಆದರೆ ಊರ ಯಾವ ಸಾರ್ವಜನಿಕ ಚಟುವಟಿಕೆಗಳಲ್ಲೂ ಇನ್ನೂ ಮನಸ್ಸು ಹಾಕದೆ ತನ್ನಷ್ಟಕ್ಕೆ ತಾನು ಉಂಡು ತಿರುಗಾಡಿ ಇದ್ದ. ಗೌಡರ ಮಗನೆಂದು ಊರ ಜನರಲ್ಲಿ ಅವನ ವಿಷಯಕ್ಕೆ ಆದರ ಕಂಡು ಬರುತ್ತಿದ್ದಿತು. ಇಂಥ ವ್ಯಕ್ತಿಯೇ ತನಗೆ ಸಹಾಯಕನಾಗಬಹುದೆಂದು ಶ್ರೇಯಾಂಸ ಹಲವು ದಿನಗಳಿಂದ ಯೋಚಿಸಿದ್ದ. ಅದರಲ್ಲೂ ಗೌಡರ ಸಂಗತಿಯ ಅನುಭವ ಶ್ರೇಯಾಂಸನಿಗೆ ಸಾಕಷ್ಟಿತ್ತು. ಆವರೂ ಹಳ್ಳಿಗಳಲ್ಲಿ ಅವರನ್ನು ಮುಂದೆ ಮಾಡದೆ ಯಾವ ಕಾರ್ಯವನ್ನೂ ಮಾಡಲಾಗದೆಂದು ಶ್ರೇಯಾಂಸ ಚೆನ್ನಾಗಿ ತಿಳಿದಿದ್ದ. ಊರ ಗೌಡ ಸುಧಾರಿಸಿದರೆ ಊರೇ ಸುಧಾರಿಸುವದೆಂದು ಆತ ನಂಬಿದ್ದ. ಅದಕ್ಕಾಗಿ ಇಂದು ಎದುರಿಗೆ ಶಂಕರಗೌಡ ಬಂದ ಒಡನೆಯೇ ಶ್ರೇಯಾಂಸ ನದಿಯ ದಾರಿಯಲ್ಲಿ ತುಂಬಿದ ಕೊಡವನ್ನು ಹೆಗಲ ಮೇಲೆ ಹೊತ್ತುಕೊಂಡು ನಿಂತೇ ಮಾತಿಗೆ ಆರಂಭಿಸಿದ,

"ನಿಮ್ಮಲ್ಲಿ ಏನಾದರೂ ಓದಲಿಕ್ಕೆ ಪುಸ್ತಕಗಳಿವೆಯೇ ?"

"ಇರಬೇಕು ; ನೋಡುವೆ...."

"ಸ್ನಾನಮಾಡಿ ಬಂದ ಮೇಲೆ ನೋಡಿ ಇಡಿರಿ. ನಾನು ಹುಡುಗರನ್ನು ಕಳಿಸುವೆ...."

"ಆಗಲಿ...."

ಎಂದು ಗೌಡರು ನದಿಯ ಕಡೆಗೆ ಸಾಗಿದರು. ಇಬ್ಬರೂ ಒಬ್ಬರನ್ನು ಒಬ್ಬರು ಆ ಕ್ಷಣದಲ್ಲಿ ಅಗಲಿದರೂ ಪ್ರತಿಯೊಬ್ಬರ

ಮನದೆರೆಯ ಮೇಲೆ ಪರಸ್ಪರ ಮೂರ್ತಿಗಳು ಮೂಡಿ ನಿಂತುವು. ಶ್ರೇಯಾಂಸನ ಹೃದಯದಲ್ಲಂತೂ ಶಂಕರಗೌಡನ ಎತ್ತರವಾದ ನಿಲುವು, ಆ ಖಾದಿಯ ಬಟ್ಟೆ, ಗಂಭೀರ ಮುಖಗಳೆಲ್ಲ ಅಚ್ಚೊತ್ತಿ ನಿಂತುವು. ಅವನ ದೃಷ್ಟಿಯಲ್ಲಿ ಇದ್ದ ಸೇವಾಭಾವವಂತೂ ಶ್ರೇಯಾಂಸ ನಲ್ಲಿ ಅನೇಕ ಆಶೆಗಳನ್ನು ಕುದುರಿಸಿತು. ಆ ಆಶೆಗಳಿಂದ ರೂಪು ಗೊಂಡ ಹಲವು ಕನಸುಗಳಲ್ಲಿ ಮಗ್ನನಾಗಿಯೇ ಶ್ರೇಯಾಂಸ ಅಂದಿನ ಮಧ್ಯಾಹ್ನದ ಬಿಡುವನ್ನೆಲ್ಲ ಕಳೆದ. ಊಟದಲ್ಲಿ ಚಿತ್ತವಿರಲಿಲ್ಲ, ಓದಿನಲ್ಲಿ ಮನಸ್ಸಿರಲಿಲ್ಲ. ಏನೋ ಒಂದು ಆವೇಶವು ದೇಹದಲ್ಲಿ ಸೇರಿದಂತಾಗಿದ್ದಿತು. ಅದೇ ಆವೇಶದಲ್ಲಿ ಮನೆಯಲ್ಲಿ ಕೂಡಲಿಕ್ಕಾಗದೆ ಶ್ರೇಯಾಂಸ ಸ್ವಲ್ಪ ಮುಂಚಿತವಾಗಿಯೇ ಸಾಲೆಗೆ ಹೋದ. ತುಸು ತಡೆದು ಗೌಡರ ಮನೆಗೆ ಹುಡುಗರನ್ನು ಕಳಿಸಬೇಕು, ಪುಸ್ತಕಗಳನ್ನು ಕೊಡು ಕೊಳ್ಳುವಿಕೆಯಿಂದ ಶಂಕರಗೌಡನನ್ನು ಹೆಚ್ಚಿಗೆ ಪರಿಚಿತ ನನ್ನಾಗಿ ಮಾಡಿಕೊಂಡು ಮುಂದಿನ ಹಂಚಿಕೆಗಳನ್ನು ಹೂಡಬೇಕೆಂಬ ವಿಚಾರದಲ್ಲಿಯೇ ಸಾಲೆಯಲ್ಲಿ ಕುಳಿತಿದ್ದ ಶ್ರೇಯಾಂಸ. ಇನ್ನೂ ಸಾಕಷ್ಟು ವಿದ್ಯಾರ್ಥಿಗಳೂ ಸಾಲೆಗೆ ಬಂದಿರಲಿಲ್ಲ. ಅಷ್ಟರಲ್ಲಿ ಶಂಕರ ಗೌಡನೇ ಕೈಯಲ್ಲೊಂದು ಚಿಕ್ಕ ಪುಸ್ತಕವನ್ನು ಹಿಡಿದುಕೊಂಡು ಸಾಲೆಯಲ್ಲಿ ಪ್ರವೇಶಿಸಿದನು.

ಇದು ಶ್ರೇಯಾಂಸನಿಗೆ ಅನಿರೀಕ್ಷಿತ ಪ್ರಸಂಗವಾಗಿದ್ದಿತು. ಆದರಿಂದ ಗಡಬಡಿಸಿ ಎದ್ದು ಗೌಡನಿಗೆ ಆಸನವನ್ನು ಕೂಡಲಿಕ್ಕೆ ಕೊಟ್ಟ. ಶಂಕರಗೌಡನು ಅಲ್ಲಿ ಕೂಡದೆ ಶ್ರೇಯಾಂಸನನ್ನೇ ಒತ್ತಾಯ ದಿಂದ ತಿರುಗಿ ಕೂಡಿಸುತ್ತ ಎಂದ,

"ನಾನು ಈಗ ಹೋಗುವೆ. ನಿಮ್ಮ ಕೆಲಸದಲ್ಲೇಕೆ ಸುಮ್ಮನೆ ವ್ಯತ್ಯಯ ?"

"ಇರಲಿ ; ಕೂಡಿರೆಲ್ಲ....!"

ಎಂದು ಹೇಳಿ, ಶ್ರೇಯಾಂಸ ಇನ್ನೊಂದು ಕುರ್ಚಿಯನ್ನು ತರಿಸಿ

ಹಾಕಿಸಿದ. ಇಬ್ಬರೂ ಕುಳಿತರು. ಸ್ವಲ್ಪ ಹೊತ್ತು ಮೌನದಲ್ಲಿಯೇ ಉರುಳಿತು. ಆಮೇಲೆ ಗೌಡನೇ ಮಾತಿಗೆ ಆರಂಭಿಸಿದ.

"ಇದೇನೋ ಸಣ್ಣ ಪುಸ್ತಕ, ಪಾಟೀಲ ಕಲ್ಲನಗೌಡರು ಬರೆದ 'ಸತ್ಯಾಗ್ರಹ' ಅಂತ ಇದೆ. ನೋಡಿದರೆ ಒಂದು ತಾಸಿನಲ್ಲಿ ಓದಿ ಮುಗಿಸಿ ಬಿಡಬಹುದೇನೋ ಎನ್ನಿಸುತ್ತಿದೆ. ಆದರೆ ಓದಿ ಒಗೆಯುವ ಪುಸ್ತಕವಲ್ಲ ನೋಡಿರಿ! ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ತೇಯ, ಅಪರಿಗ್ರಹ ಇವೆಲ್ಲ ಓದಿ ಬಿಡುವ ಪದಗಳಲ್ಲವಷ್ಟೆ? ಹಲವು ಪುಸ್ತಕಗಳನ್ನು ಓದುವದಕ್ಕಿಂತ ಇದೊಂದೇ ಪುಸ್ತಕದ ಅರ್ಥವನ್ನು ತಿಳಿದುಕೊಂಡು ಬಾಳಿದರೆ ಸಾಕೆನ್ನುವೆ ನಾನು."

ಎಂದು ಸಣ್ಣ ಪುಸ್ತಕವೊಂದನ್ನು ಶ್ರೇಯಾಂಸನ ಕೈಯಲ್ಲಿ ಕೊಟ್ಟು ಎದ್ದನು.

"ಏಕೆ ಇಷ್ಟು ಅವಸರ?"

ಪುಸ್ತಕವನ್ನು ಸ್ವೀಕರಿಸುತ್ತಲೇ ಶ್ರೇಯಾಂಸ ಕೇಳಿದ.

"ನಾಗಲಿ ಅಲ್ಲ, ನಿಮ್ಮ ವಿಷಯ!"

ಎಂದು ಗೌಡ ವಿದ್ಯಾರ್ಥಿಗಳ ಮುಖದ ಕಡೆಗೆ ಹೊರಳಿ ನೋಡಿದ.

"ಇನ್ನೂ ಅವಕಾಶವಿದೆ ಕೂಡಿರಿ. ಎಲ್ಲ ಹುಡುಗರೆಲ್ಲಿ ಬಂದಿದಾರೆ?"

ಎಂದು ಶ್ರೇಯಾಂಸ ಶಂಕರಗೌಡನನ್ನು ಕೂಡಿಸಿಕೊಂಡ. ಆಮೇಲೆ ಇಬ್ಬರಲ್ಲಿಯೂ ಹಲವು ಮಾತುಕತೆಗಳು ನಡೆದವು. ಅದರಿಂದ ಶಂಕರಗೌಡನಿಗೆ ಓದುವ ಅಭಿರುಚಿಯೂ ಸಾಮಾಜಿಕ ಕಾರ್ಯಗಳಲ್ಲಿ ಆಸಕ್ತಿಯೂ ಇರುವಂತೆ ಶ್ರೇಯಾಂಸನಿಗೆ ಕಂಡು ಬಂತು. ಸಾಹಿತ್ಯದ ಕಡೆಗೆ ಒಲವೂ ಇರುವಂತೆ ತೋರಿತು.

ಕೆಲ ದಿನಗಳಲ್ಲಿ ಇಬ್ಬರಲ್ಲಿಯೂ ಬಿಟ್ಟರೂ ಬಿಡದಂತಹ ಸ್ನೇಹವು ಬೆಳೆಯಿತು. ದಿನಾಲು ಮಧ್ಯಾಹ್ನ ಊಟವಾದೊಡನೆಯೇ ಶಂಕರ

ಗೌಡನ ಸ್ವಾರಿಯು ಶ್ರೇಯಾಂಸನ ಮನೆಗೆ ಬರಹತ್ತಿತು. ಸಾಯಂಕಾಲ ಸಾಲೆ ಬಿಟ್ಟೊಡನೆಯೇ ಇಬ್ಬರೂ ಸೇರಿ ಅಡ್ಡಾಡಲಿಕ್ಕೆ ಹೋಗ ಹತ್ತಿದರು. ಬೆಳಗಿನಲ್ಲಿ ಸ್ನಾನಕ್ಕೆಂದು ನದಿಯಲ್ಲಿ ಕೂಡುವರು. ಹೀಗೆ ದಿನದ ಬಹು ಭಾಗವನ್ನೆಲ್ಲ ಗೆಳೆಯರಿಬ್ಬರೂ ಸೇರಿಯೇ ಕಳೆಯು ತ್ತಿದ್ದರು. ಆಗ ಅನೇಕ ವಿಷಯಗಳನ್ನು ಚರ್ಚಿಸುತ್ತಲೂ ಇದ್ದರು. ಅದರಿಂದ ಇಬ್ಬರ ಮನಸ್ಸೂ ಹಗುರಾಗುತ್ತಿದ್ದಿತು, ವಿಕಾಸಗೊಳ್ಳು ತ್ತಿದ್ದಿತು.

ಹೀಗಿದ್ದರೂ ಇಬ್ಬರ ಅಭ್ಯಾಸ ಅನುಭವಗಳಲ್ಲಿ ಮಹದಂತರ ವಿತ್ತು. ಇದೀಗ ಶ್ರೇಯಾಂಸ ರವಿಷೇಣಾಚಾರ್ಯರ 'ಪದ್ಮ ಪುರಾಣ' ವನ್ನು ಅಭ್ಯಾಸಕ್ಕೆ ತಕ್ಕೊಂಡಿದ್ದ. ಅದನ್ನು ದಿನಾಲು ಬೆಳಗಿನಲ್ಲಿ ಎದ್ದು ಓದುವನು. ಮಧ್ಯಾಹ್ನ ಶಂಕರಗೌಡನಿಗೆ ತಾನು ಓದಿದ ವಿಷಯವನ್ನು ವಿವರಿಸುವನು. ಈ ಜೈನ ರಾಮಾಯಣದ ವಿಷಯವೇ ಗೌಡನಿಗೆ ಹೊಸದು. ವಾಲ್ಮೀಕಿಯ ರಾಮಾಯಣ ಒಂದನ್ನೇ ಕೇಳಿದ ಅವನಿಗೆ ಮೊದಲು ಈ ರಾಮಾಯಣದ ಕತೆಯೇ ಮನಸ್ಸಿಗೆ ಹತ್ತದು. ಆದರೂ ಶ್ರೇಯಾಂಸ ಅವನನ್ನು ಬಿಡುತ್ತಿರಲಿಲ್ಲ. ರವಿಷೇಣನು ಚಿತ್ರಿಸಿರುವ ರಾವಣನ ಪಾತ್ರವನ್ನು ಅವನ ಕಣ್ಣಮುಂದೆ ಕಟ್ಟುವಂತೆ ಹೇಳುವನು. ಮಾನವನ ಸ್ವಭಾವವನ್ನು ಚಿತ್ರಿಸುವಲ್ಲಿ ವಾಲ್ಮೀಕಿ ಗಿಂತ ರವಿಷೇಣನು ತೋರಿಸಿರುವ ಜಾಣ್ಮೆಯನ್ನು ಎತ್ತಿ ತೋರಿಸು ವನು. ಆದರೂ ಗೌಡನಿಗೆ ಹಳೆಯ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟದು.

"ಸುಮ್ಮನೆ ಹಳೆಯದನ್ನು ಓದಿ ಏನು ಮಾಡುವುದು ?" ಎನ್ನುವ.

"ಹಾಗೆಂದರೆ ಹೇಗೆ ?"

"ಏನಾದರೂ ಹೊಸ ವಿಚಾರವಿದ್ದರೆ ಹೇಳಿರಿ ! ಏನಾದರೊಂದು ಸಾವಿರ ವರ್ಷದ ಹಿಂದಿನ ಪುಸ್ತಕ ಓದುತ್ತ ಕುಳಿತರೆ ಏನು ಬಂತು ?"

"ಇಲ್ಲ; ಅದೂ ಉಪಯೋಗವಿದೆ...."

"ಏತಕ್ಕೆ ? ನಿಮ್ಮ ಪಾಂಡಿತ್ಯ ಪ್ರದರ್ಶಿಸಲಿಕ್ಕೆ ! ಅದೇನು

ಜನಕ್ಕೆ ನಾಳಿನ ಬದುಕಿನ ದಾರಿ ತೋರಿಸುವುದೇ ?"

"ಬದುಕಿನ ದಾರಿಯನ್ನು ತೋರುವದಲ್ಲಿದೆ ಆದರ್ಶವನ್ನು ತೋರುವುದು. ಸತ್ಯ, ಅಹಿಂಸೆ, ಬ್ರಹ್ಮಚರ್ಯ ಎನ್ನುವಿರಿ. ನಾಣ್ಯಗಳಂತೆ ಮಾತುಮಾತಿಗೆ ಶಬ್ದಗಳನ್ನು ಬಳಸುವಿರಿ. ಆದರೆ ಅವುಗಳನ್ನು ಆಚರಿಸಿದವರ ಚರಿತ್ರೆಗಳನ್ನು ತಿಳಿದುಕೊಳ್ಳಲಿಕ್ಕೆ ಬೇಡವೆ? ಅವರಿಂದ ಇಂದು ಪಾಠ ಕಲಿತುಕೊಳ್ಳುವಂತಹದಿಲ್ಲವೇ? ರಾವಣನ 'ಪರಾಂಗದಾ ವಿರತಿ' ವ್ರತ ಎಂಥದು ? ನಲಕೂಬರನ ಹೆಂಡತಿಯಾದ ಉಪರಂಭೆಗೆ ಅವನು ಹೇಳಿದ ಮಾತು ಎಂಥ ಉಜ್ವಲವಾದುದು ? ಅದೆಂಥ ಗಂಭೀರ ಸನ್ನಿವೇಶ.....! ಇವೆಲ್ಲ ನಮ್ಮ ಇಂದಿನ ಬಾಳಿಗೆ ಬೇಡವೇ ?"

"ಅದೆಲ್ಲವನ್ನೂ ಸಾವಧಾನವಾಗಿ ವಿಚಾರಿಸಲಿಕ್ಕೆ ಇಂದೆಲ್ಲಿ ನಮಗೆ ಅವಕಾಶವಿದೆ ?"

"ಅಹಃ ! ಹಃ ! ಅಂಥ ಅವಸರದ ಕಾರ್ಯವನ್ನಾದರೂ ನಾವೆಲ್ಲ ಕೈಕೊಂಡಿದ್ದೇವೆ ?"

ಎಂದು ಕಾರ್ಯಪ್ರವೃತ್ತಿಯ ಪ್ರಚೋದನೆಯಲ್ಲಿ ಪರ್ಯವಸಾನವಾಗಿ ಮಾತು ಮುಗಿಯುವುದು. ಊರಲ್ಲಿ ಏನಾದರೂ ಜನಹಿತದ ಕಾರ್ಯ ಕೈಕೊಳ್ಳಬೇಕೆಂದು ಶಂಕರಗೌಡನೇನೋ ಹಲವು ಸಲ ವಿಚಾರಿಸುವ. ಆದರೆ ಅಂಥ ಕಾರ್ಯಗಳೇ ಅವನಿಗೆ ಕಾಣುತ್ತಿರಲಿಲ್ಲ. ಶ್ರೇಯಾಂಸನಿಗೇನೋ ಎದುರಿಗೇ ಹಲವು ಕಾರ್ಯಗಳು ಕೈಕಟ್ಟಿಕೊಂಡು ನಿಂತಿದ್ದರೂ 'ಒಮ್ಮೆಲೇ ಧುಮುಕಬೇಡ !' ಎಂದು ಅವನ ಅನುಭವ ಹೇಳುತ್ತಿದ್ದಿತು. ಆ ಕೆಲಸಗಳಿಗಾಗಿ ಶಂಕರಗೌಡನನ್ನೇ ಸಿದ್ಧಗೊಳಿಸಬೇಕಾಗಿತ್ತು. ಆದರಿಂದ ಶಂಕರಗೌಡನ ಸಾಮರ್ಥ್ಯ ನಿಷ್ಠೆಗಳನ್ನು ಇನ್ನಿಷ್ಟು ಒರೆಗೆ ಹಚ್ಚಬೇಕಾಗಿತ್ತು.

ಮುಂದೆ ನಾಲ್ಕೆಂಟು ದಿನಗಳಲ್ಲಿ ಇಪ್ಪತ್ತನೆಯ ವರ್ಷದ ೨೪ನೆಯ ಕರ್ನಾಟಕ ಸಾಹಿತ್ಯ ಸಮ್ಮೇಲನ ಬೆಳಗಾಂವಿಯಲ್ಲಿ ನಡೆಯುವದಿತ್ತು. ಬೆಳಗಾಂವಿಯಲ್ಲಿಯ ಕನ್ನಡದ ಚಳುವಳಿಗಳಲ್ಲೆಲ್ಲಿ ಒಂದು ಹೆಚ್ಚಿನ

ಹುರುಪು ರಭಸಗಳು ಇರುವವು. ಎಲ್ಲಿ ಹೋರಾಟವಿರುವುದೋ ಅಲ್ಲಿ ಜೀವನವಿರುವುದಂತೆ. ಕನ್ನಡದ ಗಂಡು ಮೆಟ್ಟಿನ ಸ್ಥಳವಾದ ಬೆಳಗಾಂವಿಯಲ್ಲಿ ಹೊರಗಿನ ಮಹಾರಾಷ್ಟ್ರಿಗರು ಬಂದು ನೆಲಸಿ, ಬೆಳಗಾಂವಿಯ ಕನ್ನಡತನಕ್ಕೇಸೆ ಕೊಪಲಿಯ ಏಟನ್ನು ಕೊಡುತ್ತಿರುವಾಗ ಜಾಗೃತರಾದ ಕನ್ನಡಿಗರು ಸುಮ್ಮನಿದ್ದಾರೆಯೋ? ಸಾಹಿತ್ಯ ಸಮ್ಮೇಲನವನ್ನು ಕರೆದು, ಕನ್ನಡದ ಧ್ವನಿಯನ್ನು ಗಗನಕ್ಕೆ ಮುಟ್ಟಿಸಿ ಬಿಡುವುದೆಂದು ನಿಶ್ಚಯಿಸಿದ್ದರು. ಸಮ್ಮೇಲನಕ್ಕೆ ಸಿಂಹ ಗರ್ಜನೆಯ ಮುದವೀಡು ಕೃಷ್ಣರಾಯರನ್ನೇ ಅಧ್ಯಕ್ಷರೆಂದು ಆರಿಸಿದ್ದರು. ಸಮ್ಮೇಲನಕ್ಕೆ ಕನ್ನಡದ ಸಿರಿ ಶ್ರೀಕಂಠಯ್ಯ, ಶಾಸ್ತ್ರಿ, ವೆಂಕಟರಾಮಯ್ಯ, ಶ್ರೀರಂಗ, ಆನಂದಕಂದ ಮೊದಲಾದವರೆಲ್ಲ ಬರುವರೆಂದು ಪತ್ರಿಕೆಗಳಲ್ಲಿ ಶ್ರೇಯಾಂಸ ಈಗಾಗಲೇ ಓದಿದ್ದ 'ಜಯಂತಿ' ಪತ್ರಿಕೆಯಂತೂ ಕೃಷ್ಣರಾಯರ ವಾಗ್ವೈಖರಿಯ ಪರಿಚಯವನ್ನು ಈಗಾಗಲೇ ಮಾಡಿ ಕೊಟ್ಟಿದ್ದಿತು. ಮೇಲಾಗಿ ಬೆಳಗಾಂವಿಯ ನಾಗರಿಕರು ಪ್ರಚಾರದ ಪುಂಗಿಯನ್ನು ಊದಿಬಿಟ್ಟಿದ್ದರು! ಅಂದ ಮೇಲೆ ಕೇಳುವದೇನು ಶ್ರೇಯಾಂಸನ ಆತುರಕ್ಕೆ? ಅವಸರದ ಧ್ವನಿಯಲ್ಲಿಯೇ ಶಂಕರ ಗೌಡನಿಗೂ ಕೇಳಿಯೇ ಬಿಟ್ಟ.

"ಬೆಳಗಾಂವಿಯ ಸಮ್ಮೇಲನಕ್ಕೆ ಬರುವಿರಾ?"

"ನೀವು ಹೋಗುವುದನ್ನು ನಿಶ್ಚಯಿಸಿರುವಂತೆ ತೋರುತ್ತದೆ..."

"ಹೌದು, ಹೋಗಬೇಕೆಂದು ಮಾಡಿರುವೆ...."

"ಎಷ್ಟು ಖರ್ಚು ಬಂದೀತು?"

"ಐದು ರೂಪಾಯಿ ಆದರೆ ಸಾಕಲ್ಲ!"

"ಮನೆಯಲ್ಲಿ ಕೇಳಿ ನೋಡುವ...."

"ಕೇಳುವದೇನು ಇದರಲ್ಲಿ?"

"ನೀವೇನು ರಾಜಾ ಇದ್ದೀರಿ....ತಿಂಗಳ ತಿಂಗಳಿಗೆ ಕೈಯಲ್ಲಿ ಸಂಬಳ ಬರುತ್ತದೆ. ಬೇಕಾದ ಹಾಗೆ ಖರ್ಚು ಮಾಡಲಿಕ್ಕೆ ಸ್ವತಂತ್ರ

ರಿದ್ದಿರಿ. ನನಗೆ ಹಾಗಿಲ್ಲ...."

"ನಾನೂ ಹಿರಿಯರಿಗೆ ಗೊತ್ತಿಲ್ಲದೆ....ಐದು ರೂಪಾಯಿ ಉಳಿಸಿರುವೆ...."

"ಊರಿಗೆ ನಡೆಯುತ್ತ ಹೋಗಿ, ಮೋಟಾರಿನಿಂದ ಬಂದೆನೆಂದು ಸುಳ್ಳು ಹೇಳಿ...."

"ಏನಾದರೂ ಮಾಡಬೇಕಲ್ಲಪ್ಪ. ಬೇಕಾದ ಮೇಲೆ...."

"ಹಾಗೇ ನಾನೂ ಏನಾದರೂ ಮಾಡಬೇಕು...."

"ಏನಾದರೂ ಮಾಡು, ಆದರೆ ಬೆಳಗಾಂವಿಗೆ ಹೋಗುವದನ್ನು ನಿಶ್ಚಯ ಮಾಡಿಬಿಡು..."

"ನೋಡುವೆ; ಅದೇ ಯತ್ನದಲ್ಲಿರುವೆ...."

ಶ್ರೇಯಾಂಸನಿಗೆ ಹಿಡಿಸಲಾರದಷ್ಟು ಆನಂದ. ಸಪಿಯೂಟದಲ್ಲಿ ಪಂಕ್ತಿಗೆ ಗೆಳೆಯನೊಬ್ಬ ಇದ್ದಂತಾಯಿತು. ಮೇಲಾಗಿ ಬೆಳಗಾಂವಿ ಅಪರಿಚಿತ ಊರು ತನಗೆ. ಹಿಂದಕ್ಕೆ ಮುಲ್ಕೀ ಪರೀಕ್ಷೆಗೆಂದು ಹೋದ ದಿನ ಬೆಳಗಾಂವಿಯ ಸ್ಮೃತಿಯೇನೋ ಇದ್ದಿತು. ಆದರೆ ಅದರ ಉಪಯೋಗ ಈಗ ಆಗುವಂತಿರಲಿಲ್ಲ. ಅದರಿಂದ ಜೊತೆಗೆ ಗೆಳೆಯನೊಬ್ಬ ಇದ್ದರೆ ಚೆನ್ನಾಗಿತ್ತು. ಇಬ್ಬರೂ ಕೂಡಿ ಎಲ್ಲಿಯಾದರೂ ಇಳಿದುಕೊಳ್ಳಲಿಕ್ಕೆ ಬರುತ್ತದೆ. ಶಾಲಿಮಾರ ಸಿನೇಮಾ ಗೃಹವು ಎಲ್ಲಿದೆಯೋ ಯಾರಿಗೆ ಗೊತ್ತು? ಇಬ್ಬರೂ ಕೂಡಿ ಹುಡುಕಿ ತೆಗೆಯಬಹುದು. ಅಲ್ಲಿಯೇ ಸಮ್ಮೇಲನ ಜರುಗುವದಂತೆ. ಅದೇ ಸಿಕ್ಕದಿದ್ದರೆ ಬೆಳಗಾಂವಿಗೆ ಹೋಗಿ ಉಪಯೋಗವೇನು? ಈ ಮೊದಲಾದ ಸಮಸ್ಯೆಗಳೆಲ್ಲ ಶಂಕರ ಗೌಡನ ಜೊತೆಯಿಂದ ಸುಲಭವಾಗಿ ಬಿಡುವಂತೆ ಶ್ರೇಯಾಂಸನಿಗೆ ತೋರಿತು. ಅದರಿಂದ ಗೌಡನಿಗೆ ಸಮ್ಮೇಲನಕ್ಕೆ ಹೊರಡುವಂತೆ ಆಗಾಗ ಶ್ರೇಯಾಂಸ ಒತ್ತಾಯ ಮಾಡತೊಡಗಿದನು.

೨೩

ಮಧ್ಯಾಹ್ನದ ನಾಲ್ಕು ಗಂಟೆಯ ಸಮಯವಾಗಿರಬೇಕು. ಶ್ರೇಯಾಂಸ ಸಾಲೆಯಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುವುದರಲ್ಲಿ ತನ್ಮಯನಾಗಿದ್ದಾನೆ. ಅಷ್ಟರಲ್ಲಿ ವಿದ್ಯಾರ್ಥಿಗಳ ಗುಂಪೊಂದು ಸಾಲೆಯಲ್ಲಿ ಉತ್ಸಾಹದಿಂದಲೇ ಪ್ರವೇಶಿಸಿತು. ಆದರೆ ಶಿಕ್ಷಕರು ವಿಷಯದ ವಿವರಣೆಯಲ್ಲಿ ಮೈಮರೆತುದನ್ನು ಕಂಡು ಒಂದು ಕ್ಷಣ ಆ ವಿದ್ಯಾರ್ಥಿಗಳೂ ಸುಮ್ಮನುಳಿದರು. ಹೀಗೆ ಸುಮ್ಮನುಳಿದರೆ ತಾವು ಕೈಕೊಂಡ ಕಾರ್ಯ ನೆರವೇರದೆಂದು ತಿಳಿದು ದಿಟ್ಟ ಹುಡುಗನೊಬ್ಬ ಮುಂದಾಗಿ ನುಡಿದ,

"ನಿಮ್ಮ ಕಡೆಗೆ ಯಾರೋ ಬಂದಾರರಿ ?"

ಶ್ರೇಯಾಂಸ ಹೊಸಗನ್ನಡ ಕವನ ಒಂದರ ಅರ್ಥ ವಿವರಿಸುತ್ತಿದ್ದ. ಕವಿಯ ಭಾವ, ಕಲ್ಪನೆಗಳಿಗೆ ಅವನ ಮನಸ್ಸು ಮಾರು ಹೋಗಿತ್ತು. ಹೊರಗಿನ ಪ್ರಪಂಚದ ಅರಿವು ಕೂಡಲೇ ಆಗುವಂತಿರಲಿಲ್ಲ. ಆ ಮಧುರ ಭಾವಸಮಾಧಿಯಿಂದ ಇಳಿದು ಕೇಳಲಿಕ್ಕೆ ತುಸು ಅವಕಾಶವೇ ಹಿಡಿಯಿತು.

"ಎಲ್ಲಿದ್ದಾರೆ ?"

ಶ್ರೇಯಾಂಸ ಹೀಗೆ ವಿದ್ಯಾರ್ಥಿಗಳಿಗೆ ಕೇಳಲಿಕ್ಕೂ ಬಾಳಪ್ಪ ವರ್ಗದಲ್ಲಿ ಪ್ರವೇಶಿಸಲಿಕ್ಕೂ ವೇಳೆ ಕೂಡಿ ಬಂತು. ತನ್ನ ತಂದೆಯು ಯಾವ ಸೂಚನೆಯೂ ಇಲ್ಲದೆ ಒಮ್ಮೆಲೇ ಬಂದುದಕ್ಕೆ ಶ್ರೇಯಾಂಸನಿಗೆ ಆಶ್ಚರ್ಯವಾಯಿತು. ಅದರೊಡನೆ ಹೆದರಿಕೆಯೂ ಉಂಟಾಯಿತು. ಅದರಿಂದ ಆತುರದಿಂದಲೇ ಕೇಳಿದ,

"ಮನೆಯಲ್ಲಿ ಎಲ್ಲರೂ ನೆಟ್ಟಗಿದ್ದಾರೆಯೇ?"

ಮರುಕ್ಷಣದಲ್ಲಿಯೇ ತಂದೆಯ ಉತ್ಸಾಹ ಆನಂದಗಳನ್ನು ಕಂಡರೆ ತಾನು ಗಾಬರಿಯಾಗಲಿಕ್ಕೆ ಅವಕಾಶವಿರಲಿಲ್ಲವೆಂಬುದು ಶ್ರೇಯಾಂಸನಿಗೇ ಹೊಳೆದು, ತನ್ನ ತಂದೆಯನ್ನು ಒಯ್ದು, ತಾನು ಕೂಡುತಿದ್ದ ಸ್ಟೂಲಿನಮೇಲೆ ಕೂಡಿಸಿದ. ಬಾಳಪ್ಪ ಸುತ್ತಲೂ ನೀರೀಕ್ಷಿಸಿದ. ಶ್ರೇಯಾಂಸನು ಕೂಡುತ್ತಿದ್ದ ಸಾಲೆಯ ಸ್ವತಂತ್ರ ಕೋಣೆಯದು ಬಾಡಿಗೆಯಿಂದ ತಕ್ಕೊಂಡದ್ದು. ಮುಖ್ಯ ಸಾಲೆಗೂ ಅದಕ್ಕೂ ದೂರ ವಿದ್ದಿತು. ಅಲ್ಲದೆ ಅದು ಊರೊಳಗಿನ ಹಳೆಯ ಮನೆಯೊಂದಾದುದರಿಂದ ಅಷ್ಟು ಸಿಸ್ತು ಇರಲಿಲ್ಲ. ಇದೆಲ್ಲ ಬಾಳಪ್ಪನಿಗೆ ಸೇರಲಿಲ್ಲ. ತಾನು ಯಾವ ಮಟ್ಟದಲ್ಲಿ ಮಗನ ಸಾಲೆ, ಇರುವುಗಳನ್ನು ಕಲ್ಪಿಸಿಕೊಂಡು ಬಂದನೋ ಹಾಗೆ ಅವನಿಗೆ ಇಲ್ಲಿ ಕಾಣಲಿಲ್ಲ. ಆದರಿಂದ ಸ್ವಲ್ಪ ಅಸಮಾಧಾನವೂ ಆಯಿತು.

"ಯಾಕೆ, ನಿನಗೆ ಕುರ್ಚಿ ಇಲ್ಲ?" ಬಾಳಪ್ಪ ಕೇಳಿದ.

"ಸಾಲೆಯಲ್ಲಿ ಎಲ್ಲರಿಗೂ ಸಾಲುವಷ್ಟು ಕುರ್ಚಿಗಳೇ ಇಲ್ಲ...... ಹೇಗಾದರೂ ಸಾಗಿಸಿಕೊಂಡು ಹೋಗುವುದು ...... ಆದರಲ್ಲೇನು ಮುಖ್ಯ......? ಶಿಕ್ಷಣದ ಕೆಲಸ ಸಾಗಿದರೆ ಆಯಿತು__"

"ಕಲಿಸುವುದಂತೂ ಇದ್ದೇ ಇದೆಯಲ್ಲ. ಕೂಡಲಿಕ್ಕೆ ಒಳ್ಳೆಯ ಕುರ್ಚಿಯೂ ಬೇಡವೇ? ನೀನೂ ಅಳುಬುರುಕ. ಸುಮ್ಮನೆ ಕೂಡುವಿ. ನಿನ್ನ ಹಕ್ಕನ್ನು ಬಿಟ್ಟುಬಿಡುವಿ. ಉಳಿದ ಮಾಸ್ತರರೂ ಹೀಗೆ ಸ್ಟೂಲಿನ ಮೇಲೆಯೇ ಕೂತು ಕಲಿಸುವರೇ?"

ತಂದೆಯ ಈ ಮಾತುಗಳಿಂದ ಶ್ರೇಯಾಂಸನಿಗೆ ಸ್ವಲ್ಪ ನಾಚಿಕೆಯುಂಟಾದಂತಾಯಿತು. ವಿದ್ಯಾರ್ಥಿಗಳ ಎದುರಿನಲ್ಲಿ ಇದೆಂಥ ಮಾತುಗಳು ಎಂದು ಒಳಗೊಳಗೇ ಕೊರಗತೊಡಗಿದ. ಆದರೆ ವಿದ್ಯಾರ್ಥಿಗಳು ಮಾತ್ರ ಈ ಮಾತಿನಿಂದ ಹುರುಪುಗೊಂಡಿದ್ದರು. ತಮ್ಮ ನಚ್ಚಿನ ಗುರುಗಳು ಸ್ಟೂಲಿನ ಮೇಲೆ ಕೂಡುತ್ತಿದ್ದುದು ಅವರಿಗೆ ಮೊದಲಿ

ನಿಂದಲೂ ಸೇರುತ್ತಿರಲಿಲ್ಲ. ಅದರಿಂದ ಅವರು ಹುರುಪಿನಿಂದಲೇ ಕೇಳಿದರು :

"ನಾಳೆ ಆ ಸಾಲೆಯಿಂದ ಕುರ್ಚಿಯನ್ನು ತರೋಣವೇ ?"

ಶ್ರೇಯಾಂಸ ವಿದ್ಯಾರ್ಥಿಗಳನ್ನು ಸುಮ್ಮನಾಗಿಸಿ, ತಂದೆಯ ಮಾತನ್ನು ಬೇರೆ ವಿಷಯದತ್ತ ಹೊರಳಿಸಬೇಕಾಯಿತು.

"ಈಗ ಬಂದಿರಿ ?"

ಮಗನ ಮಾತಿಗೆ ಉತ್ತರ ಕೊಡಲಿಕ್ಕೆಂದು ಮೇಜಿನ ಮೇಲೆ ಇಟ್ಟ ತನ್ನ ಗಂಟನ್ನು ಬಿಚ್ಚತೊಡಗಿದ ಬಾಳಪ್ಪ. ರೇಶಿಮೆಯ ಅಗಲಂಚಿನ ಧೋತರದಲ್ಲಿ ಏನನ್ನೋ ಬಹಳಷ್ಟು ಸಾಮಾನುಗಳನ್ನು ಕಟ್ಟಿ ತಂದಂತಿತ್ತು. ಅದನ್ನೆಲ್ಲ ಸಾಲೆಯಲ್ಲಿ ಹರವುತ್ತ ಕೂಡುವುದು ಶ್ರೇಯಾಂಸನಿಗೆ ಸರಿ ಕಾಣಲಿಲ್ಲ.

"ಈಗ ಹೆಡ್ ಮಾಸ್ತರರಿಗೆ ಹೇಳಿ, ಮನೆಯ ಕಡೆಗೇ ಹೋಗೋಣಲ್ಲ....!"

ಎಂದು ತಂದೆಯ ಉತ್ತರ ಬರುವ ಮೊದಲೇ ಅಲ್ಲಿಂದ ಶ್ರೇಯಾಂಸ ನುಸುಳಿದ.

ಗುರುಗಳು ಅಲ್ಲಿಂದ ಕಣ್ಮರೆಯಾದೊಡನೆಯೇ ವಿದ್ಯಾರ್ಥಿಗಳ ಉತ್ಸಾಹಕ್ಕೆ ಉಕ್ಕೇರಿತು. ಎಲ್ಲರೂ ಬಾಳಪ್ಪನ ಸುತ್ತ ನೆರೆದರು. ಬಾಳಪ್ಪ ಹಾಕಿಕೊಂಡ ದೊಡ್ಡ ಕೋಟು, ಚುಂಗ ಬಿಟ್ಟು ಥಾಟಾಗಿ ಸುತ್ತಿದ ಜರದ ರುಮಾಲುಗಳನ್ನು ಅವರು ಕೌತುಕದಿಂದ ಆಗಿನಿಂದಲೂ ಕಾಣುತ್ತಿದ್ದರು. ಈಗ ಅದನ್ನೆಲ್ಲ ಆಡಿ ತೋರಿಸಲು ಅವರಿಗೆ ಅವಕಾಶ ಸಿಕ್ಕಿತು. ಬಾಳಪ್ಪನ ಸುತ್ತಲೂ ನೆರೆದು ಗುಜುಗುಜು ಮಾತಿಗೆ ಆರಂಭಿಸಿದರು.

"ಅಜ್ಜಾ, ಯಾವ ಊರಿಂದ ಬಂದಿರಿ ಈಗ ?"

ಅದರಲ್ಲೂ ದಿಟ್ಟ ಹುಡುಗನೊಬ್ಬ ಕೇಳಿದ.

"ಮತ್ತೆಲ್ಲಿಂದ ಬರತಾರೋ ? ಮಾಸ್ತರರ ಊರಿಂದಲೇ

ಬಂದಾರಲ್ಲ."

ಇನ್ನೊಬ್ಬ ಹುಡುಗ ಹೇಳಿದ.

"ಕೋಟು ಜರದ ರುಮಾಲು ನೋಡಿ ಕೇಳತಾನ ಬಿಡು...... ಅವ......"

ಎಂದು ಇನ್ನೊಬ್ಬ ಆ ಹುಡುಗನ ಪ್ರಶ್ನೆಯಲ್ಲಿ ತನ್ನ ಭಾವವನ್ನು ಆರೋಪಿಸುತ್ತ ನುಡಿದ.

ಹುಡುಗರ ಈ ಮಾತುಗಳಿಂದ ಬಾಳಪ್ಪನ ಮನಸ್ಸು ಸ್ವಲ್ಪ ಅಳುಕಿತು. ಆದರೂ ಅವರು ತೋರಿಸುತ್ತಿರುವ ಆದರಭಾವನೆಯಿಂದ ಮನಸ್ಸು ಅರಳಿತ್ತು. ಅದರಿಂದಲೇ ಅವನ ಬಾಯಿಂದ ಮಕ್ಕಳನ್ನು ಉದ್ದೇಶಿಸಿ ಮಾತು ಹೊರಬಿತ್ತು.

"ಯಾವ ವರ್ಗದವರು ನೀವಪ್ಪ ?"

"ಐದನೆಯ ಇಯತ್ತೆ ಮತ್ತು ಮೂರನೆಯ ಇಯತ್ತೆ......"

"ಹಂ ! ಇದರೊಳಗೇ ಎರಡು ವರ್ಗದವರು ಇದ್ದೀರೋ......?"

"ಹೂಂ !"

"ಎಲ್ಲಾರೂ ನಮ್ಮ ಶ್ರೇಯಾಂಸನ ಕಡೆಗೇ ಇದ್ದೀರಾ ?"

"ಹೌದರಿ ; ಶ್ರೇಯಾಂಸ ಮಾಸ್ತರರ ಕಡೆಗೇ ಇದ್ದೇವರಿ......!"

ಹುಡುಗರಲ್ಲಿ ಪಿಸಿಪಿಸಿ ನಗೆಯೊಂದು ಹಬ್ಬಿತು. ಅದನ್ನು ಗಮನಿಸದೆ ಬಾಳಪ್ಪ ಕೇಳಿದ,

"ಅಲ್ಲಪಾ, ನಿಮ್ಮ ಮಳಿಗೆಯೊಳಗೆ ಕುಂಬಳಕಾಯಿ ಅವನೋ ಇಲ್ಲೊ ?"

"ಬೇಕಾದಷ್ಟು ಅವ ಅಲ್ಲರಿ !"

"ಹಾಗಾದರೆ ನಿಮ್ಮ ಮಾಸ್ತರರಿಗೆ ಒಂದೆರಡು ತಂದುಕೊಡಿರಿ ಅಲ್ಲ......!"

"ನಾಳಿನ ತನಕ ಇರುವಿರೇನು ನೀವು ?"

ಇಷ್ಟರಲ್ಲಿ ಶ್ರೇಯಾಂಸ ಮುಖ್ಯಾಧ್ಯಾಪಕರಿಗೆ ಹೇಳಿ, ಮನೆಗೆ

ಹೋಗಲಿಕ್ಕೆ ಅಪ್ಪಣೆ ಪಡೆದುಕೊಂಡು ಬಂದ. ಮಾಸ್ತರರು ಬಂದುದನ್ನು ಕಂಡು ಮಕ್ಕಳೆಲ್ಲರೂ ಓಡಿಹೋಗಿ ತಮ್ಮ ತಮ್ಮ ಸ್ಥಳ ಗಳಲ್ಲಿ ಕುಳಿತರು. ಅವರಿಗೊಂದು ಕೆಲಸವನ್ನು ಕೊಟ್ಟು, ಶ್ರೇಯಾಂಸ ತಂದೆಯನ್ನು ಕರೆದುಕೊಂಡು, ಮನೆಯ ಕಡೆಗೆ ನಡೆದ. ಬಾಳಪ್ಪನ ಗಂಟನ್ನು ಹೊತ್ತುಕೊಂಡು ಹುಡುಗನೊಬ್ಬ ಮುಂದೆ ನಡೆದ.

ತಂದೆ ಮಕ್ಕಳಿಬ್ಬರೂ ಮನೆಯ ಕಡೆಗೆ ನಡೆದರು. ಇಳಿಹೊತ್ತಿನ ಸಮಯ. ಸುಗ್ಗಿಯ ದಿನಗಳಾದುದರಿಂದ ಓಣಿಯಲ್ಲಿ ಜನರು ಯಾರೂ ಇರಲಿಲ್ಲ. ವಿದ್ಯಾರ್ಥಿಯು ಗಂಟನ್ನು ಹೊತ್ತುಕೊಂಡು ಹತ್ತೆಂಟು ಹೆಜ್ಜೆ ದೂರದಲ್ಲಿ ಮುಂದೆ ನಡೆದಿದ್ದ. ಬಾಳಪ್ಪ ಹಿಂದೊಮ್ಮೆ ಹೊರಳಿ ನೋಡಿದ. ತಮ್ಮ ನೆರಳುಗಳಷ್ಟೇ ತಮ್ಮನ್ನು ಹಿಂಬಾಲಿಸಿರುವಂತೆ ತೋರಿತು. ತುಸು ದೂರ ಹೋದಮೇಲೆ ಬಾಳಪ್ಪ ಅಂದ,

"ಶ್ರೇಯಾಂಸ......" ಧ್ವನಿಯಲ್ಲಿ ಆತುರತೆ ಇತ್ತು.

ಶ್ರೇಯಾಂಸ ಹೊರಳಿ ತಂದೆಯ ಕಡೆಗೆ ನೋಡಿದ. ಕೂಡಲೆ ಬಾಳಪ್ಪ ತನ್ನ ಕೋಟಿನ ಜೇಬಿನೊಳಗಿನ ಪುಡಿಯೊಂದನ್ನು ತೆಗೆದು ಶ್ರೇಯಾಂಸನ ಕೈಗೆ ಕೊಡಹತ್ತಿದ.

"ಏನದು ?" ಬೆರಗಿನಿಂದ ಕೇಳಿದ ಶ್ರೇಯಾಂಸ......

"ಏನದ ನೋಡಲ್ಲ......ಬಿಚ್ಚಿ !"

ಶ್ರೇಯಾಂಸ ಕಾಗದದ ಪುಡಿಯನ್ನು ಬಿಚ್ಚಿನೋಡಿದ. ಅದರಲ್ಲಿ ಸ್ವಲ್ಪ ಸಕ್ಕರೆ ಇತ್ತು. ಅದರಿಂದ ವಿಶೇಷವೇನೂ ಅರ್ಥ ಹೊರಡಲಿಲ್ಲ ಅವನಿಗೆ. ಸಾಯಂಕಾಲಕ್ಕೆ ತಂದೆಯ ಊಟದ ವ್ಯವಸ್ಥೆ ಏನೇನು ಮಾಡಬೇಕೆಂಬುದರಲ್ಲಿಯೇ ಮನಸ್ಸು ತೊಡಗಿಸಿದ್ದನಾತ. ಮರುದಿನ ಮುಂಜಾನೆ ತಂದೆಯು ಬೇಗನೇ ಊರಿಗೆ ಮರಳಿದರೆ ತನಗೆ ಮಧ್ಯಾಹ್ನದ ಮೋಟಾರಿಗೆ ಬೆಳಗಾಂವಿಯ ಸಾಹಿತ್ಯ ಸಮ್ಮೇಲನಕ್ಕೆ ಹೋಗಲು ಅನುಕೂಲವಾಗುವದೆಂದೂ ಆತ ಲೆಕ್ಕ ಹಾಕುತ್ತಿದ್ದ.

ಸಕ್ಕರೆಯನ್ನು ಕಂಡಕೂಡಲೆ ಮಗನ ಮುಖಭಾವದಲ್ಲಿ ಹೆಚ್ಚು

ಕಡಿಮೆ ಏನೂ ಆಗದುದನ್ನು ಕಂಡು ಬಾಳಪ್ಪನೇ ವಿವರಿಸತೊಡಗಿದ,

"ಲಕ್ಷ್ಮಿ ಮೈನೆರೆದು ಐದಾರು ದಿನಗಳಾದುವು ...... ಬರುವ ಗುರುವಾರವೇ ಉಡಿಯನ್ನು ತುಂಬುವುದು ...... ನಿನಗೆ ಎರಡು ದಿನಗಳ ಮಟ್ಟಿಗೆ ರಜೆ ಸಿಕ್ಕೀತಲ್ಲ...... !"

"ಇಷ್ಟೇನು ಅವಸರ ...?"

ಬೇಸರದಿಂದಲೇ ಶ್ರೇಯಾಂಸ ಕೇಳಿದ :

"ಏನು ಹುಚ್ಚಪ್ಪ ನೀನು......! ಒಮ್ಮೆ ಹುಡುಗಿಯನ್ನು ನಮ್ಮ ಮನೆಗೆ ಕರೆದು ತಂದೆವೆಂದರೆ ತಿರುಗಿ ಅವರೇನು ಉಡಿ ತುಂಬುವವರೇ. ಇದರೊಳಗೇ ಎಂಥ ಬಲಿ ಬೀಸಿದ್ದರನ್ನುವಿ ನೀನು ?" ಸ್ವಲ್ಪ ದನಿ ಬದಲಿಸಿ ಬಾಳಪ್ಪ ಮಾತನ್ನು ಮುಂದರಿಸಿದ....."ಸುಗ್ಗಿಯ ದಿವಸ, ಪೋರಿಯನ್ನು ಕರೆಯಲಿಕ್ಕೆ ಬರುತ್ತೇವೆಂದು ಹೇಳಿ ಕಳಿಸಿದ್ದೆವು.... ಅದರಂತೆ ಬಂಡಿಯನ್ನೂ ತಕ್ಕೊಂಡು ಹೋಗಿದ್ದೆ. ಅಷ್ಟರಲ್ಲಿ ಪೋರಿ ನೆರೆದು ಐದು ದಿನಗಳಾಗಿತ್ತು ಹೇಳಿ ಕಳುಹಿಸಬಾರದೇ ನಮಗೇ ? ಮುಚ್ಚಲಿಕ್ಕೆ ಯತ್ನಿಸುತ್ತಿದ್ದರು ! ಮೊದಲೇ ಚಿೋಟುದ್ದ ಪೋರಿ; ಬಾಳೆಯಂತೆ ಬೆಳೆದು ಬರಲಿಲ್ಲ .... ಸಂಗಡದ ಹುಡಿಗೆಯರೆಲ್ಲ.... ಮೈ ನೆರೆದು ಎರಡೆರಡು ಮಕ್ಕಳನ್ನು ಹಡೆದರು.... ಇದಿನ್ನೂ ಅಲ್ಲೇ ನೆಲದೊಳಗೇ ಕೂತಿದೆ. ಈಗ ನೆರೆದರೆ ಅದನ್ನೂ ಹಡೆದವರು ಮುಚ್ಚ ಲಿಕ್ಕೆ ನೋಡುವರು.... ಏನು ? ಇದನ್ನು ನೋಡಿ ನನಗೂ ಸಿಟ್ಟೇ ಬಂತು. ಅಲ್ಲೇ ನಿಂತು ನಮ್ಮಾಕೆಯನ್ನು ಕರೆಯಿಸಿಕೊಂಡೆ. ನಿನಗೆ ಎರಡು ತೊಲೆ ಬಂಗಾರ ಹಾಕಬೇಕು, ಮೇಲೆ ನಾಲ್ಕು ಜನರು ಒಪ್ಪುವಂಥ ಅರಿವೆ ತಕ್ಕೊಳ್ಳಬೇಕು. ಅಲ್ಲದೆ ಉಡಿಯನ್ನೂ ತುಂಬಿ ಕೊಡಬೇಕು ಎಂದು ನಿಶ್ಚಯಿಸಿಕೊಂಡೇ ಹೊರಬಿದ್ದೆ...."

"ಇಲ್ಲದ ದಿನದೊಳಗೆ ಇದೇನು ವೆಚ್ಚ ?"

ಶ್ರೇಯಾಂಸ ತಂದೆಯ ಮಾತನ್ನು ತಡೆಯಲಿಕ್ಕೆಂದು ನಡುವೆಯೇ ಮಾತನಾಡಿದ.

"ಯಾರ ಧರ್ಮಕ್ಕ ಮಾಡತಾರೇನು? ಇಂಥಾ ಮಾಸ್ತರಕಿ ಮಾಡುವ ಅಳಿಯ ಸಿಗಬೇಕಾದರೆ ಸುಮ್ಮನಿಲ್ಲ....ನಾಳೆ ಅವರ ಮಗಳು ಹೊರಗಿನ ಬಿಸಿಲು ನೋಡುವಂತಿಲ್ಲ.. ಮನೆಯಲ್ಲಿ ಗೌರಿಯಂತೆ ಕೂಡು ವಾಕೆ. ಇನ್ನೂ ಮದುವೆಮಾಡದೆ ಇದ್ದರೆ ಸಾವಿರ ರೂಪಾಯಿ ವರದಕ್ಷಿಣೆ ಸಿಗುತಿತ್ತು....ನಮಗೆ....ಸಾವಿರ ರೂಪಾಯಿ !"

"ವರದಕ್ಷಿಣೆ ತಕ್ಕೊಂಡು ಏನಾಗಬೇಕು ಬಿಡು !"

ತಂದೆಯ ಮಾತನ್ನು ಸೌಮ್ಯ ರೀತಿಯಲ್ಲಿಯೇ ವಿರೋಧಿಸಿದ ಶ್ರೇಯಾಂಸ. ಅದಕ್ಕೂ ಬಾಳಪ್ಪನ ಉತ್ತರ ಸಿದ್ಧವಾಗಿಯೇ ಇತ್ತು.

"ಅದಿಲ್ಲ; ಹುಡಿಗೆಯಾದರೂ ಗಜ್ಜರಿ ತುಂಬಿನಂತಹದು ಸಿಗುತ್ತಿತ್ತಲ್ಲ...."

ಶ್ರೇಯಾಂಸ ಸುಮ್ಮನಾದ. ತಂದೆಯ ಈ ಮಾತಿಗೆ ಅವನ ಮನಸ್ಸೂ ಸಮ್ಮತಿ ಕೊಟ್ಟಿತೇನೋ !

ಮನೆಯೊಳಗೆ ಹೋದೊಡನೆಯೇ ಬಾಳಪ್ಪ ಗಂಟು ಬಿಚ್ಚಿ ಮಗನಿಗಾಗಿ ತಂದ ಜರದ ರುಮಾಲು ಧೋತರಗಳನ್ನು ತೋರಿಸಿದನು. ಅವುಗಳನ್ನೆಲ್ಲ ಮನಸ್ಸಿಲ್ಲದ ಮನಸ್ಸಿನಿಂದ ಶ್ರೇಯಾಂಸ ನೋಡಿ ಸುಮ್ಮನಾದ. ಮಗನು ಉತ್ಸಾಹವನ್ನು ತೋರದಿದ್ದರೂ ಮೂಕ ಸಮ್ಮತಿಯನ್ನು ಕೊಟ್ಟನೆಂದು ಭಾವಿಸಿ ಬಾಳಪ್ಪನು ಹಿರಿಹಿರಿ ಹಿಗ್ಗಿದ. ಹೆಂಡತಿ ಮೈನೆರೆದ ಸಂಗತಿಯನ್ನು ಕೇಳಿ, ಹುಡುಗರು ಹಿರಿಯರ ಎದುರಿಗೆ ಹೀಗೆ ಇರತಕ್ಕವರೆಂದು ಅವನ ಅನುಭವ ಹೇಳುತ್ತಿತ್ತು.

ಆದರೆ ಶ್ರೇಯಾಂಸನಿಗೆ ಎಳ್ಳಷ್ಟೂ ಸಮಾಧಾನವಿರಲಿಲ್ಲ. ಮೊದಲಿನಿಂದಲೂ ಹೆಂಡತಿ ಎಂಬ ವಸ್ತುವೊಂದು ತನಗೆ ಇದೆ ಎಂಬುದರ ಕಲ್ಪನೆಯನ್ನೇ ಆತ ಮನಸ್ಸಿನಲ್ಲಿ ತಂದಿರಲಿಲ್ಲ ಹಿರಿಯರಿಗೆ ಎದುರಾಡದುದಕ್ಕೆ ಮದುವೆಯಾಗಿದ್ದ. ಅದೂ ಎಂದೋ ಕನಸಿನಲ್ಲಿ ಆದಂತೆ ಆಗಿತ್ತು. ನಡುವೆ ಒಂದೆರಡು ಸಲ ಲಕ್ಷ್ಮಿಯು ಮನೆಗೆ ಬಂದು ಹೋಗಿದ್ದರೂ ಅವಳು ಅಡುಗೆಮನೆಗೆ ಕಾಲಿಕ್ಕಿದರೆ ಈತ

ಪಡಸಾಲೆಗೆ, ಆಕೆ ಪಡಸಾಲೆಗೆ ಬಂದರೆ ಈತ ಅಂಗಳಕ್ಕೆ – ಹೀಗೇ ಆಗಿದ್ದಿತು. ಹಿರಿಯರು, ಮಗನು ತಮ್ಮ ಎದುರಿಗೆ ಮರ್ಯಾದೆಯಾಗಿ ನಡೆದುಕೊಳ್ಳುತ್ತಿರುವನೆಂದು ಭಾವಿಸಿದ್ದರೂ ವಸ್ತುಸ್ಥಿತಿಯು ಹಾಗೆ ಇರಲಿಲ್ಲ. ಏನಿದ್ದರೂ ಇನ್ನು ಶ್ರೇಯಾಂಸನಿಗೆ ಲಕ್ಷ್ಮಿಯಿಂದ ದೂರ ಇರಲಿಕ್ಕೆ ಬರುವಂತಿರಲಿಲ್ಲ. ಅದರಿಂದ ಲಗ್ನದ ಬಂಧನ ಎಂಥ ಬಿಗಿಯನಾದುದೆಂಬುದರ ಅರಿವು ಈಗ ಅವನಿಗೆ ಆಗಹತ್ತಿತು. ಆರಂಭ ದಲ್ಲಿ ಆ ಉರುಲೇನೋ ಸಡಿಲಾಗಿ ತೋರಿದರೂ – ಇದೇನು ಬಿಗಿಯು ತ್ತದೆ ಬಿಡು ! – ಎಂದು ಎನ್ನಿಸಿದರೂ ಬರುಬರುತ್ತ ಅದು ಬಿಗಿದು ಜೀವವನ್ನೇ ಹಿಂಡಿ ಸಿಪ್ಪೆಮಾಡಿಬಿಡುವಂತೆ ತೋರಿತು. ಇದರಿಂದ ಪಾರಾಗುವ ದಾರಿಯನ್ನು ಶೋಧಿಸುತ್ತ ಶ್ರೇಯಾಂಸ ತಂದೆಗೆ ಕೇಳಿದ,

"ಸಮ್ಮಪ್ಪನವರು ಕ್ಷೇಮವಾಗಿದ್ದಾರೆಯೇ ?"

"ಊರಲ್ಲಿದ್ದರಲ್ಲವೇ ಕ್ಷೇಮ ಸಮಾಚಾರ....? ಈಗ ಎರಡು ವಾರಗಳ ಹಿಂದೆಯೇ ತುಂಘಲಗಿರಿಯ ಯಾತ್ರೆಗೆ ಹೋಗಿದ್ದಾರೆ....!"

"ಸುಂದರತ್ತೆ !"

"ಇದ್ದಾಳಲ್ಲ ! ತನ್ನ ಬಸ್ತಿಯಾಯಿತು ತಾನಾಯಿತು...."

"ಮಾನನ ಕಿವಿಯ ಮೇಲೆ ಒಂದು ಮಾತು ಇಟ್ಟು ಈ ಕಾರಣ ಹೂಡಿದ್ದರೆ ಚೆನ್ನಾಗಿರಲಿಲ್ಲವೇ ?"

"ಹುಚ್ಚಪ್ಪ ನೀ ! ಸಂಸಾರ ಅಂದರೆ ಸಾವಿರ ಮೈಲ ದೂರ ಹಾರತಾನ ಅವ....ಅವನ ಬೆನ್ನು ಹತ್ತಿದರೆ ನಮ್ಮ ಗತಿ ಹೇಗೆ ? ಹಡೆದವರು ನಾವು ಮಾಡುವುದನ್ನು ಮಾಡತೇವಿ....ಮುಂದೆ ನಿಮ್ಮ ನಿಮ್ಮ ಕರ್ಮ ಇದ್ದಂತೆ ಆಗ್ತದ...."

ಈ ಎಲ್ಲ ಅಸಮಾಧಾನದ ಸ್ಥಿತಿಯಲ್ಲೂ ಶ್ರೇಯಾಂಸನಿಗೆ ಸಮಾಧಾನದ ಒಂದು ಅಮೃತ ಹನಿ ಇತ್ತು. ಅದೆಂದರೆ ಬೆಳಗಾಂವಿಯ ಸಾಹಿತ್ಯ ಸಮ್ಮೇಲನಕ್ಕೆ ಹೋಗುವ ಅವಕಾಶ ದೊರೆತುದು. ಅದನ್ನೇ ತಿರುತಿರುಗಿ ನೆನೆದು, ಮುಂಬರುವ ಸಮ್ಮೇಲನದ ಸವಿಗನಸನ್ನು

ಕಂಡು ಹಿಗ್ಗುವನು. ಸಮ್ಮೇಲನದಿಂದ ಮರಳಿದ ಮರುದಿನವೇ ಮಾನವನ ಮನೆಯಲ್ಲಿ ಪ್ರಸ್ತ. ಆ ಮುಹೂರ್ತವನ್ನು ತನಗೆ ಗೊತ್ತಿಲ್ಲ ದೇನೇ ಅವರು ನಿಶ್ಚಯಿಸಿದ್ದರೂ ಅದು ಸಮ್ಮೇಲನಕ್ಕೆ ಅಡ್ಡಿಯಾಗು ವಂತೆ ಇರಲಿಲ್ಲ. ಅದನ್ನೇ ದೈವಾನುಗ್ರಹವೆಂದು ಶ್ರೇಯಾಂಸ ಒಂದು ಕ್ಷಣ ನಂಬಿದ. ಈ ನಂಬಿಗೆಯಲ್ಲಿಯೇ ಏನೇನೋ ತನ್ನ ಭವ್ಯ ಕನಸುಗಳನ್ನು ಕಟ್ಟಿದ. ಅವುಗಳ ಸಿಖರಕ್ಕೂ ಏರಿದ. ಅಲ್ಲಿಂದ ನಿರೀಕ್ಷಿಸಿದ ಜೀವನ ಎಷ್ಟು ರಮ್ಯ, ಮನೋಹರ!

ಮರುಕ್ಷಣದಲ್ಲಿಯೇ ಶ್ರೇಯಾಂಸನಿಗೆ ಭಾರತೀಯ ಸಾಹಿತ್ಯ ದೊಳಗಿನ ಒಂದು ಬೋಧಪ್ರದವಾದ ರೂಪಿತವು ನೆನಪಾಗುವುದು:- ಯಾವನೋ ಪಥಿಕನೊಬ್ಬನು ಅಡವಿಯಲ್ಲಿ ದಾರಿ ತಪ್ಪಿ—ಮತ್ತು ಆನೆಯೊಂದರಿಂದ ಬೆನ್ನಟ್ಟಲ್ಪಟ್ಟು—ಓಡುತ್ತಿದ್ದಾಗ. ಬಾವಿಯೊಂದರಲ್ಲಿ ಕಾಣದೆ ಹಾರಿದಂತೆ. ಅದೇ ಕ್ಷಣದಲ್ಲಿ ಎಚ್ಚತ್ತು ಕೈಗೆ ಸಿಕ್ಕ ಗಿಡದ ರೆಂಬೆಯೊಂದನ್ನು ಹಿಡಿದು ನೇತಾಡತೊಡಗಿದನಾತ. ಆಗ ಬದುಕಿದೆ ನೆಂಬ ಸಮಾಧಾನ ಆ ಪಥಿಕನಿಗೆ ಆಯಿತು. ಸ್ವಲ್ಪ ಸಮಾಧಾನ ದಿಂದ ಸುತ್ತಲೂ ನಿರೀಕ್ಷಿಸತೊಡಗಿದ ಮೇಲೆ ಆನೆಯು ತಾನು ತೂಗು ಬಿದ್ದ ಗಿಡದ ಬೊಡ್ಡೆಯನ್ನೇ ಹಿಡಿದು ಕೀಳಲಿಕ್ಕೆ ಯತ್ನಿ ಸುತ್ತಿದೆ; ಮೇಲಾಗಿ ತಾನು ಜೋತು ಬಿದ್ದಿರುವ ರೆಂಬೆಯನ್ನು ಕಪ್ಪು ಹಾಗೂ ಬಿಳಿಯ ಬಣ್ಣಗಳುಳ್ಳ ಎರಡು ಗುಂಗಿಯ ಹುಳುಗಳು ಕತ್ತರಿ ಸುತ್ತಲಿವೆ. ಕೆಳಗೆ ನೀರಿನಲ್ಲಿ ಹಾವು ಮೊಸಳೆಗಳು ಸುತ್ತುತ್ತಲಿವೆ. ಇಂಥವರಲ್ಲಿ ಅದೇ ಗಿಡದ ಇನ್ನೊಂದು ಟೊಂಗೆಗೆ ಹಾಕಿದ ಜೇನು ಹುಟ್ಟು ಒಡೆದು ಹನಿ ಹನಿಯಾಗಿ ಸೋರುತ್ತಿದೆ. ಅದಕ್ಕೆ ಪಥಿಕ ನಾಲಿಗೆಯನ್ನು ಚಾಚಿದ್ದಾನೆ. ಯಾರೋ ದಿವ್ಯ ಜೀವಿಗಳು ಬಂದು, 'ವಿಮಾನದಲ್ಲಿ ಹೋಗೋಣ ಬಾ' ಎಂದು ಅಪಾರ ಕರುಣೆಯಿಂದ ಕರೆದರೂ ಆ ಪಥಿಕ ಜೇನುತುಪ್ಪಿನ ಹನಿಯ ಮೋಹಕ್ಕೆ ಬಿದ್ದು ಒಲ್ಲೆನೆನ್ನುವನು....!

ಅಯ್ಯೋ! ಎಂಥ ಹೃದಯಸ್ಪರ್ಶಿಯಾದ ರೂಪಕವಿದು....! ಮದ್ದಾನೆಯ ಮರಣ, ಆ ಹುಳುಗಳೇ ಆಯುಷ್ಯದೊಳಗಿನ ಹಗಲಿರುಳು ಗಳು, ಕೆಳಗೆ ನರಕ, ವೈಮಾನಿಕ ದಿವ್ಯ ಜೀವಿಗಳು ಸತ್ಪುರುಷರು, ಜೇನು ಹನಿಯೇ ಸಂಸಾರದೊಳಗಿನ ಸುಖ......!—ಇಂಥ ಸುಖಕ್ಕೆ ನಾನು ಮೋಹಿತನಾಗಲೇ ?

ಶ್ರೇಯಾಂಸ ತನ್ನನ್ನು ತಾನೇ ತಿರು ತಿರುಗಿ ಕೇಳಿಕೊಂಡ. ಸತ್ಪುರುಷರ ಸಹವಾಸಕ್ಕೇನೇ ಹಂಬಲಿಸಿ ತಾನು ಸಾಹಿತ್ಯಸಮ್ಮೇಲನಕ್ಕೆ ಹೊರಟಿರುವೆನೆಂದು ತಿಳಿದು ಮನಸ್ಸಿಗೆ ಸಮಾಧಾನವನ್ನು ತಂದು ಕೊಂಡ. ಆಗ ಅವನ ಮನಸ್ಸು ಸ್ವಲ್ಪ ಹಗುರಾಯಿತು.

ಶ್ರೇಯಾಂಸನ ಭಾವನೆಯೇನೂ ತಪ್ಪಾಗಿರಲಿಲ್ಲ. ಆ ವರ್ಷದ ಬೆಳಗಾಂವಿಯ ಸಾಹಿತ್ಯ ಸಮ್ಮೇಲನವು ಬಹು ವೈಭವದಿಂದಲೇ ಆರಂಭವಾಯಿತು. ಬೆಳಗಾಂವಿ ನಾಡಿನ ಕನ್ನಡಿಗರ ಉತ್ಸಾಹವನ್ನಂತೂ ಹೇಳತೀರದು. ಮೂರು ದಿನದ ಸಮ್ಮೇಲನವನ್ನು ನಾಲ್ಕು ದಿನಗಳ ವರೆಗೂ ನಡೆಯಿಸಬೇಕಾಯಿತು. ಊರೆಲ್ಲ ಕನ್ನಡದ ವಾತಾವರಣ ದಿಂದ ದುಮುದುಮಿಸಿತು. ಆರಂಭದ ದಿನದ ಮುಂಜಾನೆಯ ಕಾರ್ಯ ಕ್ರಮವೇ ಶ್ರೇಯಾಂಸನ ಮನಸ್ಸನ್ನು ಸೂರೆಗೊಂಡುಬಿಟ್ಟಿತು......ಆ ದಿವ್ಯಧ್ವನಿ ಕನ್ನಡದ ಕಂಠ ಶ್ರೀ ಶ್ರೀಕಂಠಯ್ಯನವರ 'ಏರಿಸಿ ಹಾರಿಸಿ ಕನ್ನಡದ ಬಾವುಟ!' ಎಂಬ ಗುಡುಗು ಶ್ರೇಯಾಂಸನ ಹೃದಯವನ್ನು ಹೊಕ್ಕು ಅಲ್ಲಿಯ ಜಾಡ್ಯವನ್ನೆಲ್ಲ ಹೊರದೂಡಿಸಿಬಿಟ್ಟಿತು. ಆ ಮುಂಗಾ ರಿನ ಗುಡುಗು! ಮುದವೀಡು ಕೃಷ್ಣರಾಯರ ಸಿಂಹ ಗರ್ಜನೆಯಿಂದ ಶ್ರೇಯಾಂಸನಲ್ಲಿ ನವಚೇತನ ಚಿಲುಮೆ ಚಿಮ್ಮಿ ಹತ್ತಿತ್ತು.! ಆ ಮಳೆ ಗಾಲದ ನದಿಯ ಅಬ್ಬರದ ಪ್ರವಾಹ! ಸಿ. ಕೆ. ವೆಂಕಟರಾಮಯ್ಯನವರ ಮಾತಿನ ಓಘದಲ್ಲಿ ಶ್ರೇಯಾಂಸ ಕೊಚ್ಚಿಕೊಂಡು ಹೋಗಿಬಿಟ್ಟ! ಮಾಸ್ತಿಯವರ ನಯವಿನಯಸೌಜನ್ಯಗಳೂ, ಶ್ರೀರಂಗರ ಕೊಂಕುನುಡಿ, ಹಾಸ್ಯಗಳೂ, ರಾಜರತ್ನಂರ ವಿಡಂಬನೆ ಗಂಭೀರತೆಗಳೂ ಶ್ರೇಯಾಂಸನ

ಮನವನ್ನು ತಟ್ಟಿದವು. ಮೊದಲಿನಿಂದಲೂ ಕಾಣಬೇಕೆಂದು ಹಂಬಲಿಸುತ್ತಿದ್ದ ವಿನಾಯಕರು ಪೀಠಿಕೆಯ ಮೇಲೆ ಬಂದು ನಿಂತಾಗ ಶ್ರೇಯಾಂಸ ಕಣ್ ಮನಗಳನ್ನೆಲ್ಲ ತೆರೆದು, ಎವೆಯಿಕ್ಕದೆ ಒಂದೇ ಸವನೆ ನೋಡಹತ್ತಿದ. ಅವರ 'ಸಾವುಕಾರ ಮನೆಯಲಿ ಝಣಾ ಝಣಾ ! ಆಗ ಬಡವರ ಮನೇಲಿ ಭಣಾ ಭಣಾ !' ಎಂಬ ಹಾಡನ್ನು ಕೇಳಿದಾಗಲಂತೂ ಶ್ರೇಯಾಂಸನ ಹೃದಯ ಹೆಮ್ಮೆಯಿಂದ ಕುಣಿದಾಡಿತು ! ಇಡೀ ಸಮ್ಮೇಲನದಲ್ಲಿಯೇ ಭಾರತೀಯರ ಜೀವನದ ಪ್ರಾಜ್ಞೆಯನ್ನು ಇತ್ತುದೆಂದರೆ ಅದೊಂದೇ ಗೀತ ! 'ಭಾರತ ಹುಣ್ಣಿವೆ'ಯನ್ನು ಹಾಡಲು ನಿಂತ 'ರಸಿಕ ರಂಗ'ರು ನೆಲಕ್ಕುರುಳಿದುದು ಸ್ವಾಭಾವಿಕವೆಂದೇ ಭಾವಿಸಿದವ ಶ್ರೇಯಾಂಸ ! ಬಹುಕಾಲ ಕಳೆದ ಮೇಲೆ ವಾಲಿಯವರ ಸ್ವಾಗತ ಭಾಷಣದೊಳಗಿನ 'ಕಿತ್ತೂರ ಕಿಲ್ಲೆಯಲ್ಲಿ ಕಲಿತನದಿಂದ ಕಾದಿ ಮಡಿದ ಆ ವೀರರ ವೀರರಕ್ತವು ಬೆರತ ಆ ಹಾಳು ಕಿಲ್ಲೆಯ ಪ್ರದೇಶದೊಳಗಿನ ಕೆಮ್ಮಣ್ಣು ಈಗ ಸಸಿಯದ ಸಾರ್ವಜನಿಕ ರಹದಾರಿಗಳನ್ನು ಗಟ್ಟಿ ಮಾಡುವುದಕ್ಕಾಗಿ ಲೋಕಲ್ ಬೋರ್ಡಿನವರಿಂದ ಉಪಯೋಗಿಸಲ್ಪಡುತ್ತಿದೆ!' ಎಂಬ ಸುಂದರ ಕಲ್ಪನೆಯ ಅರ್ಥ ಹೊಳೆಯಿತವನಿಗೆ ! ಮೂರು ದಿನಗಳ ವರೆಗೆ ಶ್ರೇಯಾಂಸ ವ್ಯಸನಗಳನ್ನು ಮರೆತು ಸಾಹಿತ್ಯದ ರಸೋದಧಿಯಲ್ಲಿಯೇ ಮುಳುಗಿ ಹೋಗಿದ್ದನು. ಹಸಿವೆ ನೀರಡಿಕೆಗಳೇ ಹಾರಿದಂತಿತ್ತು. ಊಟಕ್ಕೆ ಕೊಡಬೇಕಾಗಿದ್ದ ಹಣವನ್ನೇ ಪುಸ್ತಕಗಳಿಗೆ ಕೊಟ್ಟುಬಿಟ್ಟ ! ಸಮ್ಮೇಲನದ ಮಂದಿರದಲ್ಲಿ ಒಂದು ರೂಪಾಯಿಯ ಪ್ರೇಕ್ಷಕನೀತ. ಆದುದರಿಂದ ಹತ್ತಿರಕ್ಕೆ ಹೋಗಿ ಸಾಹಿತ್ಯಕರನ್ನು ಕಣ್ತುಂಬ ಕಾಣಲಿಕ್ಕೆ ಆಗಲಿಲ್ಲವಲ್ಲ !—ಎಂದು ಕೊರಗಿದ. ಕೊನೆಯ ದಿನ ಮಾತ್ರ ಧೈರ್ಯಮಾಡಿ ಮುದವೀಡು ಕೃಷ್ಣರಾಯರ ಬೀಡಾರಕ್ಕೆ ಹೋಗಿ ಅವರ ಭಾಷಣದ ಪ್ರತಿಯೊಂದನ್ನು ಪಡೆದ. ಅಧ್ಯಕ್ಷರ ಕೂಡ ಪ್ರತ್ಯಕ್ಷ ಮಾತನಾಡಿದೆನೆಂದು ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಂಡ. ಈಗ ಮಾತ್ರ ಜೊತೆಗಿದ್ದ ಶಂಕರಗೌಡನ ಬೆನ್ನನ್ನೂ

ಚಪ್ಪರಿಸಲಿಕ್ಕೆ ಶ್ರೇಯಾಂಸ ಮರೆಯಲಿಲ್ಲ. ಬೆಳಗಾಂವಿಯನ್ನು ಬಿಡುವಮುಂಚೆ ಬೇಂದ್ರೆ, ಗೋಕಾಕರು ಸಂಪಾದಿಸುತ್ತಿರುವ 'ಜೀವನ' ಪತ್ರಿಕೆಯ ಚಂದಾದಾರನನ್ನಾಗಿ ಮಾಡಿಯೇ ಶಂಕರಗೌಡನಿಗೆ ಶ್ರೇಯಾಂಸ ಸಾಹಿತ್ಯದೀಕ್ಷೆಯನ್ನು ಕೊಡಿಸಿದನು. ತಾನಂತೂ ಸಾಹಿತ್ಯ ಪ್ರಪಂಚಕ್ಕೇ ಮುಗ್ಧನಾಗಿಬಿಟ್ಟ.

ಸಮ್ಮೇಲನಕ್ಕೆ ಬಂದಂಥ ಕನ್ನಡ ಪುತ್ರರ ಪ್ರತಿಭೆ, ಚಾತುರ್ಯ, ಅಭ್ಯಾಸ, ಭಾಷಾಭಿಮಾನಗಳು ಶ್ರೇಯಾಂಸನನ್ನು ಬೆರಗುಗೊಳಿಸಿದವು. ಅವರ ಮುಂದೆ ತನ್ನ ಅಲ್ಪತೆಯು ಅರಿವಾಯಿತವನಿಗೆ. ಅವರೊಡನೆ ಏನೆಂತು ಮಾತನಾಡಬೇಕು ? ಅವರ ಪರಿಚಯ ಮಾಡಿಕೊಳ್ಳಲು ತಾನು ತಕ್ಕನನೆ ? ತಾನೇನು ಕೆಲಸ ಮಾಡಿರುವೆ ? ಇತ್ಯಾದಿ ಪ್ರಶ್ನೆಗಳು ಅವನನ್ನು ಕಾಡಿಸಹತ್ತಿದವು. ಅದರಿಂದ ಹಿರಿಯರಿಂದ ದೂರ ದೂರಕ್ಕೆ ಸರಿದು ಬೆಳಗಾಂವಿಯನ್ನು ಬಿಟ್ಟ ಶ್ರೇಯಾಂಸ. ಆದರೆ ಅವನ ಹೃದಯ ಮಾತ್ರ ಯಾವಾಗಲೂ ಅವರ ಸನ್ನಿಧಿಯಲ್ಲಿಯೇ ನುಳಿದಾಡುತ್ತಿತ್ತು. ತಿರುಗಿ ಊರ ಕಡೆಗೆ ಇವನ ದೇಹವನ್ನು ಹೊತ್ತುಕೊಂಡು ಓಡುತ್ತಿದ್ದ ಬಸ್ಸು ಎಷ್ಟು ವೇಗದಿಂದ ನುಗ್ಗುತಲಿತ್ತೋ, ಅಷ್ಟೇ ವೇಗದಿಂದ ಅವನ ಮನಸ್ಸು ಕನ್ನಡ ಭಕ್ತರ ಕಡೆಗೆ ಓಡುತ್ತಿದ್ದಿತು. ಪ್ರವಾಸದ ದಣಿವು ತೂಕಡಿಕೆಯನ್ನು ತಂದಾಗ ಅವನ ಬಗೆಗಣ್ಣಿನೆದುರಿಗೆ ಶಾಕ್ತ ಸಾಹಿತ್ಯ ಮುಂಟಪದ ರಾಜರತ್ನಂ, ಪರಿಷತ್ತಿನ ಅಧ್ವರ್ಯು ಶ್ರೀಕಂಠಯ್ಯ, ಕನ್ನಡದ ಕೈಲಾಸ ಕೈಲಾಸಂ....ಬಂದು ನಿಲ್ಲುತ್ತಿದ್ದರು! ಹೃದಯಕ್ಕೊಂದು ಅಪೂರ್ವಾನಂದವನ್ನುಂಟು ಮಾಡುತ್ತಿದ್ದರು! ಆ ಕ್ಷಣದಲ್ಲಿ ಶ್ರೇಯಾಂಸ ಮರುದಿನವೇ ಮನೆಯಲ್ಲಿ ತನ್ನ ಶೋಭನ ಪ್ರಸ್ಥವೆಂಬುವನ್ನು ಕೂಡ ಮರೆತುಬಿಟ್ಟ. ಸಮ್ಮೇಲನವು ಶ್ರೇಯಾಂಸನಿಗೆ ತುಂಬ ಸ್ಫೂರ್ತಿಯನ್ನಿತ್ತಿತ್ತು. ಅವನಲ್ಲಿ ನವ ನವೀನ ಚೈತನ್ಯವು ಅಂಕುರಿಸಿತು. ಅದರಿಂದ ಅವನು ಕಲ್ಪನಾ ಕುದುರೆಯನ್ನು ಹತ್ತಿ ಸೌಂದರ್ಯಲೋಕದಲ್ಲಿ ದೂರ ದೂರದವರೆಗೆ ಪಯಣ ಮಾಡತೊಡ

ಗಿದ. ಅಲ್ಲಿಂದ ಮನುಲೋಕವನ್ನು ನಿರೀಕ್ಷಿಸಿದಾಗ ಅವನ ಬಗೆ ಕದಡುವುದು, ಕೆರಳುವುದು.

ಜೀವನದಲ್ಲಿ ಸೌಂದರ್ಯವಿದೆಯೋ ?

ಯಾವ ಜೀವನ ? ವ್ಯಕ್ತಿ ಜೀವನವೊ ?ಸಮಾಜ ಜೀವನವೊ ?

ವ್ಯಕ್ತಿ ಜೀವನ....!

ಹಃ ! ವ್ಯಕ್ತಿ ಜೀವನದಲ್ಲಿ ಸೌಂದರ್ಯ ?

ಸಹಜ ಪಡೆಯಬಹುದು....!

ಆದರೆ ಸಮಷ್ಟಿ ಜೀವನದಲ್ಲಿ ಸೌಂದರ್ಯ ಬರೆವುದೆಂತು ?

ಅದಕ್ಕೆ ಹೋರಾಟ ಬೇಕು....

ಅದು ಕಲಾಜೀವಿಯ ಕರ್ತವ್ಯವೋ ?

ಕಲಾವಂತನು ಸೌಂದರ್ಯದ ನಿರ್ಮಾಣಕನೋ ? ಪ್ರದರ್ಶಕನೋ ?

ಪ್ರದರ್ಶಿತನಾದಲ್ಲ ವಸ್ತುವಿನಲ್ಲಿ ಸೌಂದರ್ಯ ಬೇಕಲ್ಲ.!

ಸತ್ಯವೇ ಸೌಂದರ್ಯ !

ಜನತೆಯ ಬಾಳನ್ನು ಕನ್ನಡಿಸುವುದೇ ಸೌಂದರ್ಯ ಪ್ರದರ್ಶನ !

ಅಂಗೈ ಹುಣ್ಣಿಗೆ ಕನ್ನಡಿಯ ಅವಶ್ಯಕತೆ ಏನು ?

ದೊಡ್ಡದು ಮಾಡಿ ತೋರಿಸಲಿಕ್ಕೇ ?

ಅಲ್ಲ; ನನ್ನ ವಿಚಾರ ಸರಣಿಯೇ ತಪ್ಪು ! ಅಂದರೆ ?

ಕಲೆಗಾರ ಸೌಂದರ್ಯ ನಿರ್ಮಾಣಕ, ಸೃಷ್ಟಿಕರ್ತ, ಪರಬ್ರಹ್ಮ !

ಸೃಷ್ಟಿ ಮೊದಲು, ಅವರ ಕಲೆ ಬೆನ್ನು ಹಿಂದೆ—

ಮೊದಲು ಕಲಾಜೀವಿ ಕಾರ್ಯಕರ್ತ....

ಕಾರ್ಯಕರ್ತನ ಅನುಭವ ಕಥನ ಕಲಾಕೃತಿ !

"ಜಾಗುಳ ದಾರಿ ಬಂತು ಯಾರು ಇಳಿಯುವಿರೇನು ?"

ಮೋಟರ ಕ್ಲೀನರನ ಈ ಧ್ವನಿಯು ಕಿವಿಗೆ ಬಿದ್ದಾಗಲೇ ಶ್ರೇಯಾಂಸ ಇಹಲೋಕಕ್ಕೆ ಇಳಿದ. ಅಷ್ಟರಲ್ಲಿ ಶಂಕರಗೌಡ ಬಸ್ಸಿನ

ಬಾಗಿಲ ತೆರೆದು ಕೆಳಗಿಳಿಯುತ್ತಲಿದ್ದ. ಸುತ್ತಲೂ ದೂಳು ಅಡಗಿತ್ತು. ಶ್ರೇಯಾಂಸನೂ ಗಡಬಡಿಯಿಂದ ಕೆಳಗಿಳಿದ. ಇಬ್ಬರ ಸಾಮಾನುಗಳನ್ನೂ ಈಗಾಗಲೇ ಗೌಡರ ಆಳುಗಳು ಬಸ್ಸಿನಿಂದ ಕೆಳಗಿಳಿಸಿ ಕೊಂಡಿದ್ದರು.

"ಯಾವಾಗ ಬಂದಿದ್ದಿರೋ ?" ಶಂಕರಗೌಡ ಆಳುಗಳಿಗೆ ಕೇಳಿದ.

"ಅಪ್ಪಾ ಅವರು ಮುಂಜೇಲೀನೇ ಕಳಿಸಿ ಕೊಟ್ಟಾರ ದೇವ್ರು ?"

"ಐದಾರು ಮೋಟಾರು ಹೋದವು. ನೀವು ಕಾಣಲಿಲ್ಲ....ಈಗ ಬಂದಿರಿ !"

"ಹೌದು ; ಇಂದೊಂದು ದಿನ ಸಭೆ ಹೆಚ್ಚಿಗೆ ಬೆಳಸಿದರು....!"

"ಸಭೆಗೆ ಹೋಗೀರಿ ದೇವ್ರು ನೀವು?" ಒಬ್ಬ ಬೆರಗಿನಿಂದ ಕೇಳಿದ.

"ಸಣ್ಣ ಜೀವ ಆದರೂ ಈಗಿಂದ್ಯ ಎಲ್ಲಾದಕ್ಕೂ ಹೋಗವರು ಅವರು." ಇನ್ನೊಬ್ಬ ನುಡಿದ....

"ಕಲೆಕಟ ಮಾಮುಲೇದಾರ ಎಲ್ಲಾರೂ ಬಂದಿದ್ರಾ ಅಣ್ಣಾ..?"

"ಅವರಕಿಂತ ಹೆಚ್ಚಿನವರ ಬಂದಿದ್ದರೋ ?"

ಶ್ರೇಯಾಂಸ ನಡುವೆಯೇ ಬಾಯಿಹಾಕಿ ಹೇಳಿದ.

"ಅಂಯ್ದು ಯಾನ ಗವರನರ್ ಸಾಬ ಬಂದಿದ್ದೇನರಿ....?"

"ಶಾಣೇರ ಇದ್ದೀರಿ .... ಚಹ ಕುಡಿದು ಬರ್ರಿ ಹೋಗಿರಿ .... ! ಲಗೂನೆ ಮನೆಗೆ ಹೋಗೋಣ...."

ಶಂಕರಗೌಡ ನಾಲ್ಕು ಕಾಸು ಕೊಟ್ಟು ಕಳಿಸಿದ. ಅವರು :—

"ದೊಡ್ಡ ಅಪ್ಪಾ ಅವರೂ ಹಿಂದಕ್ಕ ಗವರನರನ ಪಾನ ಸುಪಾರಿಗೆ ಹೋಗಿರಲ್ಲೋ....ದೇವರ್‍ಯಾ....?"

"ಕಲೆಕಟನ ಕರೆ ಬಂದಿತ್ತಲ್ಲ....ಆಗ್ಯ ನೋಡೋ ನಾ ಸನದಿ ಚಾಕರಿ ಮ್ಯಾಲ ಬಂದದ್ದು...."

"ಅದಕೇನರ ಇಪ್ಪತ್ತೈದ ವರ್ಷ ಆದುವಲ್ಲ... "

ಹೀಗೆ ಮಾತನಾಡುತ್ತ ಚಹದ ಅಂಗಡಿಯನ್ನು ಸೇರಿದರು.

ಶಂಕರಗೌಡ ಹೊರಳಿ ಶ್ರೇಯಾಂಸನ ಕಡೆಗೆ ನೋಡಿದ.

ಶ್ರೇಯಾಂಸ ತನ್ನ ಸಾಮಾನುಗಳನ್ನು ಹೆಗಲ ಮೇಲೆ ಹೊತ್ತು ಕೊಂಡು ಹೊರಡಲಿಕ್ಕೆ ಸಿದ್ಧನಾಗಿ ನಿಂತಿದ್ದಾನೆ !

"ಇದೇನು ಶ್ರೇಯಾಂಸ....?"

ಬೆರಗಿನಿಂದ ಶಂಕರಗೌಡ ಕೇಳಿದ.

"ನನ್ನ ಸಾಮಾನು....!"

"ತಿಳಿಯಿತು. ನಮ್ಮ ಹಳಬರು ತರುವರು ಇದಲ್ಲ....!"

"ಬೇಡ...."

"ಸಾಕು ಹುಚ್ಚರಂತೆ ಮಾಡಬೇಡ ಇದು....! ಯಾತಕ್ಕೆ ಬಂದಾರೆ ಕೋಣನಂಥ ಆಳುಗಳು ಇಬ್ಬರು ?"

"ಆ ಕೋಣಗಳ ಮೇಲೆ ಹೊರಲಿಕ್ಕೆ ಈ ಕತ್ತೆಗಳೆಲ್ಲಿ ಅಶಕ್ತ ವಾಗಿವೆ ?"

ಎಂದವನೇ ಶ್ರೇಯಾಂಸ ಮುನ್ನಡೆದ. ಹಾಸಿಗೆಯ ಸುರುಳಿ ಟ್ರಂಕುಗಳು ಅವನ ತಲೆಯನ್ನೇರಿದ್ದುವು

ಸಂಜೆಯ ಹೊ ಬಿಸಿಲಿನಲ್ಲಿ ಶ್ರೇಯಾಂಸನ ನೆರಳು ದೂರದ ವರೆಗೆ ಬಿದ್ದಿತ್ತು. ಸಾಮಾನುಗಳನ್ನು ಕಿರೀಟದಂತೆ ಧರಿಸಿದ ಆ ನಿಡಿದಾದ ನೆರಳು ಶಂಕರಗೌಡನಿಗೆ ಭಯಂಕರವಾಗಿಯೇ ತೋರಿರ ಬೇಕು. ಅದರ ಹೆಜ್ಜೆಗಳು ಮಾತ್ರ ಮಹಾದಾನಿಯೆನಿಸಿದ ಶಿಬಿ ಚಕ್ರವರ್ತಿಯ ತಲೆಯನ್ನು ಮೆಟ್ಟಲು ವಾಮನನು ಎತ್ತಿಟ್ಟ ಹೆಜ್ಜೆ ಗಳಂತೆ ಭಾಸವಾದುವು. ಅವನ ಹೃದಯವೂ ಅಳುಕಿತು.

"ಶ್ರೇಯಾಂಸ !" ಎಂದು ಕೂಗಿದ, ಶಂಕರಗೌಡ.

ಹೊರಳಿ ನೋಡಿದ ಶ್ರೇಯಾಂಸ.

ಶಂಕರಗೌಡನೂ ಸಾಮಾನುಗಳನ್ನು ಹೊತ್ತುಕೊಂಡು ಹಿಂದೆ ಬರುತ್ತಿದ್ದ.

## ೨೪

ಶಾಲೆಯ ತೋಟದಲ್ಲಿ ಶ್ರೇಯಾಂಸ ವಿದ್ಯಾರ್ಥಿಗಳಿಂದ ನೆಲದ ಮೇಲೆ ಮಾಡೆಲ್ಲು ಮಾಡಿಸುತ್ತಿದ್ದ. ಭರತಖಂಡದ ನಕ್ಷೆ, ಅದರಲ್ಲಿ ವಿಶಾಲ ಕರ್ನಾಟಕದ ಗಡಿ ಗೆರೆಗಳನ್ನು ಗುರುತಿಸುವುದೇ ಮುಖ್ಯ ಗುರಿಯಾಗಿದ್ದಿತು. ನಡುನಡುವೆ ವಿದ್ಯಾರ್ಥಿಗಳಿಗೆ ಕರ್ನಾಟಕದ ಸಂಪತ್ತು, ಸಮುದ್ರದಂಡೆ, ನದಿನದಗಳ ಪರಿಚಯವನ್ನು ಶ್ರೇಯಾಂಸ ಮಾಡಿಕೊಡುತ್ತಲಿದ್ದ. ಹಾಗೆಯೇ ತುಂಡು ತುಂಡಾದ ಕನ್ನಡ ನಾಡಿನ ಅವನತಿಯನ್ನೂ ಏಕೀಕರಣದ ಆವಶ್ಯಕತೆಯನ್ನೂ ವಿವರಿಸುವ. ಅದೇ ಸಂದರ್ಭದಲ್ಲಿ ಮಾಸ್ತಿಯವರ 'ಹರಿದು ತುಂಡಾಗಿಹುದು ಕನ್ನಡ ನಾಡು' ಎಂಬ ಕವನವನ್ನು ನೆನೆದು ಅದರ ಭಾವವನ್ನು ಮಕ್ಕಳಿಗೆ ವಿವರಿಸಿದ. ಏಕೀಕರಣಕ್ಕಾಗಿ ಹೋರಾಡಲು ಹುರಿದುಂಬುವಂತೆ ಕವಿವರ 'ಕುವೆಂಪು' ಅವರ 'ನಡೆ ಮುಂದೆ ನಡೆ ಮುಂದೆ' ಎಂಬ ಕವನವನ್ನು ಗಂಭೀರವಾಗಿ ಅಂದು ಅರ್ಥ ವಿವರಿಸಿದ. ವಿದ್ಯಾರ್ಥಿಗಳೆಲ್ಲ ಮುಗ್ಧರಾಗಿ ತುಸು ಹೊತ್ತು ಮಾಡೆಲ್ಲು ಮಾಡುವುದನ್ನು ಅಷ್ಟಕ್ಕೇನೇ ನಿಲ್ಲಿಸಿ ಗುರುಗಳ ಮುಖದ ಕಡೆಗೆ ನೋಡುತ್ತ ಕುಳಿತರು. ಗಿಡದ ನೆರಳಲ್ಲಿ ನಡೆದ ಈ ಪಾಠ ಪ್ರವಚನವು ಎಲ್ಲರಿಗೂ ಆನಂದವನ್ನುಂಟುಮಾಡಿತ್ತು.

ವಿದ್ಯಾರ್ಥಿಗಳಿಗೆ ಕೆಲಸ ಕೊಟ್ಟು, ತಾನು ಎರಡು ದಿನಗಳ ಹಿಂದೆ ಬಂದ 'ಜಯಂತಿ' ಮಾಸಪತ್ರಿಕೆಯನ್ನು ಓದಬೇಕೆಂದು ಕೈಯಲ್ಲಿ ಹಿಡಿದುಕೊಂಡು ತಂದ ಪತ್ರಿಕೆಯು ಹಾಗೇ ಉಳಿದಿದ್ದಿತು. ವಿಷಯ ಭೂಗೋಲದಿಂದ ಭಾಷೆಗೆ ತಿರುಗಿ ಪ್ರವಹಿಸುತ್ತಿದ್ದಿತು. ಶ್ರೇಯಾಂಸ

ಕಾಲ ಸ್ಥಳಗಳ ಕಡೆಗೆ ಗಮನ ಕೊಡದೆ ವಿಷಯವನ್ನು ವಿವರಿಸುವುದರಲ್ಲಿ ಮಗ್ನನಾಗಿದ್ದ.

ಊರಲ್ಲಿ ಟಪಾಲು ಹಂಚುವದನ್ನು ಬಿಟ್ಟು, ಅಂಚೆಯಾಳು ಕೂಡ ಶ್ರೇಯಾಂಸನ ಕಾವ್ಯಸ್ಫೂರ್ತಿಯಲ್ಲಿ ಮಿಂದು ಒತ್ತಟ್ಟಿಗೆ ನೆರಳಿನಲ್ಲಿ ನಿಂತಿದ್ದಾನೆ! ಶ್ರೇಯಾಂಸನ ಆವೇಶವೂ ಒಂದು ಸ್ತಿಮಿತಕ್ಕೆ ಬಂದಂತೆ ತೋರಲು ಅವನು ತಾನು ತಂದ ಕಾಗದಗಳನ್ನು ಮುಂದೆ ಚಾಚಿದ. ಇಂದು ಆ ಊರ ಅಂಚೆಯಲ್ಲಿ ಅರ್ಧದಷ್ಟು ಕಾರ್ಡು ಪಾಕೀಟುಗಳು ಶ್ರೇಯಾಂಸನಿಗೆ ಬಂದುವೇ ಇದ್ದಂತೆ ತೋರಿತು. ಒಮ್ಮೆಲೇ ತನ್ನ ಹೆಸರಿಗೆ ಬಂದ ಏಳೆಂಟು ಕಾಗದಗಳನ್ನು ಕಂಡು ಅವನಿಗೂ ಆಶ್ಚರ್ಯವಾಯಿತು. ಅವನ ಆಯುಷ್ಯದಲ್ಲಿಯೇ ಅವನಿಗಿಷ್ಟು ಕಾಗದಗಳು ಒಂದೇ ದಿನ ಬಂದುದಿರಲಿಲ್ಲ. 'ಜಯಂತಿ' ಮಾಸ ಪತ್ರಿಕೆಯಲ್ಲಿ ತನ್ನ ಮೊದಲ ಕತೆ ಪ್ರಕಟವಾದುದಕ್ಕೆ ಆದ ಆನಂದಸಾಗರದ ಭರತಿ ಇನ್ನೂ ಇಳಿದಿರಲಿಲ್ಲ....ಅದರಲ್ಲಿ ಇದೊಂದು ಹೊಸ ಅನುಭವ ಶ್ರೇಯಾಂಸನಿಗೆ ಬಂದಿತು. ಸಾಹಿತಿ ಶ್ರೇಯಾಂಸನ ಕೈಗೆ—ಅವನ ಪ್ರಕಟವಾದ ಕತೆಯನ್ನು ಮೆಚ್ಚಿ ವಾಚಕರು ಬರೆದ ಕಾಗದದ ಭಾವವನ್ನು ಒಳಗೊಂಡ ಸಂಪಾದಕರ ಪತ್ರವೇ ಮೊದಲು ಸಿಗಬೇಕೇ? ಅದನ್ನು ಕಣ್ಣರಳಿಸಿ ಆತುರದಿಂದ ಓದತೊಡಗಿದ ಶ್ರೇಯಾಂಸ. 'ಜಯಂತಿ'ಯ ಸಂಪಾದಕರಾದ ಕೃಷ್ಣಶರ್ಮರು ಬೆಳಗಾಂವಿಯ ಸಮ್ಮೇಲನಕ್ಕೆ ಬಂದಾಗ ಭೆಟ್ಟಿಯಾಗಿದ್ದರೆ ಚೆನ್ನಾಗಿ ತ್ತೆಂದೂ ಸಮಯಮಾಡಿಕೊಂಡು ಧಾರವಾಡಕ್ಕೊಮ್ಮೆ ಬಂದು ಹೋಗ ಬೇಕೆಂದೂ ಬರೆದಿದ್ದರು. ಮೇಲಾಗಿ ತಮ್ಮ ಪತ್ರಿಕೆಯ ವಸಂತ ಸಂಚಿಕೆಗಾಗಿ ಒಂದು ಕತೆಯನ್ನೂ ಬೇಡಿದ್ದರು. ಹಾಗೆಯೇ 'ಜಯ ಕರ್ನಾಟಕ' 'ಕಥೆಗಾರ' ಪತ್ರಿಕೆಗಳ ಸಂಪಾದಕರಿಂದಲೂ ಲೇಖನ ಗಳನ್ನು ಬೇಡಿ ಶ್ರೇಯಾಂಸನಿಗೆ ಕಾಗದಗಳು ಬಂದಿದ್ದವು. ಅದರಲ್ಲೂ ಮುಂಬಯಿಯಿಂದ ಗೆಳೆಯ ದತ್ತಮೂರ್ತಿಯು ಬರೆದ ಕಾಗದವಂತೂ

ಬಹಳ ಸ್ಫೂರ್ತಿಯನ್ನು ಕೊಟ್ಟಿತು.

'ಪ್ರಿಯ ಶ್ರೇಯಾಂಸ,

ನಿನ್ನ 'ಶತ್ರುಗಳು' ಎಂಬ ಕತೆಯನ್ನು 'ಜಯಂತಿ'ಯಲ್ಲಿ ಓದಿದೆ. ಅದೂ ಓದಿದ ನನ್ನ ಗೆಳೆಯರೊಬ್ಬರು ಹೇಳಿದ ಮೇಲೆ. ಅವರು 'ಸಾಹಿತ್ಯಕ್ಷೇತ್ರದಲ್ಲಿ ಈ ಮೊದಲು ಕೇಳದ ಹೆಸರಾದರೂ ಕತೆ ಬಹು ಚೆನ್ನಾಗಿದೆ....' ಎಂದು ಹೇಳಿ ನನಗೆ ಓದಿ ನೋಡಲಿಕ್ಕೆ ಕೊಟ್ಟರು. ಅದರ ಮೇಲೆ ನಿನ್ನ ಹೆಸರನ್ನು ನೋಡಿದಾಗಲಂತೂ ನನಗೆ ಹಿಡಿಸಲಾರದಷ್ಟು ಆನಂದವಾಯಿತು. ಆ ದಿನವನ್ನು ನನ್ನ ಗೆಳೆಯರಿಗೆಲ್ಲ ನಿನ್ನ ಕತೆ ತೋರಿಸುವುದರಲ್ಲಿಯೇ ಕಳೆದೆ. ಕನ್ನಡ ಸಾಹಿತ್ಯದಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಮೂಡಿ ಬಂದ ಹಳ್ಳಿಯ ಚಿತ್ರಕ್ಕೆ ನಿನ್ನ ಲೆಕ್ಕಣಿಕೆಯು ಪೂರ್ಣ ಬಣ್ಣವನ್ನು ತುಂಬುವುದರಲ್ಲಿ ಸಂಶಯವಿಲ್ಲ.

ನಿನ್ನ ಗೆಳೆಯ ಶಂಕರಗೌಡರಿಗೆ ನನ್ನ ನಮಸ್ಕಾರಗಳು.

—ದತ್ತಮೂರ್ತಿ.'

ಚಿತ್ರಕಲೆಯ ಹೆಚ್ಚಿನ ಅಭ್ಯಾಸಕ್ಕಾಗಿ ಮುಂಬಯಿಗೆ ಹೋದಾಗಿನಿಂದ ದತ್ತಮೂರ್ತಿಯು ಪತ್ರ ಬರೆಯುವುದನ್ನೇ ಕಡಿಮೆ ಮಾಡಿದ್ದ. ಹೊಟ್ಟೆಯ ಪಾಡಿಗಾಗಿ ದುಡಿದು, ಉಳಿದ ವೇಳೆಯಲ್ಲಿ ತನ್ನ ಕಲೋಪಾಸನೆಯನ್ನು ನಡೆಯಿಸುವ ಪರಿಸ್ಥಿತಿ ಅವನದು. ಅದರಲ್ಲೂ ಆ ಮುಂಬಯಿಯ ಅಶಾಂತ ವಾತಾವರಣ. ಹೀಗಾಗಿ ಇತ್ತೀಚೆಗೆ ಅವನು ಯಾರ ಸಂಬಂಧವನ್ನೂ ಹೆಚ್ಚಿಗೆ ಇಟ್ಟುಕೊಂಡಿರಲಿಲ್ಲ. ಮೇಲಾಗಿ ತನ್ನ ಅನುಭವ, ಆಪತ್ತುಗಳನ್ನು ಹೇಳಿದರೆ ಇನ್ನೊಬ್ಬರು ಕನಿಕರ ಪಡುವಂತೆಯೇ ಇದ್ದುದರಿಂದ ಅವುಗಳನ್ನು ಯಾರ ಮುಂದೆಯೂ ಹೇಳದೆ ಸುಖಿಯಾಗಿದ್ದೇನೆಂದು ತೋರಿಸುತ್ತ ನಗುನಗುತ ಬಾಳುವನು. 'ಉಂಡಿದೇನೆಂದರೆ ಕರೆದು ಉಣಿಸುವನು ಸಿರಿವಂತ' ಎಂಬುದೇ ಅವನ ಕಿವಿಮಂತ್ರವಾಗಿದ್ದಿತು. ಇಂಥ ಸ್ವಾಭಿಮಾನಿ ಗೆಳೆಯನಿಂದ ಬಹು ದಿನಗಳ ಮೇಲೆ ಬಂದ ಈ ಪತ್ರವು ಶ್ರೇಯಾಂಸನಿಗೆ ಬಹಳ

ಉತ್ಸಾಹವನ್ನುಂಟುಮಾಡಿತು,

ಹಾಗೆಯೇ ಉಳಿದ ಪತ್ರಗಳ ಮೇಲೂ ಶ್ರೇಯಾಂಸ ಲಗುಬಗೆಯಿಂದ ಕಣ್ಣಾಡಿಸತೊಡಗಿದ. ಅವುಗಳ ಭಾವ ಹೀಗಿದ್ದಿತು.

'ಧರ್ಮಾನುರಾಗಿಯಾದ ಶ್ರೇಯಾಂಸನಿಗೆ:—

ಅನೇಕ ಆಶೀರ್ವಾದಗಳು:–ಶ್ರೀ ಜಿನೇಶ್ವರ ಕೃಪೆಯಿಂದಲೂ ಗುರುಗಳ ಆಶೀರ್ವಾದದಿಂದಲೂ ನಮ್ಮ ಧರ್ಮಾನುಷ್ಠಾನಗಳೆಲ್ಲ ಸರಿಯಾಗಿ ಸಾಗಿವೆ. ಜಪ – ತಪ – ಸ್ವಾಧ್ಯಾಯ ಸಾಮಾಯಿತಿಗಳೆಲ್ಲ ಶಾಸ್ತ್ರಾನುಸಾರವಾಗಿ ನಡೆದಿವೆ. ಇನ್ನೆರಡು ದಿನಗಳಲ್ಲಿ ನಾನು ಇಲ್ಲಿಂದ ಹೊರಟು, ಬರುವಾಗ ಶ್ರೀಕ್ಷೇತ್ರ, ಗಜಪಂಥಕ್ಕೆ ಹೋಗಿ ಶ್ರೀ ಆಚಾರ್ಯ ಶಾಂತಿಸಾಗರರ ದರ್ಶನವನ್ನು ಪಡೆದು ಊರ ಕಡೆಗೆ ಬರುವೆ. ಒಂದು ರವಿವಾರ ಬಂದು ಭೆಟ್ಟಿಯಾಗು. ಕೆಲವು ಮಹತ್ವದ ವಿಷಯಗಳನ್ನು ಮಾತನಾಡಬೇಕಾಗಿದೆ. ಸದ್ಧರ್ಮದಲ್ಲಿ ಶ್ರದ್ಧೆಯಿರಲಿ.

ಗಿರಿನಾರ.
ಮುನಿನಿವಾಸ.

ಇಂತು–ಪದ್ಮಪ್ಪ

'...............................,

ನಿನ್ನ ಕತೆಯನ್ನು ಓದಿ ಹಿಡಿಸಲಾರದಷ್ಟು ಆನಂದವಾಯಿತು. ಅದನ್ನು ಇಲ್ಲಿ ಎರಡು ಮಾತುಗಳಲ್ಲಿ ವ್ಯಕ್ತಪಡಿಸಲು ಸಾಧ್ಯವಿಲ್ಲ. ಇಂಥ ಕಥನ ಕಲಾದೇವಿಗೆ ಮರುಳಾಗಿಯೇ ನಮ್ಮನ್ನೆಲ್ಲ ಮರೆತಂತೆ ತೋರುತ್ತದೆ. ಒಮ್ಮೆ ದರ್ಶನಲಾಭವಾಗಲಿ.

ನಿನ್ನ–ಲಲಿತಾ'

ಅರನಿದ್ರೆಯಲ್ಲಿದ್ದವನ ಮುಖದ ಮೇಲೆ ತಣ್ಣೀರು ಚಿಮುಕಿಸಿದಂತೆ ಆಯಿತು. ಶ್ರೇಯಾಂಸ ತಿರುತಿರುಗಿ ಕಾಗದವನ್ನು ನೋಡಿದ. ಏನೋ ಒಂದು ಹೊಸ ಭಾವನೆಯು ಆ ಪತ್ರದಿಂದ ಪ್ರಕಟ

ವಾಗುವಂತಿತ್ತು. ಮೆಲ್ಲನೆ ಆ ಕಾಗದವೊಂದನ್ನು ಕೋಟಿನ ಜೇಬಿನಲ್ಲಿಟ್ಟು ಇನ್ನೊಂದು ಕಾಗದವನ್ನು ಓದತೊಡಗಿದ.

'ಶಿಷ್ಯೋತ್ತಮ ಶ್ರೇಯಾಂಸನಿಗೆ :

ಆತ್ಮಾರಾಮ ಮಾಸ್ತರರ ಅನೇಕ ಆಶೀರ್ವಾದಗಳು. :—

ಶ್ರೀ ಕೃಪೆಯಿಂದ ಇತ್ತಕಡೆಗೆ ಹವೆ ಮಳೆ ಬೆಳೆಗಳೆಲ್ಲ ಚೆನ್ನಾಗಿವೆ. ನಾವೆಲ್ಲ ಸುಖರೂಪದಿಂದ ಇದ್ದೇವೆ. ಈಗ ಮುದ್ದಾಂ ನಿನಗೆ ಪತ್ರ ಬರೆಯಲಿಕ್ಕೆ ಕಾರಣವೇನಂದರೆ :—ನಿನ್ನೆ ನಿನ್ನ ತಂದೆ ಯವರು ನನ್ನ ಕಡೆಗೆ ಬಂದಿದ್ದರು. ಬಹಳ ಹೊತ್ತಿನವರೆಗೆ ಆ ಮಾತು ಈ ಮಾತುಗಳನ್ನು ಆಡುತ್ತ ಕುಳಿತಿದ್ದೆವು. ಹಾಗೆಯೇ ಮಾತಿಗೆ ಮಾತು ಬಂತು. ಸೌ|| ಲಕ್ಷ್ಮಿಯನ್ನು ಕರೆದು ತಂದು ಬಹಳ ದಿನ ಗಳಾದುವಂತೆ. ಹಿಂದಕ್ಕೆ ಎಲ್ಲರೂ ಕೂಡಿ ಸ್ತವನಿಧಿಯ ಬ್ರಹ್ಮನಾಥ ನಿಗೂ ಹೋಗಿ ಬಂದಿದ್ದೀರಿ. ಆದರೂ ಊರ ಕಡೆಗೆ ಬರಲಿಕ್ಕೆ ನೀನಷ್ಟು ಆತುರನಾಗಿರುವಂತೆ ತೋರುವುದಿಲ್ಲ. ಮನೆತನಕ್ಕೆ ಒಬ್ಬನೇ ಮಗನಾದ ನಿನ್ನಿಂದ ತಂದೆ ತಾಯಿಗಳು ವಂಶೋದ್ಧಾರವಾಗಲಿ ಎಂದು ಆತುರಪಡುತ್ತಿದ್ದರೆ ಅದರಲ್ಲಿ ನನಗೇನೂ ತಪ್ಪೆನಿಸುವದಿಲ್ಲ. ಲಗ್ನವಾದ ನೀನು ಹೀಗೆ ವರ್ತಿಸಿದರೆ ದೇಹಸಂಬಂಧ ಅದೆಂದಿಗೂ ತಪ್ಪದು. ಮನುಷ್ಯ ಧ್ಯೇಯವಾದಿಯಾಗಿರಲಿ, ಕಲೋಪಾಸಕನಿರಲಿ ತನ್ನ ಕರ್ತವ್ಯವನ್ನೂ ಹೊಣೆಯನ್ನೂ ಎಂದೂ ಮರೆಯಬಾರದು. ನೀನು ಮರೆಯಲಿಲ್ಲ ಎಂದು ನಾನು ನಂಬುವೆ. ಈ ಪತ್ರವನ್ನು ಕಂಡ ಕೂಡಲೇ ಊರಿಗೆ ಬಂದು ಹೋಗು ! ನಿನ್ನ ಭೆಟ್ಟಿಗಾಗಿ ದಾರೀ ಕಾಯುತ್ತಿರುವೆ.

ಸಮ್ಮೇಲನಕ್ಕಾಗಿ ಬೆಳಗಾಂವಿಗೆ ಹೋದದ್ದನ್ನು ಹಿಂದೆ ಪ್ರಸ್ಥದ ಕಾಲಕ್ಕೆ ಬಂದಾಗ ಹೇಳುತ್ತಿದ್ದಿಯೆಂದು ಬಾಳಪ್ಪ ಅನ್ನುತ್ತಿದ್ದ. ಬೆಳಗಾಂವಿಗೆ ಹೋದಾಗ ಆ ನಮ್ಮ ಕ್ಲಾರ್ಕನಿಗೆ ಭೆಟ್ಟಿಯಾಗಿ ಬಂದಿರುವೆಯಾ ? ನೌಕರಿಯು ಖಾಯಂ ಆಗುವ ಬಗೆ ಏನಾದರೂ

ತಿಳಿದಿದೆಯೋ ? ಇಲ್ಲಿ ಬಂದಾಗ ಎಲ್ಲ ಮಾತಾಡೋಣ.... ಮುಂದಿನ ವ್ಯವಸ್ಥೆಯನ್ನು ಮಾಡೋಣ. ಇಂತು-ಅನೇಕ ಆಶೀರ್ವಾದಗಳು.

—ಆತ್ಮಾರಾಮ ಶಾಸ್ತ್ರಿ.'

ಗುರುಗಳ ಈ ಪತ್ರವನ್ನು ಓದುತ್ತ ಹೋದಂತೆ ಶ್ರೇಯಾಂಸನ ಮನಸ್ಸು ಕುಗ್ಗುತ್ತ ನಡೆಯಿತು. ಉತ್ಸಾಹ ಇಳಿಯಿತು. ಎಲ್ಲರೂ ಕಷರು ಕಾಯಿಯನ್ನು ಒತ್ತಿ ಹಣ್ಣು ಮಾಡಲಿಕ್ಕೇ ಯತ್ನಿಸುತ್ತಿದ್ದಾರಲ್ಲ ಎಂದುಕೊಂಡು ಕೊರಗಿದ, ನೊಂದ. ಎಲ್ಲರೂ ಪರಂಪರೆಯ ದಾಸ ರಾಗಿಯೇ ಬದುಕೆಂದು ಹೇಳುವವರು. ಒಬ್ಬರೂ ಈ ಬಂಧನ ಗಳನ್ನೆಲ್ಲ ಹರಿದೊಗೆದು, ಧ್ಯೇಯವಾದಿಯಾಗಿ ಬಾಳೆಂದು ಪ್ರೋತ್ಸಾ ಹಿಸುವವರಿಲ್ಲ. ಮನಸ್ಸೊಪ್ಪದ ಹೆಣ್ಣಿನೊಡನೆ ಸಂಸಾರ ಮಾಡೆಂದರೆ ಹೇಗೆ ? ಹೃದಯದಲ್ಲಿ ಅನುರಾಗವಿಲ್ಲದೆ ಗಂಡ ಹೆಂಡಿರಾಗಿ ಬಾಳಿದರೆ ಏನು ಬಂತು ?

ಅನುರಾಗ ಹುಟ್ಟುವುದು ಯಾವಾಗ ? ಕೂಡಿ ಇದ್ದಾಗ ಅಲ್ಲವೇ ?

ಅವಳೊಂದು ಊರಲ್ಲಿ ನೀನೊಂದು ಊರಲ್ಲಿ ಅಂದ ಮೇಲೆ ಅನುರಾಗ ಉತ್ಪನ್ನವಾಗುವದೆಂತು ?

ಅಂದರೆ....? ಅದು ಮೊದಲಿನಿಂದಲೂ ಇದ್ದರಲ್ಲವೇ ಈಗ ಉತ್ಪನ್ನವಾಗುವುದು ?

ಹೆಣ್ಣಿನ ಕಡೆಗೆ ನಿನ್ನ ಆಕರ್ಷಣವೇ ಇಲ್ಲವೆ ?

ಅಂದ ಮೇಲೆ ಪಾಪ ! ಲಕ್ಷ್ಮಿ ಏನು ಮಾಡಿದ್ದಾಳೆ ?

ಅವಳನ್ನು ಒಪ್ಪದಿದ್ದರೆ ಮದುವೆಯನ್ನು ಆದುದೇಕೆ ?

ಆಗ ಈ ವಿಚಾರಗಳೇ ಬರಲಿಲ್ಲ....!

ತಿಳಿಯದೆ ಮಾಡಿದ ತಪ್ಪಿನ ಫಲವನ್ನು ಭೋಗಿಸಲೇ ಬೇಕಲ್ಲವೇ ?

ತಪ್ಪು ಕೊನೆಯುವರೆಗೂ ತಪ್ಪಾಗಿಯೇ ಉಳಿಯಬೇಕೇ ?

ಕೆಲವೊಂದು ವಿಷಯಗಳಲ್ಲಿ ಬೇರೆ ಮಾರ್ಗವೇ ಇಲ್ಲ....!

ಅದೇಕಿಲ್ಲ ?

ಶಂಕರಗೌಡನು ಬರದಿದ್ದರೆ ಶ್ರೇಯಾಂಸ ಅದೆಷ್ಟು ಹೊತ್ತು ವಿಚಾರದಲ್ಲಿ ಮಗ್ನನಾಗಿರುತ್ತಿದ್ದನೋ ಯಾರಿಗೆ ಗೊತ್ತು ? ದೂರದಿಂದಲೇ ಶಂಕರಗೌಡ ಕೇಳಿದ. ಧ್ವನಿಯಲ್ಲಿ ಉತ್ಸಾಹ ಕುಣಿತಗಳು ಇದ್ದುವು.

"ನಮ್ಮ ಸಾಹಿತಿಗಳಿಗೆ ಈಗಾಗಲೇ ಪತ್ರಗಳು ಹೊರೆ ಹೊರೆಯಾಗಿ ಬರುವಂತೆ ತೋರುತ್ತಿದೆ...."

"ಸಾಹಿತಿಯೋ, ಸಾಯಿತಿಯೋ ?"

ಬೇಸರದ ದನಿಯಲ್ಲಿ ಉತ್ಸಾಹವನ್ನು ಒಡಮೂಡಿಸುತ್ತ ಪ್ರತಿಯಾಗಿ ಶ್ರೇಯಾಂಸ ಕೇಳಿದ.

"ಮಾತಿನಲ್ಲಿ ಬೇರೆ ಆರಂಭವಾಯಿತೇ ?"

"ಹೂಂ ! ಆರಂಭವಾಗಿದೆ ಬಾ !"

ಶ್ರೇಯಾಂಸ ಸ್ವಾಗತಿಸಿದ.

ಈಗಾಗಲೇ ಶ್ರೇಯಾಂಸನ ಬೇಸರದ ಕಾರಣವು ಶಂಕರಗೌಡನಿಗೂ ತಿಳಿದಿತ್ತು. ಅಂದಿನ ಅಂಚೆಯಿಂದಲೇ ಅವನಿಗೂ ಒಂದು ಬಾಳಪ್ಪನಿಂದ ಕಾಗದ ಬಂದಿತ್ತು. ಅದರಲ್ಲಿ ಎಲ್ಲ ವಸ್ತುಸ್ಥಿತಿಯನ್ನೂ ವಿವರಿಸಿ, ಕೊನೆಗೆ ಶ್ರೇಯಾಂಸನನ್ನು ಊರಿಗೆ ಕಳಿಸುವಂತೆ ಶಂಕರಗೌಡನಿಗೆ ವಿನಂತಿಸಿಕೊಳ್ಳಲಾಗಿತ್ತು. ಆ ವಿನಂತಿಗೆ ಮರ್ಯಾದೆಯಿತ್ತು, ತನ್ನ ಕರ್ತವ್ಯವನ್ನು ನೆರವೇರಿಸಲಿಕ್ಕೆಂದೇ ಶಂಕರಗೌಡನು ಈಗ ಇತ್ತ ಬಂದಿದ್ದನು. ಇದನ್ನೇನೂ ಅರಿಯದ ಶ್ರೇಯಾಂಸನು ಓದದೆ ಉಳಿದ ಇನ್ನೊಂದು ಕಾಗದವನ್ನು ತಾನು ನೋಡಿ ಗೌಡನ ಕೈಗೆ ಕೊಟ್ಟನು.

"ಇವರದೆಲ್ಲಿಯ ಗುರುತು ನಿಮಗೆ ?"

ಶಂಕರಗೌಡ ಕಾಗದವನ್ನು ಓದಿ, ಬೆರಗಿನಿಂದ ಕೇಳಿದ.

"ನಮ್ಮೂರಿಗೆ ನಾಟಕವನ್ನು ತಕ್ಕೊಂಡು ಬಂದಿದ್ದರಲ್ಲ, ಬಂದಕ್ಕೆ. ಆಗ ನನ್ನ 'ವಿಜಯ ಸಾಮ್ರಾಜ್ಯ' ನಾಟಕವನ್ನೂ ಆಡುವುದು ಗೊತ್ತಾಗಿ, ಎಲ್ಲ ಸಿದ್ಧತೆ ಸಹಿತ ಆಗಿತ್ತು."

"ಹೀಗೇನು ? ಯಾವ ಕಂಪನಿಯದು ?"

"ರಾಮತೀರ್ಥದ ಶ್ರೀಸರಸ್ವತೀ-ಅಲ್ಲ-ಶಾರದಾ ಸಂಗೀತ ನಾಟ್ಯ ವಿನೋದಿನಿ ಕಂಪನಿ ಎಂದು ಆಗ ಹೆಸರಿತ್ತು. ಈಗ ಯಾವ ಹೆಸರನ್ನು ಇಟ್ಟುಕೊಂಡಿದ್ದಾರೋ ಏನೋ ತಿಳಿದಿಲ್ಲ...."

"ಹೇಗಿದೆ ಕಂಪನಿ ?"

"ಹೇಗಿರುವುದು ? ಎಲ್ಲ ಕಂಪನಿಗಳು ಇರುವಂತೆಯೇ ಇದೆ ; ಆಯಿತು, ಅದರ ಮಾಲಕ ಬಹಳ ಒಳ್ಳೆಯವ. ನಮ್ಮೂರಿಗೇ ಕಂಪನಿಯ ಇತಿಶ್ರೀ ಆಯಿತು." ಸ್ವಲ್ಪ ತಡೆದು ಶ್ರೇಯಾಂಸ ಮಾತನ್ನು ಮುಂದರಿಸಿದ, "ಕಂಪನಿಯೊಳಗಿನ ಹೆಣ್ಣುಗಳೆಂದರೆ ಹೀಗೇ !"

"ಹೆಂಗಸರು ಬೇರೆ ಇದ್ದಾರೇನು ನಾಟಕದೊಳಗೆ ?"

"ಹೌದು ಮತ್ತೆ ! ಇಲ್ಲದಿದ್ದರೆ ದುಡ್ಡು ಆಗುವುದು ಹೇಗೆ ? ಆ ಹೆಣ್ಣೇ ನಮ್ಮೂರಿಗೆ ಬೆಂಕಿಹಚ್ಚಿ ಇಟ್ಟಿತು. ಅವಳಿಗಾಗಿ ಅಂದು ಊರಲ್ಲಿ ಉಂಟಾದ ಎರಡು ಪಂಗಡಗಳು ಇನ್ನೂ ಮುರಿದಿಲ್ಲ ! ಗೌಡರೆಂದರೆ ಎಲ್ಲರೂ ನಿನ್ನಂಥವರೇ ಇರುವರೆನ್ನುವಿ ಏನು ? ನಮ್ಮೂರ ಜಿನಗೌಡರ ಆಟ! ಕೇಳುವದೇನು? ಹೆಣ್ಣನ್ನು ತಾನು ಎತ್ತಿ ಒಯ್ದು, ಮೇಲೆ ಕಂಪನಿ ಒಡೆಯರನ್ನು ಕೂಡಿಕೊಂಡು, ಊರೊಳಗೆ ಅನೇಕರ ಮೇಲೆ ಕೇಸು ಮಾಡಿಸಿದ. ಆ ಕೇಸು ಬುದ್ಧೀ ಕಲಿಸಿತು ನಮ್ಮ ನೀರಲಕಟ್ಟಿ ಮಾಸ್ತರ ರಿಗೆ. ಈಗ ಅವರು ಬರೇ ಕಾರಭಾರಿ ವ್ಯಕ್ತೀನೇ ಆಗಿಬಿಟ್ಟಿದ್ದಾರೆ...."

"ನೋಡು ಮತ್ತ ! ಹಾಗೆ ಏನಾದರೂ ಇದ್ದರೆ ಸುಮ್ಮನೆ ನಾವು ಅವರ ಬೆನ್ನು ಏಕೆ ಹತ್ತಬೇಕು ?"

"ಯಾರು ?"

" ನಿನ್ನ ಕಂಪನಿಯವರು !"

"ಅವರು ಹಾಗೇನೂ ಇದ್ದಂತೆ ತೋರವದಿಲ್ಲ...." ತುಸು ದನಿ ಬದಲಿಸಿ "ಕನ್ನಡ ಕಂಪನಿಗಳಿಗೆ ನಿಮ್ಮಂಥವರು ಆಶ್ರಯ ಕೊಡದಿದ್ದರೆ ಯಾರು ಕೊಡಬೇಕು ?" ಶ್ರೇಯಾಂಸ ಕೇಳಿದ.

"ಯಾಕೆ ನಿನ್ನ ನಾಟಕವನ್ನು ರಂಗ ಭೂಮಿಗೆ ತರುವ ಹಂಬಲ ವೇನು ?"

ಶಂಕರಗೌಡ ಕೆಣಕುವ ರೀತಿಯಲ್ಲಿ ನುಡಿದ.

"ಅದಂತೂ ನಾಟಕಕಾರನ ಸ್ವಾಭಾವಿಕವಾದ ಹಂಬಲ !"

"ಏನಡ್ಡಿಯಿಲ್ಲ. ಅವರಿಗೊಂದು ಕಾಗದ ಬರೆ. ಎರಡೂರು ಜಾತ್ರೆಯ ಸುಮಾರಿಗೆ ಇಲ್ಲಿಯೇ ಕ್ಯಾಂಪು ಹಾಕಲಿ. ಅಷ್ಟು ಹೊತ್ತಿಗೆ ನಿಮ್ಮ ಸಾಲೆಯ ಪರೀಕ್ಷೆಯೂ ಮುಗಿದಿರುತ್ತದೆ...."

ಶಂಕರಗೌಡ ತನ್ನ ಸಲುವಾಗಿ ನಾಟಕ ಕಂಪನಿಯವರಿಗೆ ಊರಲ್ಲಿ ಬರಲಿಕ್ಕೆ ಅನುವುಮಾಡಿಕೊಡಲೊಪ್ಪಿದನೆಂದು ಶ್ರೇಯಾಂಸ ಭಾವಿಸಿದ. ಗೆಳೆಯನ ವಿಷಯಕ್ಕೆ ತುಂಬ ಅಭಿಮಾನವೂ ಅನ್ನಿಸಿತು. ಹೀಗೆ ನಾಲ್ಕಾರು ಹಳ್ಳಿಗಳ ಗೌಡರು ನೆರವಾದರೆ ಸಾಕು. ಕಂಪನಿಯ ಸ್ಥಿತಿಯು ಸುಧಾರಿಸುವದು. ಇನ್ನೂ ಏನೇನೋ ವಿಚಾರಗಳು ಶ್ರೇಯಾಂಸನ ತಲೆಯಲ್ಲಿ ಬಂದುಹೋದವು. ಕನ್ನಡ ಕಂಪನಿ ನಾಟಕ ಗಳ ಸ್ಥಿತಿಗತಿ, ಅವುಗಳ ಸ್ವರೂಪ. ಸುಧಾರಣೆಗಳನ್ನು ಯೋಚಿಸಿದ. ಮೊನ್ನೆ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ನೋಡಿದ ಶ್ರೀರಂಗರ 'ಅಶ್ವಮೇಧ'ಕ್ಕೂ ಕಂಪನಿ ನಾಟಕಗಳಿಗೂ ಹೋಲಿಸಿ, ತೂಗಿ ನೋಡಿದ. ಒಂದು ಮುಗಿಲು ಆದರೆ ಇನ್ನೊಂದು ನೆಲ-ಅಲ್ಲ-ಕಂದರ. ಈ ಅಂತರವನ್ನು ಕಳೆಯದೆ ಕನ್ನಡ ನಾಟ್ಯ ಕಲೆಗೆ ಉಳಿಗಾಲವೇ ಇಲ್ಲ. ಶ್ರೀರಂಗ, ಕೈಲಾಸಂರ ನಾಟಕಗಳು ಎಷ್ಟು ಜನರಿಗೆ ತಿಳಿಯುವವು ? ಚಲೋ ಕಲಿತವರೇ ಓದಿ ತಿಳಿದುಕೊಳ್ಳಲು ತಲೆ ತುರಿಸಿಕೊಳ್ಳಬೇಕಾ ಗುವುದು. ಅಂದಮೇಲೆ ಹಳ್ಳಿಗರ ಪಾಡೇನು ?

ನೋಡೋಣ, ಕಂಪನಿಯವರಾದರೂ ಇಲ್ಲಿಗೆ ಬರಲಿ. ಕೆಲವು ಹೊಸ ಹೊಸ ಪ್ರಯೋಗಗಳನ್ನಾದರೂ ಮಾಡಿ ನೋಡಿದರಾಯಿತು ಜನರ ಅಭಿರುಚಿಯನ್ನು ಸುಧಾರಿಸಲಿಕ್ಕೆ ಯತ್ನಿಸಿದರೆ ತಿಳಿಯುವುದು, ಕನ್ನಡ ರಂಗಭೂಮಿಯ ಭವಿತವ್ಯ.

ಇಷ್ಟರಲ್ಲಿ ಸಾಲೆ ಬಿಡುವ ಸೂಚನೆಯ ಗಂಟೆಯು ಅವನನ್ನು ಎಚ್ಚರಿಸಿತು. ಹಾಗೆಯೇ ಎದುರಿಗೆ ಶಂಕರಗೌಡ ಇದ್ದುದರಿಂದ ನುಡಿದ:

"ಆಯಿತು; ಸಾಲೆಯೂ ಬಿಟ್ಟಿತು. ಎಲ್ಲಿಗಾದರೂ ಅಡ್ಡಾಡ ಲಿಕ್ಕೆ ಹೋಗೋಣ ನಡೆಯಿರಲ್ಲ."

"ಅದಕ್ಕಾಗಿಯೇ ಬಂದಿದ್ದೆ ನಾನೂ !"

ಎಂದ ಶಂಕರಗೌಡ. ಅವನಿನ್ನು ತಾನು ಬಂದ ಕಾರ್ಯವನ್ನು ನೆರವೇರಿಸಬೇಕಿತ್ತು. ಆ ವಿಷಯವೆತ್ತಲು ಈ ಸಾಲೆಯು ಉಪ ಯುಕ್ತವಲ್ಲೆಂದು ತಿಳಿದೇ ಅವನು ಬೇರೆ ಸಂಗತಿಗಳ ಕಡೆಗೆ ಹೊರಳಿದ್ದ.

ಶ್ರೇಯಾಂಸನಿಗೂ ಆತ್ಮೀಯ ಗೆಳೆಯನ ಜೊತೆಗೆ ಈಗ ಮಾತ ನಾಡಬೇಕಿತ್ತು. ತನ್ನ ದಾಂಪತ್ಯ ಜೀವನದ ತೊಡಕನ್ನೆಲ್ಲ ಹೇಳಿ ಕೊಂಡು ಹೃದಯವನ್ನು ಹಗುರುಮಾಡಿಕೊಳ್ಳಬೇಕಾಗಿತ್ತು, ಮುಂದಿನ ದಾರಿಯನ್ನು ನಿಶ್ಚಯಿಸಬೇಕಾಗಿತ್ತು.

ಗೆಳೆಯರಿಬ್ಬರೂ ಕೂಡಿ ನದಿಯ ಕಡೆಗೆ ಅಡ್ಡಾಡಲಿಕ್ಕೆ ಹೊರಟರು. ಊರ ಜನರು ನದಿಗೆ ಹೋಗುವ ದಾರಿಯನ್ನು ಬಿಟ್ಟು, ಇವರು ಮಳಿಗೆಯೊಳಗಿನ ಕಾಲುದಾರಿಯೊಂದನ್ನು ಹಿಡಿದು, ಸ್ವಲ್ಪ ದೂರ ಸಾಗಿದರು. ಸುತ್ತಲೂ ಅಚ್ಚ ಹಸುರು ಪೈರು, ಅದರ ಮೇಲೆ ಸಾಯಂಕಾಲದ ಸ್ವರ್ಣವರ್ಣದ ಸೂರ್ಯಕಾಂತಿ. ಅದರಿಂದ ಸೃಷ್ಟಿ ಗೊಂದು ಅಪೂರ್ವ ಸೌಂದರ್ಯವು ಬಂದಂತಿತ್ತು. ಇದನ್ನು ನೋಡಿ ಶಂಕರಗೌಡನ ಮನಸ್ಸು ಅರಳಿತು, ಶ್ರೇಯಾಂಸನ ಮುಖವೂ ಪ್ರಫುಲ್ಲಿತವಾಗಿತ್ತು. ಆದರೂ ಗೆಳೆಯನ ಹಿಂದೆ ಹಿಂದೆ, ಕೈಗೆ ಬಂದ

ಹುಲ್ಲುಕಡ್ಡಿಯೊಂದನ್ನು ಮುರಿದು, ಹಲ್ಲೊಳಗೆ ಹಾಕಿಕೊಳ್ಳುತ್ತ ಸಾಗಿದ್ದ. ತುಸು ದೂರ ಹೋದಮೇಲೆ ನದಿಯ ಒಡಲಿನ ನೆಲ ಬಂದಿತು. ಇಳಿಜಾರಾದ ಉಸುಕಿನ ಭೂಮಿಯದು. ಅಲ್ಲಿ ಹೋಗಿ ಇಬ್ಬರೂ ಕುಳಿತರು.

ಇದೀಗ ಸೂರ್ಯಾಸ್ತವಾಗುತ್ತಲಿದ್ದಿತು ಮೇಲೆ ನೀಲ ಗಗನಾಂಗನದಲ್ಲಿ ತುಣುಕು ಮೋಡಗಳು ಕಮಲಗಳಂತೆ ಕಂಗೊಳಿಸುತ್ತಿದ್ದುವು. ಎದುರಿಗೆ ಹರಿಯುತ್ತಿರುವ ಗಭೀರ ಶಾಂತ ಪ್ರವಾಹ. ಅದರಲ್ಲಿ ಮೂಡಿದ ನದಿಯ ಆಚೆಯ ದಂಡೆ, ಅದಕ್ಕೆ ಹಿನ್ನೆಲೆಯಾಗಿ ಶೋಭಿಸುವ ಪಡುವಣ ದಿಗಂಗಣ ಎಲ್ಲವೂ ಸುಂದರತರವಾಗಿ, ಮನಸ್ಸನ್ನು ಆಹ್ಲಾದಗೊಳಿಸಲು ಯತ್ನಿಸುತ್ತಿವೆ ಅದು ತರುಣ ಮನಸ್ಸಿನ ಮೋಹಕ ಕನಸಿನಂತಿದೆ. ಆಗಾಗ್ಗೆ ನದಿಯಲ್ಲಿ ಏಳುವ ತೆರೆಗಳಿಂದ ಆ ನಿತಾಂತ ಮನೋಹರ ಸೃಷ್ಟಿ ಸೌಂದರ್ಯವೂ ಕೂಡ ಒಂದು ಕ್ಷಣ ಸರದಾಡುವುದು, ಮಸುಮಸುಕಾಗುವುದು. ಆದರೂ ಅದರಲ್ಲೂ ಒಂದು ನವೀನ ಚೆಲುವು ಉಂಟಾಗಿ, ಸೌಂದರ್ಯವು ಸಜೀವವಾಗಿರುವುದರ ಭಾಸವನ್ನು ಹುಟ್ಟಿಸುವುದು, ಸ್ಫೂರ್ತಿಯನ್ನು ಕೊಡುವುದು. ಆಗೊಂದು ಈಗೊಂದು ಹಕ್ಕಿಗಳು ಹಾರಿಹೋಗುವಾಗ ಅವುಗಳ ಛಾಯೆ ಆ ಚಿತ್ರದಲ್ಲಿ ಮೂಡಿ ಮರೆಯಾಗುವುದು. ಸೌಂದರ್ಯಲೋಕದ ಸಂಚಾರಕ್ಕೆ ಹೊರಟ ದಿವ್ಯ ಜೀವಿಗಳ ಕಲ್ಪನೆಯನ್ನು ತರುವುದು. ನಿರಂಕುಶ ಮತಿಗಳಾಗಿ ವಿಹರಿಸುವ ಹಕ್ಕಿಗಳನ್ನೂ, ಅವುಗಳ ಆನಂದ ಸ್ವರವನ್ನು ಕೇಳಿದಾಗ ಅದೊಂದು ಗಂಧರ್ವ ಲೋಕವಂತೆ ಭಾಸವಾಗುವುದು. ಈ ನಿಸರ್ಗ ಚಿತ್ರವನ್ನೇ ತುಸು ಹೊತ್ತು ನಿಟ್ಟಿಸುತ್ತ ಇಬ್ಬರೂ ಮೌನವಾಗಿ ಕುಳಿತಿದ್ದರು.

ಕೊನೆಗೆ ಮೌನದ ಕಟ್ಟೆಯೊಡೆಯಿತು. ಶಂಕರಗೌಡನೇ ಮಾತಿಗೆ ಆರಂಭಿಸಿದ: "ಊರಿಗೆ ಹೊರಡುವ ವಿಚಾರ ಎಲ್ಲಿಗೆ ಬಂತು?"

ಹಿಂದು ಮುಂದಿನ ವಿಚಾರಗಳನ್ನೇನೂ ಮುಂಡಿಸದೆ - ಅಕಸ್ಮಾತ್ತಾಗಿ ತನ್ನ ಹೃದಯವನ್ನೇ ಪ್ರತಿಬಿಂಬಿಸುವಂತಿರುವ ಪ್ರಶ್ನೆಯನ್ನು - ಶಂಕರಗೌಡನು ಕೇಳಿದ್ದಕ್ಕೆ ಶ್ರೇಯಾಂಸನಿಗೆ ಆಶ್ಚರ್ಯವಾಯಿತು. ಅವನ ಕಣ್ಣುಗಳಲ್ಲಿಯೇ ದೃಷ್ಟಿಯಿಟ್ಟು, ಒಂದು ಕ್ಷಣ ನಿರೀಕ್ಷಿಸಿದ ಶ್ರೇಯಾಂಸ. ತನ್ನ ಕೋಟಿನ ಜೇಬಿನಲ್ಲಿ ಕಾಗದಗಳೆಲ್ಲ ಇದ್ದುದನ್ನು ಕೈಹಾಕಿ ಅರಿತುಕೊಂಡ. ಇನ್ನೇನೋ ಕೇಳುವವನಿದ್ದ. ಅಷ್ಟರಲ್ಲಿ ಶಂಕರಗೌಡನೇ ನಗುವ ಸ್ವರದಲ್ಲಿ ನುಡಿದ,—

"ನಿನ್ನ ಟಪಾಲ ಗಿಪಾಲ ಏನೂ ಹೋಗಿಲ್ಲವಲ್ಲ !"

"ಏನು ಗೊತ್ತು ? ಗೌಡರ ಸಂಗತಿ !"

"ನಾನೂ ಏನು ನಿಮ್ಮೂರ ಜಿನಗೌಡನಂತೆ ಎಂದು ತಿಳಿದಿರೋ ?"

"ಗೌಡರೆಂದರೆ ಎಲ್ಲರೂ ಒಂದೇ ಅಲ್ಲ !"

"ಅದಿರಲಿ. ಊರಿಗೆ ಎಂದು ಹೊರಡುವಿರಿ ?"

"ಯಾತಕ್ಕೆ ?"

"ಎಲ್ಲ ಗೊತ್ತಿದೆ ನನಗೆ ! ನಿಮ್ಮ ಹಿರಿಯರಿಂದ ಕಾಗದ ಬಂದಿದೆ ನನಗೂ ; ನಿಮ್ಮ ಕೈಕಾಲುಗಳನ್ನು ಕಟ್ಟಿ ಮೋಟಾರಿನ ಮೇಲೆ ಹಾಕಿ ಕಳಿಸಲಿಕ್ಕೆ. ತಿಳಿಯಿತೋ ?"

"ಮೋಟಾರಿನ ಮೇಲೋ ಕೆಳಗೋ ?" ಶ್ರೇಯಾಂಸನ ಪ್ರಶ್ನೆ ಚಿಕ್ಕದಾಗಿತ್ತಾದರೂ ಅದರಲ್ಲಿ ಅವನ ಹೃದಯದ ಮೂಕ ವೇದನೆಯೆಲ್ಲ ತುಂಬಿತ್ತು. ಹಿರಿಯರು ಎಲ್ಲ ಕಡೆಯಿಂದಲೂ ತರುತ್ತಿರುವ ಒತ್ತಾಯದ ಕಲ್ಪನೆಯು ಅವನಿಗೀಗ ಆಗಹತ್ತಿತು. ಏನಾದರೂ ಇದು ಬೆನ್ನು ಬಿಡಲಾರದ ಕರ್ಮವೆಂದು ತೋರಹತ್ತಿತು.

"ಇದರಲ್ಲೇನು ಅಂಥ ವಿಚಾರ, ಎನ್ನುವೆ ನಾನು !"

"ಇಲ್ಲೆನ್ನುವಿಯೋ ?"

"ಇಲ್ಲ: ವಿಚಾರ ಮಾಡುವ ಸಂದರ್ಭ ಎಂದೋ ಕಳೆದು

ಹೋಗಿದೆ."

"ಅಂದ ಮೇಲೆ ಈ ಜೇಡ ಬಲೆಯಿಂದ ಮುಕ್ತಿಯಿಲ್ಲವೆನ್ನು !"

"ಇರಲಾರದು. ನಮ್ಮ ಸಮಾಜ ರಚನೆಯೇ ಹಾಗಿದೆ"

"ನೀನೂ ಹೀಗೆನ್ನುವಿಯೋ ?"

"ಯಾರೇನು ?"

"ಲಕ್ಷ್ಮಿಯ ಬಂಧನದಲ್ಲಿ ಸಿಕ್ಕವರು ಹೀಗೆಯೇ ಒದ್ದಾಡ ಬೇಕೇನೋ !"

"ನೋಡು! ಒಳಗೆಷ್ಟು ಪ್ರೀತಿ! ಸಹಜ ಹೆಂಡತಿಯ ಹೆಸರನ್ನೂ ಕೂಡ ಹೇಳುವಿ."

ಅಂಥ ಪ್ರಸಂಗದಲ್ಲೂ ಕೂಡ ನಗೆಯಾಡಲು ಶಂಕರಗೌಡ ಯತ್ನಿಸಿದ.

"ನಾಳೆ ನಿನ್ನ ಮದುವೆಯ ಸಂದರ್ಭ ಬರಲಿ, ಅಂದರೆ ಎಲ್ಲ ಗೊತ್ತಾಗುವುದು...."

ಶ್ರೇಯಾಂಸ ಗಂಭೀರವಾಗಿಯೇ ನುಡಿದು ಸುಮ್ಮನಾದ.

ಸುತ್ತಲೂ ಮೆಲ್ಲನೆ ಕತ್ತಲು ಆವರಿಸಿದ್ದಿತು. ನದಿಯ ತೀರದಿಂದ ಗಿಡಗಂಟಿಗಳ ಬುಡದಿಂದ ಚೊಗಚಿಯ ಸಾಲುಗಳ ಬದಿಯಿಂದ, ಮುಚ್ಚಂಜೆಯ ಕತ್ತಲೆಯು ಮೆಲ್ಲನೆ ಕಪ್ಪು ಮುಸುಕನ್ನು ಹಾಕಿ ಕೊಂಡು ಹೊರಗೆ ಬರತೊಡಗಿತು. ಊರ ಮಗ್ಗುಲಿನಿಂದ ತೇಲಿ ಬರುವ ಸಾಯಂಕಾಲದ ಅಡಿಗೆಯ ಹೊಗೆಯು, ದನಕರುಗಳ ಕಾಲಿನ ಧೂಳಿ ಸೇರಿ ಅದಕ್ಕೆ ಇನ್ನಿಷ್ಟು ವಿಕಾರ ರೂಪವನ್ನು ಕೊಡುತ್ತಿದ್ದವು. ಆಕಾಶದಲ್ಲಿ ಪಶ್ಚಿಮದಿಂದ ಹರಿದು ಬರುತ್ತಿರುವ ಕೆನ್ನೀರ ಹೊಳೆ ಯಂತಿರುವ ಕೆಂಪು ವರ್ಣವೂ, ಭೀಕರ ಕರಾಳ ಕತ್ತಲೆಯ ನಾಲಗೆ ಯಂತೆ ತೋರುತ್ತಿದ್ದಿತು. ಆ ಕತ್ತಲೆಯ ಆವರಣದಲ್ಲಿ ಮೆಲ್ಲನೆ ಅಲ್ಲಿ ಕುಳಿತ ವ್ಯಕ್ತಿಗಳಿಬ್ಬರು ಮುಚ್ಚಿಹೋದರು, ಕಗ್ಗತ್ತಲೆಯ ಗರ್ಭದಲ್ಲಿ ಅಡಗಿದರು.

---